# ದಲಿತ-ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಮಹಾಪ್ರಬಂಧ



ಸಂಶೋಧಕ
ಕೇಶವಮೂರ್ತಿ ಕೆ.ಆರ್.

ಮಾರ್ಗದರ್ಶಕರು
ಡಾ. ವಿ.ಎಸ್.ಬಡಿಗೇರ
ಪ್ರವಾಚಕರು





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೨

# ದಲಿತ-ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

ಕೇಶವಮೂರ್ತಿ ಕೆ.ಆರ್.

ಮಾರ್ಗದರ್ಶಕರು

ಡಾ. ವಿ.ಎಸ್.ಬಡಿಗೇರ

ಪ್ರವಾಚಕರು





ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೦೨



85



# ಪ್ರಮಾಣ ಪತ್ರ

ದಲಿತ ಬಂಡಾಯ ಕಾದಂಬರಿಗಳಲ್ಲಿ ಕೆಳಸಂಸ್ಕೃತಿಗಳ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ವಿ.ಎಸ್.ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 02-06-09.
ಸ್ಥಳ : ವಿದ್ಯಾರಣ್ಯ

ಕೇಶವ ಮೂರ್ತಿ
ಕೆ.ಆರ್. ಕೇಶವಮೂರ್ತಿ
ಸಂಶೋಧಕ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಕೆ.ಆರ್.ಕೇಶವಮೂರ್ತಿ ಇವರು ದಲಿತ ಬಂಡಾಯ ಕಾದಂಬರಿಗಳಲ್ಲಿ ಕೆಳಸಂಸ್ಕೃತಿಗಳ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 09-08-09.
ಸ್ಥಳ : ವಿದ್ಯಾರಣ್ಯ

ಡಾ. ವಿ.ಎಸ್. ಬಡಿಗೇರ
ಪ್ರವಾಚಕರು ಮತ್ತು ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಕನ್ನಡ ಎಂ.ಎ ಮುಗಿಸಿದ ನಂತರ ಸಂಶೋಧನೆ ಮಾಡಬೇಕೆಂಬ ಆಸೆ ಸದಾ ನನ್ನಲ್ಲಿ ಸುಳಿಯುತ್ತಿತ್ತು. ಅಂತಹ ಬಯಕೆಯನ್ನು ಹೊತ್ತುಕೊಂಡು ಹಂಪೆಯ ವಿದ್ಯಾರಣ್ಯಗೆ ಬಂದೆ. ಈ ನೆಲದ ಕೆಳಸಮುದಾಯದ ಬದುಕನ್ನು ಹತ್ತಿರದಿಂದ ಕಂಡ ನನಗೆ, ಇತ್ತೀಚೆಗೆ ಆ ಸಮುದಾಯಗಳ ಸಾಂಸ್ಕೃತಿಕ ಜಗತ್ತಿನಲ್ಲಾದ ಸ್ಥಿತ್ಯಂತರಗಳು ಹಾಗೂ ಎಚ್ಚರದ ಬಗೆಗೆ ಏನಾದರೂ ಸಂಶೋಧಿಸಬೇಕೆಂಬ ನನ್ನ ಬಯಕೆಯ ಪ್ರತಿಫಲವೇ **''ದಲಿತ ಬಂಡಾಯ ಕಾದಂಬರಿಗಳಲ್ಲಿ ಶ್ರಮ ಸಂಸ್ಕೃತಿಗಳ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ''** ಎಂಬ ಈ ನಿಬಂಧ. ಇದನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಂತೋಷವೆನಿಸುತ್ತದೆ.

ಈ ಪಿಎಚ್.ಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ. ಎಂ.ಎಂ. ಕಲಬುರ್ಗಿ ಹಾಗೂ ಇಂದಿನ ಕುಲಪತಿಗಳಾದ ಹೆಚ್.ಜೆ. ಲಕ್ಕಪ್ಪಗೌಡ ಅವರಿಗೆ, ಅಂದಿನ ಕುಲಸಚಿವರಾಗಿದ್ದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಹಾಗೂ ಇಂದಿನ ಕುಲಸಚಿವರಾದ ಡಾ.ಕೆ.ವಿ. ನಾರಾಯಣ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೆ,

ಸದಾ ನನ್ನ ಮನದಲ್ಲಿನ ಬಯಕೆಗಳಿಗೆ ಸ್ಪಂದಿಸಿ ವಿಷಯವನ್ನು ಸೂಚಿಸಿ ಮಾರ್ಗದರ್ಶನ ಮಾಡಿದ್ದಲ್ಲದೇ, ಖಾಸಗಿ ಬದುಕಿನಲ್ಲಿ ಪ್ರೀತಿಯ ಸಲಹೆಯನಿತ್ತು ಸಹಕರಿಸಿದ ಡಾ. ವಿ. ಎಸ್. ಬಡಿಗೇರ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುವೆ. 'ಪ್ರೀತಿ ಮತ್ತು ಒತ್ತಾಯವಿದ್ದಾಗಲೇ ಮನುಷ್ಯ ಏನು ಬೇಕಾದರೂ ಸಾಧಿಸಲು ಸಾಧ್ಯ' ಎಂದು ಅಂಬೇಡ್ಕರ್ ಒಂದೆಡೆ ಹೇಳುತ್ತಾರೆ. ಮಾರ್ಗದರ್ಶಕರ ಈ ಬಗೆಯ ಒತ್ತಾಯ ಹಾಗೂ ಪ್ರತಿಬಾರಿ ಹೋದಾಗಲೆಲ್ಲಾ ನನ್ನ ಸಾಮರ್ಥ್ಯದ ಮಟ್ಟಕ್ಕಿಳಿದು ಮಾಡುತ್ತಿದ್ದ ವಿಷಯದ ಚರ್ಚೆ. ಇವುಗಳು ನನ್ನಲ್ಲಿ ಮನೆ ಮಾಡಿಕೊಂಡಿದ್ದ ಸಂಕೋಚ ಭಾವನೆಗಳನ್ನು ಕಳಚಿ ಹಾಕಲು ಕಾರಣವಾಗಿ ಈ ಪ್ರಬಂಧ ಬರೆಯಲು ಸಾಧ್ಯವಾಗಿದೆ ಹಾಗೂ ಬದುಕಿನ ಹೊಸ ಅರ್ಥಗಳನ್ನು ಕಂಡುಕೊಳ್ಳಲು ಪ್ರೇರಕವೂ ಆಗಿದೆ.

ನನ್ನನ್ನು ಬೆಳೆಸಿ ಪೋಷಿಸಿದ ತಂದೆ ಶ್ರೀ ರಾಮಾನಾಯ್ಕ, ಮಗನ ಬಗ್ಗೆ ಅಪಾರ ಕನಸನ್ನು ಹೊತ್ತು ಸದಾ ಹಾರೈಸಿ ಇಂದಿಗೂ ಮಮತೆಯ ನೆನಪನ್ನು ಬಿಟ್ಟು ಹೋದ ಪ್ರೀತಿಯ ಅವ್ವ ದಿ. ಭನಕಿಬಾಯಿ ಅವರಿಗೆ,

ನನ್ನ ಶ್ರೆಯಸ್ಸನ್ನು ಸದಾ ಬಯಸಿ ತಾಯಿಯ ಪ್ರೀತಿಯನ್ನಿತ್ತ ಅಕ್ಕ ಶ್ರೀಮತಿ ಸರಸ್ವತಿ, ಭಾವ ಶ್ರೀ ಪಿ.ಜಿ. ನಾಯ್ಕ ಹಾಗೂ ಹಗಲೆಲ್ಲಾ ದುಡಿದು ನನ್ನ ಆರ್ಥಿಕ ಸಮಸ್ಯೆಯನ್ನು ತೂಗಿಸಿದ ಮುದ್ದು ತಮ್ಮ ಉಮೇಶ ಮತ್ತು ಅಕ್ಕರೆಯಿಂದ ಕಂಡ ಸೊಸೆ ಗೀತಾ ಉಮೇಶ್, ಪ್ರೀತಿಯ ಪುಟಾಣಿಗಳಾದ ಚೈತ್ರಾ, ಇಂದಿರಾ, ಶಿವು, ಮೇನಕ, ಪುಷ್ಪ ಸ್ಫೂರ್ತಿ, ಇಂದ್ರಕುಮಾರ ಅವರಿಗೆ,

ಸಂಶೋಧನೆಯ ಪ್ರತಿಹಂತದಲ್ಲೂ ಉಪಯುಕ್ತ ಸಲಹೆ ನೀಡಿದಲ್ಲದೆ ಹುಮ್ಮಸನ್ನು ತುಂಬಿದ ಶ್ರೀ ಎಸ್.ಆರ್. ಚನ್ನವೀರಪ್ಪ ಇವರಿಗೆ, ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾದ ಪ್ರೊ. ಎ.ವಿ. ನಾವಡ, ಡಾ. ಕೆ. ರವೀಂದ್ರನಾಥ, ಡಾ. ಎಫ್. ಟಿ. ಹಳ್ಳಿಕೇರಿ, ಡಾ. ಎಸ್.ಎಸ್. ಅಂಗಡಿ, ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ರಹಮತ್ ತರೀಕೆರೆ, ಎ.ಎಸ್. ಪ್ರಭಾಕರ್ ಅವರಿಗೆ,

ವಿದ್ಯಾ ಗುರುಗಳಾದ ಡಾ. ಮೃತ್ಯುಂಜಯ ಹೊರಕೇರಿ, ಡಾ. ಶಾಂತಿನಾಥ ದಿಬ್ಬದ, ಡಾ. ಮಲ್ಲಿಕಾಘಂಟಿ, ಡಾ. ಸಿ. ನಾಗಭೂಷಣ, ಕೆ. ಶಾರದಾ, ರುದ್ರಮುನಿ, ದಿ. ಪ್ರೊ. ಅಂಜನೇಯ ಚಿತ್ರದುರ್ಗ ಅವರಿಗೆ,

ಕರಡು ಪ್ರತಿಯನ್ನು ತಿದ್ದಿ ಸಹಕರಿಸಿದ ಮಿತ್ರರಾದ ಜಾಜೀ ದೇವೇಂದ್ರಪ್ಪ, ಸಣ್ಣಪಾಪಯ್ಯ ದೇವರಹಟ್ಟಿ, ಶಿವಕುಮಾರ್ ಜಿ. ಅವರಿಗೆ, ಗೆಳೆಯರಾದ ನಾಗಭೂಷಣ ಪಾಟೀಲ್, ನಿಂಗಪ್ಪ ಮುದೇನೂರು, ಮಾರುತಿ, ಐ.ಜೆ. ಮ್ಯಾಗೇರಿ, ರಾಜಕುಮಾರ್, ಕುಮಾರಸ್ವಾಮಿ ಬಿ., ವೆಂಕನಗೌಡ, ಸಿದ್ದನಗೌಡ ಪಾಟೀಲ್, ಶೇಕಪ್ಪ ಬಂದನ್ನವರ್, ಪಿ. ನಾಗರಾಜ, ಎನ್. ಪಂಪಾಪತಿ, ಆಂಜೀನಪ್ಪ, ಮಹೇಶ್ ಕೋಳಿ, ಜಯಣ್ಣ, ವಿನಯಕುಮಾರಿ, ಪಾರ್ವತಿ ಕೆ., ರಮೇಶ್ ಅವರಿಗೆ,

ಕಂಡಾಗಲೆಲ್ಲಾ ಅಕ್ಕರೆಯಿಂದ ಅಧ್ಯಯನದ ಪ್ರಗತಿಯನ್ನು ವಿಚಾರಿಸುತ್ತಿದ್ದ ಶ್ರೀಮತಿ ಡಿ. ಮೀನಾಕ್ಷಿ ಹಾಗೂ ಶ್ರೀಮತಿ ಅನಿತಾ ಬಡಿಗೇರ, ಅಧ್ಯಯನಕ್ಕೆ ಪೂರಕ ಗ್ರಂಥಗಳನ್ನು ನೀಡಿದ ಎಂ.ಸಿ. ಗುಡಿಮನಿ ಹಾಗೂ ಗ್ರಂಥಾಲಯದ ಎಲ್ಲಾ ಸಿಬ್ಬಂದಿ ಅವರಿಗೆ,

ಅಂದವಾಗಿ ಅಕ್ಷರ ಸಂಯೋಜನೆ ಮಾಡಿದ ಸಾವಳಗಿ ಶಿವಲಿಂಗೇಶ್ವರ ಕಂಪ್ಯೂಟರ್ಸ್‌ನ ಎ.ಎಂ. ಕೃಪಾಶಂಕರ ಅವರಿಗೆ ಹಾಗೂ ಮುದ್ದಾಗಿ ಝೆರಾಕ್ಸ್ ಹೊದಿಕೆ ಹಾಕಿಕೊಟ್ಟ ಮಹಂತೇಶ್ ಬುಕ್ ಬೈಂಡಿಂಗ್ ಧಾರವಾಡ ಅವರಿಗೆ ಪ್ರತ್ಯೇಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಗೆಳೆಯರಿಗೂ ಅನಂತ ಕೃತಜ್ಞತೆಗಳು.

**ಕೆ. ಆರ್. ಕೇಶವಮೂರ್ತಿ**

## ಪರಿವಿಡಿ

## ಅಧ್ಯಯನದ ಉದ್ದೇಶ

ಸಂಸ್ಕೃತಿ ಎಂದರೆ ಸಮುದಾಯ ಒಂದರ ಜೀವನ ಕ್ರಮ. ಬದುಕುವ ರೀತಿ. ಪ್ರತಿಯೊಂದು ಸಮುದಾಯವು ತಾನು ಬದುಕುವ ನೆಲೆಯಲ್ಲಿ ಹಲವು ಬಗೆಯ ಮಾದರಿಗಳನ್ನು ರೂಪಿಸಿಕೊಂಡಿರುತ್ತವೆ. ಇದಕ್ಕೆ ಆಂತರಿಕ ಮತ್ತು ಬಾಹ್ಯ ಒತ್ತಡಗಳ ಕಾರಣವೂ ಇರುತ್ತದೆ. ಇಂತಹ ಪರಿಣಾಮಗಳು ಸಂಸ್ಕೃತಿಯನ್ನು ಚಲನಶೀಲವಾಗಿಸುತ್ತವೆ. ಯಾಕೆಂದರೆ ಸಂಸ್ಕೃತಿ ಎನ್ನುವುದು ಸಿದ್ಧವಸ್ತುವೂ ಅಲ್ಲ, ಸ್ಥಾವರ ಸ್ವಾಭಾವದ್ದೂ ಅಲ್ಲ. ಅದು ಗತಿಶೀಲ ಗುಣವುಳ್ಳದ್ದು ಮತ್ತು ಬಹುಮುಖಿ ಆಯಾಮವುಳ್ಳದ್ದು. ಉತ್ಪಾದನಾ ಶಕ್ತಿಗಳು ಉತ್ಪಾದನಾ ಸಲಕರಣೆಗಳು ಹಾಗೂ ವಿಧಾನಗಳು ಮನುಷ್ಯ ಮನುಷ್ಯರಲ್ಲಿ ಕಂದಕಗಳನ್ನು ಸೃಷ್ಟಿಸಿವೆ. ಇಂತಹ ಬಗೆಗಳು ಹಲವು ಜೀವನ ಕ್ರಮಗಳನ್ನು ಹೊಂದಿರುವಂತೆ ಹಲವು ಸಂಸ್ಕೃತಿಗಳನ್ನೂ ಹೊಂದಿವೆ. ಆಯಾ ಚಾರಿತ್ರಿಕ ಸಂದರ್ಭಗಳಲ್ಲಿ ಪ್ರಬಲವಾಗಿದ್ದ ಜೀವನ ಕ್ರಮಗಳು ಪ್ರತಿಷ್ಠಿತ ಸಂಸ್ಕೃತಿಯು ಒಟ್ಟು ಸಮಾಜದ ಸಂಸ್ಕೃತಿಯೆಂದು ಪರಿಗಣಿತವಾಗುತ್ತದೆ. ಸಾಮಾನ್ಯವಾಗಿ ಮನುಷ್ಯನನ್ನೇ ಕೇಂದ್ರವಾಗಿಸಿಕೊಳ್ಳುವ ನಮ್ಮ ಅಧ್ಯಯನಗಳು ಆತನನ್ನು ವಿವಿಧ ಆಯಾಮಗಳ ವಿನ್ಯಾಸದಲ್ಲಿ ಅಧ್ಯಯನಕ್ಕೊಳಪಡಿಸುತ್ತಿವೆ. ಆದರೆ ಇಂತಹ ಅಧ್ಯಯನಗಳನ್ನು ಒಂದು ಸ್ವತಂತ್ರ ಅಧ್ಯಯನವೆಂದು ಪರಿಗಣಿಸಲು ಬರುವುದಿಲ್ಲ. ಯಾಕೆಂದರೆ, ಇಂತಹ ಅಧ್ಯಯನಗಳು ಒಂದು ವರ್ಗ, ವರ್ಣ, ಜಾತಿ, ಕಾಲಗಳಿಗೆ ಬದ್ಧವಾಗಿರುತ್ತವೆ. ಇವುಗಳಲ್ಲಿನ ಅತಿ ಮತ್ತು ಮಿತಿಗಳಿಂದಾಗಿ ಇವನ್ನು ಸಾಮಾನ್ಯೀಕರಿಸಲಾಗುವುದಿಲ್ಲ. ವಸಾಹತು ನವ ವಸಾಹತು ಪ್ರಭಾವ ಪ್ರೇರಣೆಗಳು ಇಂದಿನ ಜಾಗತಿಕವಾದ ರಾಜಕೀಯಾರ್ಥಿಕ ಸಂಬಂಧಗಳು ಹೊಸ ರೀತಿಯ ತಲ್ಲಣಗಳನ್ನು ಹುಟ್ಟು ಹಾಕುತ್ತಿವೆ. ಒಂದು ಹಂತದಲ್ಲಿ ಮನುಷ್ಯರಿಂದ ಮನುಷ್ಯರನ್ನು ಬೇರ್ಪಡಿಸುವ, ಕೀಳೀಕರಿಸುವ ಪ್ರವೃತ್ತಿಗಳು ಸಮಾಜದಲ್ಲಿ ಜೀವಂತವಾಗಿ ಉಳಿದುಬಂದಿದ್ದವು. ಆದರೆ ಜಾಗತೀಕರಣದ ಫಲಿತಗಳು ಇಂದು ದೇಹ ಮನುಸ್ಸುಗಳ ಮಧ್ಯೆಯೇ ವಿಕಾರಗಳನ್ನು ಭಿನ್ನತೆಗಳನ್ನು ತಂದು ಹಾಕುತ್ತಿವೆ. ನಿಸರ್ಗ ವಿಮುಖ ಸಾಮಾಜಿಕ ಬೆಳವಣಿಗೆಗಳನ್ನೂ ವಿಶ್ವಾಸರಹಿತ ಮಾನವ ಪ್ರವೃತ್ತಿಗಳನ್ನೂ ಕೇಂದ್ರೀಕೃತ ಆಕೃತಿಗಳನ್ನು ಢಾಳಾಗಿ ಬೆಳೆಸುತ್ತಿವೆ. ಆತನ ಭೋಗ ಜೀವನಕ್ಕೆ ಆಡಂಬರದ ಬದುಕಿಗೆ ಪ್ರೇರಣೆ ನೀಡುತ್ತಿವೆ. ಇಂತಹ ಸಂದರ್ಭದಲ್ಲಿ ಶ್ರಮಿಕ ವರ್ಗಗಳ ಆರ್ಥಿಕ ರಾಜಕೀಯ ಹಾಗೂ ಸಾಮಾಜಿಕ ಪುನಾರಚನಾ ಹಂಬಲಿಕೆಗಳ ಕುರಿತು ಮತ್ತೆ ಮತ್ತೆ ಚರ್ಚಿಸುವುದು ಬಹುಮುಖ್ಯವಾಗಿದೆ. ಖಾಸಗೀಕರಣ, ಉದಾರೀಕರಣ ಕಂಪ್ಯೂಟರೀಕರಣಗಳಂತಹ ಹೊಸ ನೆಲೆಗಳು ಮನುಷ್ಯನ ಅಸ್ತಿತ್ವವನ್ನೇ, ಆತನ ಸೃಷ್ಟ್ಯಾತ್ಮಕತೆಯನ್ನೇ

ಬಲಿ ತೆಗೆದುಕೊಳ್ಳುತ್ತಿವೆ. ಒಂದು ಕಾಲದಲ್ಲಿ 'ಮೈಲಕೂಲಿ'(ರಸ್ತೆ ಕೆಲಸ) ಮಾಡಿ ಬದುಕುತ್ತಿದ್ದ, ಒಡ್ಡು, ಕಟ್ಟೆ, ಕಡಿದು ಜೀವಿಸುತ್ತಿದ್ದ, ಜಲ್ಲಿ ಒಡೆದು ಸಂಜೆ ಗಂಜಿಯನ್ನು ಹುಟ್ಟಿಸಿಕೊಳ್ಳುತ್ತಿದ್ದ ಸಮುದಾಯಗಳು ಅತಿಯಾದ ಯಂತ್ರ ನಾಗರೀಕತೆಯ ಫಲವಾಗಿ ಬದುಕನ್ನೇ ಕಳೆದುಕೊಳ್ಳುತ್ತಿವೆ. ದೊಡ್ಡ ದೊಡ್ಡ ಕ್ರೇನ್‌ಗಳು, ಬುಲ್ಡೋಜರ್‌ಗಳು ಇಂಥ ಸ್ಥಾನವನ್ನು ಆಕ್ರಮಿಸಿಕೊಳ್ಳುತ್ತಿವೆ. ಪರಸ್ಪರ ಸಾಮರಸ್ಯ, ಕೊಡುಕೊಳ್ಳುವಿಕೆ, ಸಮನ್ವಯ, ಸಂಘರ್ಷ, ವೈರುಧ್ಯ ವೈವಿಧ್ಯತೆಗಳನ್ನು ಹೊಂದಿಯೂ ಸಮುದಾಯಗಳು ಸಾಂಸ್ಕೃತಿಕವಾಗಿ ಸೌಹಾರ್ದತೆಯನ್ನು ಕಾಪಾಡಿಕೊಂಡು ಬಂದಿದ್ದವು. ತಮ್ಮ ದುಡಿತ, ಜಂಜಾಟಗಳ ಮಧ್ಯೆಯೂ ಜಾತ್ರೆ, ಉತ್ಸವ, ಒಳ್ಳೆಯ, ಕೆಟ್ಟ ಸಂದರ್ಭಗಳಲ್ಲಿ ಒಟ್ಟಾಗಿ ಬೆರೆಯುತ್ತಿದ್ದರು.

ಬಹುಮುಖ್ಯವಾಗಿ ಇಂತಹ ವಿಭಿನ್ನ ದೃಷ್ಟಿಕೋನಗಳ ಪ್ರಜ್ಞೆಯಿಂದ ಕನ್ನಡ ಸಂಸ್ಕೃತಿಯೊಳಗೆ ದಲಿತ ಬಂಡಾಯ ಚಳುವಳಿಗಳು ನಡೆಸಿದ ಚಿಂತನೆಗಳನ್ನು ಕಂಡುಕೊಳ್ಳುವುದೂ ಅಲ್ಲದೇ, ಇಂತಹ ಚಳುವಳಿಗಳ ಬಗ್ಗೆ ಇದ್ದ ಆಂತರಿಕ ವೈರುಧ್ಯಗಳನ್ನು ಗುರುತಿಸುವುದು ಇಲ್ಲಿ ಬಹುಮುಖ್ಯವಾಗಿದೆ. ಇವುಗಳನ್ನು ಸಮಕಾಲೀನ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ನೆಲೆಗಳಲ್ಲಿ ಗ್ರಹಿಸುವುದು. ಈ ಗ್ರಹಿಕೆಗೆ ದಲಿತ ಬಂಡಾಯ ಕಾದಂಬರಿಗಳ ಮೂಲಕ ಮಾಡುವ ಪ್ರವೇಶ ಒಂದು ರೀತಿಯದ್ದಾದರೆ, ಶ್ರಮಿಕವರ್ಗಗಳ ನೇರ ಅನುಭವದ ಮೂಲಕ ಪ್ರವೇಶ ಮಾಡುವುದು ಇನ್ನೊಂದು ಬಗೆಯದ್ದಾಗಿದೆ. ಸಾಮಾನ್ಯವಾಗಿ ಯಾವುದೇ ಕೃತಿ ಪ್ರವೇಶಕ್ಕೆ ಎರಡು ರೀತಿಯ ದಾರಿಗಳಿರುತ್ತವೆ. ಒಂದು ಕೃತಿ ಬಗ್ಗೆ ಇದುವರೆಗೂ ಬಂದ ವಿಮರ್ಶೆಗಳ ಮೂಲಕ ಪ್ರವೇಶಿಸುವುದು. ಎರಡು ನೇರವಾಗಿ ಕೃತಿಯನ್ನೇ ಪ್ರವೇಶಿಸುವುದು. ಪೂರ್ವ ಕಲ್ಪಿತ ಪರಿಕಲ್ಪನೆಗಳ ಮೂಲಕ ಸಾಮಗ್ರಿಯ ಕಡೆಗೆ ಚಲಿಸುವ ವಿಧಾನವನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಇಂತಹ ಪೂರ್ವ ಕಲ್ಪಿತ ಪರಿಭಾಷೆಗಳಾದ ಯಜಮಾನ ಸಂಸ್ಕೃತಿ, ಉಪಸಂಸ್ಕೃತಿ, ಪ್ರತಿಸಂಸ್ಕೃತಿ, ಪರ್ಯಾಯ ಸಂಸ್ಕೃತಿ ಮುಂತಾದವು. ಆ ಮೂಲಕ ಬೇಕಾಗುವ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಯಾವುದೇ ಒಂದು ನಿರ್ದಿಷ್ಟ ಸಂಸ್ಕೃತಿಯ ಚೌಕಟ್ಟಿನಲ್ಲಿ ಸದರಿ ಅಧ್ಯಯನವನ್ನು ತುಂಬಿಕೊಡದೇ ಬಹುಸಂಸ್ಕೃತಿಗಳ ತೆಕ್ಕೆಯಲ್ಲಿ ಶ್ರಮಿಕ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಅಂದರೆ, ಸ್ಥಾಪಿತ ಸಾಂಸ್ಕೃತಿಕ ಆಕರಗಳನ್ನು ಪ್ರಶ್ನೆ ಮಾಡುವುದರ ಮೂಲಕ ಹೊಸ ಬಗೆಯ ಅಧ್ಯಯನದ ಮಾದರಿಯೊಂದನ್ನು ಅಳವಡಿಸಿಕೊಳ್ಳಲಾಗಿದೆ. ಹಲವು ರೀತಿಯ ಭಿನ್ನ ಸಂವೇದನೆಗಳನ್ನು ಅವುಗಳ ಆಂತರಿಕ ಸತ್ವದೊಂದಿಗೆ ಚಲನಶೀಲ ಪ್ರವೃತ್ತಿಗಳೊಂದಿಗೆ ಗ್ರಹಿಸಿ, ಅವುಗಳ ಆಂತರಿಕ ದ್ವಂದ್ವಗಳನ್ನು ಸಂಘರ್ಷ ಮತ್ತು ಸಾಮರಸ್ಯದ ನೆಲೆಗಳನ್ನು ಗುರುತಿಸಿಕೊಳ್ಳುವುದು ಅಧ್ಯಯನದ ಬಹುಮುಖ್ಯ ಉದ್ದೇಶ. ಹೀಗಾಗಿ ಈ ಅಧ್ಯಯನ ಏಕಮುಖವಾದ ಆಕೃತಿಗಳನ್ನು ಬಿಟ್ಟುಕೊಟ್ಟು ಕೆಳಸಮುದಾಯಗಳ

ಆಂತರಿಕ ಮತ್ತು ಬಾಹ್ಯ ಸಂಬಂಧಗಳ ವಿನ್ಯಾಸಗಳಲ್ಲಿ ವ್ಯಾಖ್ಯಾನಿಸಿ ಪುನಾರಚಿಸಿಕೊಳ್ಳುವ ವಿಧಾನವನ್ನು ಈ ಅಧ್ಯಯನದಲ್ಲಿ ಅನುಸರಿಸಲಾಗಿದೆ.

## ವ್ಯಾಪ್ತಿ

ಶ್ರಮ, ಮನುಷ್ಯನ ಅಸ್ತಿತ್ವದ ಮೂಲವಾದರೆ, ಶ್ರಮಿಕ ಸಮಾಜದ ಅಸ್ತಿತ್ವದ ಮೂಲ. ಮನುಷ್ಯ ಮತ್ತು ನಿಸರ್ಗದ ನಡುವಿನ ನಿರಂತರ ಸಂಘರ್ಷದ ಮಾಧ್ಯಮ ಶ್ರಮ. ಉತ್ಪಾದನೆ ಮತ್ತು ಉಪಭೋಗ ಮುಕ್ತವಾಗಿದ್ದ ಸಂದರ್ಭದಲ್ಲಿ ಶ್ರಮ ಸಂಸ್ಕೃತಿಯೂ ಮುಕ್ತವಾಗಿತ್ತು. ಆದರೆ ಸಾಮಾಜಿಕ ಬೆಳವಣಿಗೆಯಲ್ಲಿ ನಿಸರ್ಗ ಮತ್ತು ಶ್ರಮಿಕನ ಮಧ್ಯೆ ನಿಸರ್ಗದ ಮೇಲಿನ ಒಡೆತನವನ್ನು ಸಾರುವ ಮಧ್ಯವರ್ತಿ ಬಂದಾಗಿನಿಂದ, ಶ್ರಮಿಕ ಆರ್ಥಿಕವಾಗಿ, ದೈಹಿಕವಾಗಿ ಮಧ್ಯವರ್ತಿಯ ಅಡಿಯಾಳಾಗಬೇಕಾಯಿತು. ಆಗ ಮುಕ್ತವಾಗಿದ್ದ ಶ್ರಮ ಸಂಸ್ಕೃತಿ ಮಧ್ಯವರ್ತಿ ಸಂಸ್ಕೃತಿಯ ಅಡಿಯಾಳಾಗಬೇಕಾಯಿತು. ಸಮಾಜದ ಆರ್ಥಿಕ ಬೆಳವಣಿಗೆಯಲ್ಲಿ ಈ ಮಧ್ಯವರ್ತಿಯನ್ನು ಜಮೀನ್ದಾರ-ಬಂಡವಾಳಶಾಹಿಯೆಂದು ಗುರುತಿಸಿದರೆ, ಶ್ರಮಿಕನನ್ನು ಗುಲಾಮ-ಕಾರ್ಮಿಕ ಎಂದು ಗುರುತಿಸುತ್ತದೆ. ಸಮಾಜದಲ್ಲಿ ಮನುಷ್ಯನಿಂದಲೇ ಮನುಷ್ಯನ ಶೋಷಣೆ ಆರಂಭವಾಗಿ ಶೋಷಕ-ಶೋಷಿತ, ಶೋಷಕವರ್ಗ-ಶೋಷಿತವರ್ಗ ಎಂದು ವರ್ಗಗಳು ಸ್ಪಷ್ಟವಾಗಿ ಮೂಡಿಬಂದಿವೆ. ಜೊತೆಗೆ ಶೋಷಕ ಸಂಸ್ಕೃತಿ, ಶೋಷಿತ ಸಂಸ್ಕೃತಿಯ ಅಸ್ತಿತ್ವವನ್ನೂ ಕಾಣುತ್ತೇವೆ. ಶೋಷಕ ವರ್ಗದ ಸಂಸ್ಕೃತಿಯನ್ನು ಯಜಮಾನ ಸಂಸ್ಕೃತಿಯೆಂದೂ, ಕೆಳಜಾತಿ ಕೆಳವರ್ಗದ ಸಂಸ್ಕೃತಿಯನ್ನು ಶೋಷಿತ ಸಂಸ್ಕೃತಿಯೆಂದೂ ಅಥವಾ ಶ್ರಮ ಸಂಸ್ಕೃತಿ ಎಂದು ಹೇಳಬಹುದು.

ಇಂಥ ಶ್ರಮ ಸಂಸ್ಕೃತಿ ಶತಮಾನಗಳಿಂದಲೂ ಒಂದಲ್ಲ ಒಂದು ಬಗೆಯಿಂದ ಉದ್ದಕ್ಕೂ ಶೋಷಣೆಗೊಳಗಾಗುತ್ತಾ ಬಂದಿರುವುದು ಚಾರಿತ್ರಿಕ ಸಂಗತಿ. ಇಂಥ ಶೋಷಣೆಗೊಳಗಾದವರಿಗೆ ತಳಮಳ, ಅನಾಥಪ್ರಜ್ಞೆ ಕಾಡಿದೆ. ತಳಮಳದ ತಾಣವಾದ ಶ್ರಮಿಕನ ಮನಸ್ಸು, ತಳಮಳಕ್ಕೆ ಕಾರಣವಾದ ಮೂಲವನ್ನು ಹುಡುಕಬೇಕಾದರೆ, ತಾನು ಶೋಷಣೆಗೊಳಗಾಗುತ್ತಿರುವ ಅರಿವು ಅವನಲ್ಲಿ ಮೂಡಬೇಕಾಗುತ್ತದೆ. ಮತ್ತು ಶೋಷಣೆಯಿಂದ ಮುಕ್ತವಾಗುವ ಪರ್ಯಾಯ ಮಾರ್ಗಗಳನ್ನು ಹುಡುಕಬೇಕಾಗುತ್ತದೆ. ಇಂಥ ಚಲನೆಯಲ್ಲಿ ತೊಡಗಿಕೊಂಡ ದಲಿತ ಬಂಡಾಯ ಚಳವಳಿ ಶೋಷಕನ ವಿರುದ್ಧ ಪ್ರತಿಭಟನೆಯ ಧೋರಣೆಯನ್ನು ತಾಳಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ ವ್ಯವಸ್ಥೆಯ ಅಡಿಯಲ್ಲಿ ತುಳಿಯಲ್ಪಟ್ಟ ಕೆಳವರ್ಗದ ಮನುಷ್ಯ ದೈಹಿಕವಾಗಿ ಸದೃಢವಾಗಿದ್ದಾನೆ. ಅವನಿಗೆ ಆರ್ಥಿಕವಾಗಿ, ಮಾನಸಿಕವಾಗಿ ಧೈರ್ಯ ನೀಡುವವರಿದ್ದರೆ, ತನಗಾಗುತ್ತಿರುವ ಶೋಷಣೆಯ ವಿರುದ್ಧ ಹೋರಾಟ ಮಾಡಲು ಹಿಂಜರಿಯುವುದಿಲ್ಲ. "ಎಚ್ಚೆತ್ತ ದಲಿತನ ನಿರ್ಭಯದ ಆರ್ಭಟ ಶೋಷಕನ ತಾಯಿಯ

ಗರ್ಭವನ್ನು ಭೇದಿಸುತ್ತದೆ" ಎನ್ನುವ ಅಂಬೇಡ್ಕರರ ಈ ಮಾತು ಅರ್ಥಪೂರ್ಣವಾಗಿದೆ. ಹಾಗೆ ನೋಡಿದರೆ ಮನುಷ್ಯನ ಬದುಕು ಪ್ರಜ್ಞೆ ಮತ್ತು ಧೈರ್ಯದ ಮೇಲೆ ಕ್ರಿಯಾಶೀಲವಾಗಿದೆ. ಕೆಳವರ್ಗಗಳು ಪ್ರಜ್ಞೆ ಮತ್ತು ಧೈರ್ಯದ ಕೊರತೆಯಿಂದಲೇ ಪ್ರತಿಷ್ಠಿತ ವರ್ಗಗಳ ಮೇಲೆ ಪೂಜ್ಯತೆ ಹಾಗೂ ವಿಧೇಯತೆಗಳನ್ನು ಬೆಳೆಸಿಕೊಂಡಿವೆ.ಇದು ಅವರಲ್ಲಿ ಕೀಳರಿಮೆಗೆ ಕಾರಣವಾಗಿದೆ. ಇದನ್ನು ಸದುಪಯೋಗ ಪಡಿಸಿಕೊಂಡ ಪ್ರತಿಷ್ಠಿತ ವರ್ಗಗಳು ಕೆಳವರ್ಗದವರನ್ನು ಜೀತಗಾರನಾಗಿಯೋ ಕೂಲಿ ಯಾಳಾಗಿಯೋ ಬಳಸಿಕೊಂಡಿದ್ದು ಸತ್ಯಸಂಗತಿ. ಇದರಿಂದಾಗಿ ಕೆಳಸಂಸ್ಕೃತಿ ನ್ಯಾಯವಾಗಿ ವಿಧೇಯತೆಯ ಬದಲು ವಿನಯವನ್ನು ಪೂಜ್ಯತೆಯ ಬದಲು ಪ್ರಜ್ಞೆಯನ್ನು ಸ್ಥಾಪಿಸಬೇಕಾಗಿದೆ. ಹಾಗಾಗಿ ಈ ದೇಶದ ಪಟ್ಟಭದ್ರರೆನಿಸಿಕೊಂಡಿರುವ ಮೇಲುವರ್ಗದವರಿಂದಲೂ ಹಾಗೂ ಜಾತಿ ಸಂಕುಲರೆನಿಸಿಕೊಂಡಿರುವ ಬ್ರಾಹ್ಮಣರ ಅವಮಾನಗಳನ್ನು ತನ್ನನ್ನೇ ಅವಮಾನಿಸುತ್ತಿದೆ ಎಂದು ತಿಳಿಯುವ ದಲಿತ ಪ್ರಜ್ಞೆ ಅತ್ಯಂತ ಮಹತ್ವದ್ದಾಗಿದೆ.

ಕೆಳವರ್ಗ ಶೋಷಣೆಗೊಳಗಾಗಿಯೂ ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿದೆ. ಇವರಲ್ಲಿ ಸ್ವಾಭಿಮಾನ ಮತ್ತು ಬಡತನಗಳ ಕೂಡಿಕೆಯಿಂದ ಹುಟ್ಟಿರುವ ಪ್ರಜ್ಞೆ ಇರುವುದರಿಂದ ವರ್ತಮಾನದ ಬದುಕಿನ ಬಗ್ಗೆ ಭರವಸೆ ಇಟ್ಟು ಜೀವಂತವಾಗಿದ್ದಾರೆ. ಕೆಳವರ್ಗಗಳ ಜೀವಪರ ಹಾಗೂ ವ್ಯಕ್ತಿ ಸಮಾನತೆಗಾಗಿ ದಲಿತ ಬಂಡಾಯದ ಸಂದರ್ಭದಲ್ಲಿ ರಚನೆಗೊಂಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಇಂಥ ಧೋರಣೆಯೇ ಮುಖ್ಯ ಕಾಳಜಿಯಾಗಿದೆ. ಸಮಾಜದಲ್ಲಿ ಸರ್ವರೀತಿಯಿಂದಲೂ ಶೋಷಣೆಗೆ ಒಳಗಾಗಿರುವ ಮನುಷ್ಯನ ಬದುಕನ್ನು ಅರ್ಥವತ್ತಾಗಿ ಚಿತ್ರಿಸುವುದರ ಮುಖಾಂತರ ಈ ರೀತಿ ಶೋಷಣೆಗೆ ಒಳಗಾದ ಮನುಷ್ಯನಿಗೆ ಆತನ ಅಸ್ತಿತ್ವದ ಅರಿವನ್ನುಂಟು ಮಾಡುವುದು. ಹೀಗೆ ಈತನಲ್ಲಿ ಅರಿವು ಉಂಟು ಮಾಡಿ ಹೊಸ ಜಗತ್ತಿನ ಆಲೋಚನೆಗಳ ಜೊತೆ ಹೊಂದಿಕೊಂಡು ಹೋಗುವಂತೆ ಮಾಡುವುದು ದಲಿತ ಬಂಡಾಯ ಸಾಹಿತ್ಯದ ಮೊದಲನೆ ಕೆಲಸವಾಗಿದೆ.

ದಲಿತ-ಬಂಡಾಯ ಸಾಹಿತ್ಯ ಸಂಸ್ಕೃತಿಯು ಕವನ, ನಾಟಕ, ಕಥೆ, ಕಾದಂಬರಿಗಳ ಮೂಲಕ ಸಾಮಾನ್ಯ ಜಾಗೃತಿಯನ್ನುಂಟು ಮಾಡುವತ್ತ ಸಾಗಿದೆ. ಇಂದು ಸಂಸ್ಕೃತಿಯ ಅಧ್ಯಯನಗಳು ಹೆಚ್ಚು ಪ್ರಚಲಿತಗೊಳ್ಳುತ್ತಿರುವ ಸಂದರ್ಭದಲ್ಲಿ, ಕೆಳಸಂಸ್ಕೃತಿಗಳ ಅಧ್ಯಯನವೂ ಪ್ರಮುಖವಾಗುತ್ತಿದೆ. ಈಗಾಗಲೆ ಕೆಳಸಂಸ್ಕೃತಿಯನ್ನು ಹಲವು ಮುಖಗಳಿಂದ ಅಧ್ಯಯನ ಮಾಡಲಾಗುತ್ತಿದೆ. ಆದರೆ ಕಾದಂಬರಿಗಳ ಮೂಲಕ ಇಂತಹ ಕೆಳ ಸಮುದಾಯಗಳ ಅಧ್ಯಯನವನ್ನು ಗ್ರಾಮೀಣ ನೆಲೆಯಲ್ಲಿ ಶ್ರಮ ಸಂಸ್ಕೃತಿಯನ್ನು ಗುರುತಿಸುವ ಪ್ರಯತ್ನ ಅಷ್ಟಾಗಿ ನಡೆದಿಲ್ಲ. ಈ ದೃಷ್ಟಿಯಿಂದ ಕಾದಂಬರಿಗಳ ಮುಖೇನ ಈ ಬಗೆಯ ಅಧ್ಯಯನ ಮಾಡುವುದರಿಂದ ಕೆಳವರ್ಗಗಳ ಒಟ್ಟು ಸಂಸ್ಕೃತಿಯ ಒಳನೋಟಗಳು ತಿಳಿಯುತ್ತವೆ. ಈ

ಅರಿವಿನೊಂದಿಗೆ 'ದಲಿತ ಬಂಡಾಯ ಕಾದಂಬರಿಗಳ ಮೂಲಕ ಕೆಳಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ'ದ ತುರ್ತುಗಳ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

ಈ ಕಾದಂಬರಿಗಳ ವಸ್ತು ಪ್ರಮುಖವಾಗಿ ಗ್ರಾಮೀಣ ಪರಿಸರ. ದಲಿತ ಬಂಡಾಯ ಕಾದಂಬರಿಕಾರರು ಬೇರೆ ಬೇರೆ ಗ್ರಾಮೀಣ ಪ್ರದೇಶಗಳಿಂದ ಬಂದಿದ್ದಾರೆ. ಇಂಥ ಭಿನ್ನ ಗ್ರಾಮೀಣ ಅನುಭವಗಳಿಂದ ರಚನೆಗೊಂಡ ಇವರ ಕಾದಂಬರಿಗಳು ಭಿನ್ನವಾದ ಸಮಸ್ಯೆಗಳ ಸ್ವರೂಪವನ್ನು ಕಟ್ಟಿಕೊಡುತ್ತವೆ. ಅಲ್ಲದೇ ದಲಿತ-ಬಂಡಾಯ ಕಾದಂಬರಿಕಾರರು ಕೆಳವರ್ಗದವರೇ ಆದರೂ ಕೆಳವರ್ಗದಲ್ಲಿರುವ ಎಡ ಬಲ ಸಮುದಾಯಗಳ ಹಿನ್ನೆಲೆಯಿಂದ ಬಂದವರಾಗಿದ್ದರಿಂದ ಅವರ ಬರವಣಿಗೆಯಲ್ಲೂ, ಪರಿಸರದಲ್ಲೂ, ಪಡೆದುಕೊಂಡ ಪ್ರೇರಣೆಗಳಲ್ಲೂ ವ್ಯತ್ಯಾಸಗಳಿವೆ. ಹಾಗಾಗಿ ಇವರ ಮೂಲಕ ರಚಿತಗೊಂಡ ಕಾದಂಬರಿಗಳಲ್ಲಿ ಕೆಳವರ್ಗದ ಸಂಸ್ಕೃತಿಯ ಸ್ವರೂಪ, ಸಮಸ್ಯೆಯ ಸ್ವರೂಪ, ಹಾಗೇ ಈ ಶೋಷಿತ ಸಮುದಾಯಗಳು ಪ್ರಶ್ನಿಸುವ ಸ್ವರೂಪಗಳು ವೈವಿಧ್ಯವಾಗಿವೆ. ಈ ಎಲ್ಲ ವೈವಿಧ್ಯತೆಯನ್ನು ಕೇಂದ್ರವಾಗಿಸಿಕೊಂಡು ಈ ಅಧ್ಯಯನವನ್ನು ನಡೆಸಲಾಗಿದೆ. ಹಾಗಾಗಿ ದಲಿತ ಬಂಡಾಯ ಪಂಥದ ಎಲ್ಲಾ ಕಾದಂಬರಿಗಳು ಈ ಅಧ್ಯಯನದಲ್ಲಿ ಒಳಪಡುತ್ತಿವೆಯಾದರೂ ಅಧ್ಯಯನದ ಸೂಕ್ಷ್ಮತೆಯ ದೃಷ್ಟಿಯಿಂದ ಕೆಲವು ಪ್ರಾತಿನಿಧಿಕ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ಉಳಿದ ಕಾದಂಬರಿಕಾರರ ಕಾದಂಬರಿಗಳನ್ನು ಆಂಶಿಕವಾಗಿ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ.

## ಅಧ್ಯಯನದ ತಾತ್ವಿಕತೆ

ಸಂಸ್ಕೃತಿ ಅಧ್ಯಯನಗಳು ಹೆಚ್ಚು ಪ್ರಚಲಿತವಾಗುತ್ತಿರುವ ಈ ಹೊತ್ತಿನಲ್ಲಿ ಸಮುದಾಯಗಳು ಮತ್ತು ಅವುಗಳ ಮೌಖಿಕ ಆಕರಗಳು, ಕಲೆಗಳು, ಪ್ರಧಾನವಾಗಿ ಚರ್ಚೆಗೆ ಒಳಪಡುತ್ತಿವೆ. ಆ ಮೂಲಕ ಶ್ರಮ ಸಮುದಾಯಗಳ ಚರಿತ್ರೆಯನ್ನು ಹೊಸದಾಗಿ ಪುನಾರಚಿಸಿಕೊಳ್ಳಲಾಗುತ್ತಿದೆ. ಕಾಲಗರ್ಭದಲ್ಲಿ ಹೂತು ಹೋಗಿದ್ದ ಅವರ ಆಶೆ, ನಿರಾಸೆ, ಕಲೆ, ಸಾಹಿತ್ಯ ಮುಂತಾದ ಸಾಂಸ್ಕೃತಿಕ ಆಯಾಮಗಳನ್ನು ಹೊರ ತೆಗೆಯಲಾಗುತ್ತಿದೆ. ಈ ಅಧ್ಯಯನವು ಸಾಹಿತ್ಯಿಕ ದಾಖಲೆಗಳನ್ನು ಪ್ರಧಾನವಾಗಿ ಅವಲಂಬಿಸಿದ್ದರೂ ಕ್ಷೇತ್ರಕಾರ್ಯದ ಮೂಲಕ ಕೆಳಸಮುದಾಯಗಳ ಸಧ್ಯದ ಸ್ಥಿತಿಗತಿಗಳನ್ನು ಗಮನಿಸಿ ವಿವರಿಸಿಕೊಳ್ಳಲು ಪ್ರಯತ್ನಿಸುತ್ತದೆ. ಬರಹವನ್ನು ಅಧಿಕೃತವೆಂದು ಬಗೆಯುವ ವ್ಯವಸ್ಥೆಯಲ್ಲಿ ಬರಹದ ಮಾದರಿಗಳೇ ಪ್ರಧಾನ ಆಕರಗಳಾಗಿ ಅಧಿಕೃತತೆಯನ್ನು ಪಡೆಯುತ್ತವೆ. ಇಡೀ ದಲಿತ ಬಂಡಾಯ ಸಾಹಿತ್ಯ ಕೂಡಾ ಸಾಮೂಹಿಕ ಚಳುವಳಿ, ಬರಹಗಳ ಮೂಲಕವೇ ತನ್ನ ಸಾಂಸ್ಕೃತಿಕ ಅಗತ್ಯತೆಗಳನ್ನು ಕೊರತೆಗಳನ್ನು ತುಂಬಿಕೊಳ್ಳುತ್ತಾ ಬಂದಿದೆ. ಹೀಗಾಗಿ ಸಾಹಿತ್ಯದ ಮೂಲಕ ಸಮಸ್ಯೆಗಳ ಭಿನ್ನ ಆಯಾಮಗಳನ್ನು

ಗುರುತಿಸಲು ಪ್ರಯತ್ನಿಸಲಾಗಿದೆ. ದಲಿತ ಬಂಡಾಯ ಕಾದಂಬರಿಗಳಲ್ಲಿ ಗುರುತಿಸಲ್ಪಡುವಂತಹ ಶೋಷಿತ ಮತ್ತು ಶೋಷಕ ಸಮುದಾಯಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ.

ಆಧುನಿಕ ಉತ್ಪದನಾ ವಿಧಾನದ ಬಹುಮುಖ ಆಯಾಮಗಳು ಇಂಡಿಯಾದ ಜಾತಿರಚನೆಯ ಸ್ವರೂಪ ಮತ್ತು ಸ್ವಭಾವಗಳಲ್ಲಿ ಗತಿಶೀಲತೆಯನ್ನುಂಟು ಮಾಡಿವೆ. ಇದರ ಪರಿಣಾಮ ಕೆಳಜಾತಿಗಳು ಮತ್ತು ಆದಿವಾಸಿ ಬುಡಕಟ್ಟುಗಳು ತಮ್ಮ ಆಚರಣೆ ಮತ್ತು ಜೀವನ ವಿಧಾನಗಳಲ್ಲಿ ತೀವ್ರತರಹದ ಬದಲಾವಣೆಗಳನ್ನು ಅಳವಡಿಸಿಕೊಳ್ಳಲು ಹಂಬಲಿಸುತ್ತಿವೆ. ಸಂಸ್ಕೃತೀಕರಣದ ಬಾಗಿಲು ತಟ್ಟುತ್ತಿವೆ. ಇದಕ್ಕೆ ತದ್ವಿರುದ್ಧವಾಗಿ ಶ್ರೀಮಂತ ವರ್ಗಗಳು ಸಾಮ್ರಾಜ್ಯಶಾಹಿಗಳ ನೆರಳಿನಲ್ಲಿ ಆಧುನೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿವೆ. ಎರಡೂ ಸಮುದಾಯಗಳು ತನ್ನದಲ್ಲದ ದಾಸ್ಯಪ್ರಣೀತ ಪರಿವರ್ತನೆಗೆ ಹಂಬಲಿಸುತ್ತಿವೆ. ಆದರೂ ಪ್ರತಿಷ್ಠಿತ ವರ್ಗಗಳು ಈ ಪ್ರಕ್ರಿಯೆಯನ್ನು ಸಾಮಾಜಿಕ ಪ್ರತಿಷ್ಠೆಯನ್ನಾಗಿ ಮಾಡಿಕೊಂಡು ಹೆಡೆಯೆತ್ತಿ ನಿಲ್ಲುತ್ತವೆ. ಆದರೆ ಸಂಸ್ಕೃತೀಕರಣಕ್ಕೆ ಒಳಗಾದ ಕೆಳಸಮುದಾಯಗಳು ಅಥವಾ ಆದಿವಾಸಿ ಕುಟುಂಬಗಳು ಕೀಳರಿಮೆಯಲ್ಲಿ ಬಳಲುತ್ತಾ ತಮ್ಮ ಮೂಲ ಪ್ರವೃತ್ತಿಗಳನ್ನು ಹಪಾಹಪಿಯಲ್ಲಿ ನರಳುವಂತೆ ತೋರಿಸಲಾಗುತ್ತಿದೆ. ಉದ್ದೇಶಪೂರಿತ ವಿಸ್ಮೃತಿಯೊಂದನ್ನು ಅವುಗಳ ಮೇಲೆ ಹೇರಲಾಗುತ್ತಿದೆ. ಹೀಗಾಗಿ ಈ ವರ್ಗಗಳು ಪಡೆದುಕೊಳ್ಳುವ ಮತ್ತು ಕಳೆದುಕೊಳ್ಳುವ ಸಂದಿಗ್ಧತೆಗಳಲ್ಲಿಯೇ ಉಳಿದು ಬಿಡುವಂತಾಗುತ್ತದೆ. ಇದು ಆರ್ಥಿಕ ರಚನೆ ಮತ್ತು ಉತ್ಪಾದನಾ ವಿಧಾನಗಳ ಪ್ರಧಾನ ವೈರುಧ್ಯವೆಂದು ಕಾಣುತ್ತದೆ. ಉತ್ಪಾದನಾ ಸಂಬಂಧಗಳಿಂದ ದೂರವಾದ ಜನಸಮುದಾಯಗಳು ಸಾಮಾಜಿಕವಾಗಿ ಮೂಲೆ ಗುಂಪಾದಂತಹವು. ಇಂತಹ ವರ್ಗದಿಂದ ಬಂದ ಸಾಹಿತ್ಯಾನುಭವ ಇಲ್ಲಿನ ಆಕರ. ಇಂಥ ಜನ ವರ್ಗಗಳ ಸಾಮೂಹಿಕ ಹಾಗೂ ವೈಯುಕ್ತಿಕ ಸೃಜನಶೀಲ ಸೃಷ್ಟಿಯ ಹಿಂದಿನ ಒತ್ತಡಗಳು ಮತ್ತು ಧೋರಣೆಗಳು ಈ ಅಧ್ಯಯನದ ಪ್ರಮುಖ ಭಾಗಗಳು. ಇಂಥ ಸೃಜನಶೀಲ ಕ್ರಿಯೆಗಳು ಸ್ಥಾಪಿತ ಆಕೃತಿಗಳನ್ನು ಅನುಮಾನಿಸುವ, ಒಡೆಯುವ, ಪರ್ಯಾಯತೆಯನ್ನು ಕಟ್ಟಿಕೊಳ್ಳುವ ಬಗೆಗಳು ಅಧ್ಯಯನದ ಮುಖ್ಯ ಕಾಳಜಿಗಳು. ಆ ಮೂಲಕ ದುಡಿಯುವ ವರ್ಗಗಳು ಕಟ್ಟಿಕೊಳ್ಳುವ ಕ್ರಿಯಾಶೀಲ ವಿಮೋಚನೆಯ ಮಾರ್ಗಗಳು ಇಲ್ಲಿ ಪ್ರಧಾನವೆನಿಸುತ್ತವೆ. ಇಷ್ಟು ಎಚ್ಚರದಲ್ಲಿ ದಲಿತ ಬಂಡಾಯ ಕಾವ್ಯದಲ್ಲಿನ ಕೆಳಸಂಸ್ಕೃತಿಗಳ ಕ್ರಿಯಾಶೀಲ ಹಾಗೂ ಪರ್ಯಾಯ ನೆಲೆಗಳನ್ನು ಗುರುತಿಸಿಕೊಳ್ಳಲಾಗುತ್ತದೆ. ಅಧ್ಯಯನದ ದೃಷ್ಟಿಯಿಂದ ಈ ಕೆಳಕಂಡ ಶೀರ್ಷಿಕೆಗಳಲ್ಲಿ ವಿಷಯವನ್ನು ವಿಂಗಡಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ದಲಿತ-ಬಂಡಾಯ ಕಾದಂಬರಿಗಳ ತಾತ್ವಿಕ ಸ್ವರೂಪ ಮತ್ತು ಒಲವು-ನಿಲುವು ಕುರಿತು ಚರ್ಚಿಸಲಾಗಿದೆ. ಆ ಮೂಲಕ ದಲಿತ ಬಂಡಾಯ ಕಾದಂಬರಿಗಳ ಸ್ವರೂಪವನ್ನು ಹೇಳಲಾಗಿದೆ. ಯಾವುದೇ ಕಾದಂಬರಿಯ ಸೃಜನತೆಯು ತನಗಿಂತ ಹಿಂದಿನ ಸಾಹಿತ್ಯ, ಸಿದ್ಧಾಂತ, ಪರಿಸರ ಮುಂತಾದವುಗಳ ಪ್ರಭಾವ, ಪ್ರೇರಣೆಯನ್ನು ಪಡೆದುಕೊಂಡಿರುತ್ತದೆ. ಇವುಗಳಿಂದ ರಚನೆಗೊಂಡ ಕಾದಂಬರಿ ಓದುಗ ವರ್ಗಕ್ಕೆ ನೇರವಾಗಿಯಲ್ಲದಿದ್ದರೂ ಪರೋಕ್ಷವಾಗಿಯಾದರೂ ಪ್ರಯೋಜನವನ್ನು ನೀಡುತ್ತವೆ. ಹಾಗೆ ದಲಿತ-ಬಂಡಾಯ ಕಾದಂಬರಿಗಳ ಪ್ರಭಾವ-ಪರಂಪರೆ-ಪ್ರಯೋಜನಗಳನ್ನು ಈ ಹಿನ್ನೆಲೆಯಿಂದಲೇ ಗ್ರಹಿಸಲಾಗಿದೆ. ಒಂದು ಕಾದಂಬರಿ ರೂಪ ಪಡೆಯುವಲ್ಲಿ ತನ್ನ ಕೋಶದೊಳಗೆ ಗರ್ಭೀಕರಿಸಿಕೊಂಡಿರುವ ವಸ್ತು, ಭಾಷೆ, ತಂತ್ರಗಳು ಪ್ರಮುಖವಾಗಿರುತ್ತವೆ. ಈ ಅಂಶಗಳು ಒಂದು ಕಾದಂಬರಿಯಲ್ಲಿರುವಂತೆ ಮತ್ತೊಂದು ಕಾದಂಬರಿಗಳಲ್ಲಿ ಇರದೇ ವಿಭಿನ್ನ ರೂಪಗಳನ್ನು ಪಡೆದಿರುತ್ತವೆ. ಇಂತಹ ವಿಭಿನ್ನತೆಯನ್ನು ಗುರ್ತಿಸಿ ವಿಶ್ಲೇಷಿಸಲಾಗಿದೆ. ಜೊತೆಗೆ ದಲಿತ-ಬಂಡಾಯ ಕಾದಂಬರಿಗಳು ಸಮಕಾಲೀನ ಸಂದರ್ಭದ ಒತ್ತಾಸೆಗಳನ್ನು ಹೇಗೆ ಕಟ್ಟಿಕೊಡುತ್ತವೆ. ಈ ಒತ್ತಾಸೆಗಳಿಗೆ ಅಡ್ಡಿಯನ್ನುಂಟು ಮಾಡುವ ವ್ಯವಸ್ಥೆಯ ವಿರುದ್ಧ ಶೋಷಿತ ಸಮಾಜವನ್ನು ಅಂತರ್ಮುಖಿ ಮತ್ತು ಬಹಿರ್ಮುಖಿಯಾಗಿ ಹೋರಾಟಕ್ಕೆ ಹೇಗೆ ಸಿದ್ಧಗೊಳಿಸುತ್ತವೆ ಎಂಬುದನ್ನು ಗುರ್ತಿಸಿ ವಿಶ್ಲೇಷಣೆಗೊಳಪಡಿಸಿಕೊಳ್ಳಲಾಗಿದೆ.

ಮೂರನೆ ಅಧ್ಯಾಯದಲ್ಲಿ ದಲಿತೀಯ ಕಾದಂಬರಿಗಳು ಹಾಗೂ ಕಾದಂಬರಿಕಾರರು ಮತ್ತು ದಲಿತೇತರ ಕಾದಂಬರಿಗಳು ಹಾಗೂ ಕಾದಂಬರಿಕಾರರನ್ನು ಕುರಿತು ಚರ್ಚಿಸಲಾಗಿದೆ. ಮತ್ತು ಈ ಎರಡೂ ಸಂವೇದನೆಗಳ ಮಧ್ಯದ ತಾತ್ವಿಕ ಭಿನ್ನತೆಗಳನ್ನು ಪ್ರಾತಿನಿಧಿಕ ದಲಿತ ಬಂಡಾಯ ಕಾದಂಬರಿಗಳು ಹಾಗೂ ಕಾದಂಬರಿಕಾರರು ಎಂಬ ಶೀರ್ಷಿಕೆಯಲ್ಲಿ ಗುರುತಿಸಲಾಗಿದೆ. ಈಗಾಗಲೇ ಕನ್ನಡ ಸಾಹಿತ್ಯ ವಿಮರ್ಶಕ ವರ್ಗ ಇವುಗಳ ನಡುವಿನ ವ್ಯತ್ಯಾಸವನ್ನೂ ಗುರುತಿಸಿ ಪರಿಚಯಿಸಿದೆ. ಆದರೂ ನನ್ನ ಅಧ್ಯಯನದ ಹಿನ್ನಲೆಯಲ್ಲಿ ಈ ಎರಡೂ ಪಂಥದ ಕಾದಂಬರಿಗಳು ಹಾಗೂ ಕಾದಂಬರಿಕಾರರು ಪ್ರಮುಖವಾಗುತ್ತಾರೆ. ಹೀಗಾಗಿ ಈ ಎರಡೂ ಪಂಥಗಳನ್ನು ತಾತ್ವಿಕವಾಗಿ ಚರ್ಚಿಸಿ, ವಿವೇಚಿಸಿ ಕೊಳ್ಳಲಾಗಿದೆ.

ಪ್ರಬಂಧದ ಶೀರ್ಷಿಕೆಯಾದ 'ದಲಿತ-ಬಂಡಾಯ ಕಾದಂಬರಿಗಳಲ್ಲಿ ಶ್ರಮಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟ'ವನ್ನು ಕುರಿತು ನಾಲ್ಕನೆಯ ಅಧ್ಯಾಯದಲ್ಲಿ ಸಾದ್ಯಂತವಾಗಿ ಚರ್ಚಿಸಲಾಗಿದೆ. ದಲಿತ-ಬಂಡಾಯ ಕಾದಂಬರಿಗಳಲ್ಲಿ ಪ್ರಜ್ಞೆ ಹಾಗೂ ಪರ್ಯಾಯಗಳ ಹುಡುಕಾಟ ಶೀರ್ಷಿಕೆಯನ್ನು ಕೇಂದ್ರವಾಗಿಸಿಕೊಂಡು ಆ ಮೂಲಕ ಸಾಮಾಜಿಕ ಸಮಸ್ಯೆಗಳ ನಡುವೆ ಕೆಳವರ್ಗಗಳ ಬದುಕನ್ನು ಚಿತ್ರಿಸುವ ಪ್ರಯತ್ನ ಮಾಡಲಾಗಿದೆ. ಕೆಳವರ್ಗ ವ್ಯವಸ್ಥೆಯ ಅಡಿಯಲ್ಲಿ ಸಿಕ್ಕು ಶೋಷಣೆಗೆ

ಕಾರಣವಾಗುವ ಅಂಶಗಳಾದ ಆರ್ಥಿಕ ಸಮಸ್ಯೆ, ರಾಜಕೀಯ ಸಮಸ್ಯೆ, ಸಾಮಾಜಿಕ ಸಮಸ್ಯೆಗಳನ್ನು ಹಾಗೂ ಇಂಥ ಸಮಸ್ಯೆಗಳಿಗೆ ಕೆಳವರ್ಗ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳುವ ಬಗೆಯನ್ನು 'ಗ್ರಾಮೀಣ ಬದುಕಿನ ಸಮಸ್ಯೆಗಳು ಹಾಗೂ ಸ್ಥಿತ್ಯಂತರಗಳು' ಎಂಬಲ್ಲಿ ವಿಶ್ಲೇಷಿಸಿ ವಿವರಿಸಲಾಗಿದೆ. ಇಂಥ ಸಮಸ್ಯೆಗಳುಂಟಾಗಲು ಕಾರಣವಾದ ವ್ಯವಸ್ಥೆಯ ವಿರುದ್ಧ ಕೆಳವರ್ಗಗಳು ರಚನಾತ್ಮಕವಾಗಿ ಹೋರಾಡುವ ರೀತಿಯನ್ನು ಪ್ರತಿಭಟನೆಯ ಸ್ವರೂಪದಲ್ಲಿಯೂ, ಕೆಳವರ್ಗಗಳು ವ್ಯಕ್ತಿ ಸಮಾನತೆಗಾಗಿ ಹಂಬಲಿಸುವುದನ್ನು 'ಮನುಷ್ಯನ ಹುಡುಕಾಟದ ನೆಲೆಗಳ'ಲ್ಲಿಯೂ, ಮತ್ತು ವ್ಯಕ್ತಿ ಹಾಗೂ ಪ್ರಕೃತಿಗಳ ಸಂಬಂಧಗಳಿಂದುಟಾಗುವ ಸಂಸ್ಕೃತಿಯನ್ನು 'ಪ್ರಕೃತಿ ಹಾಗೂ ಸಂಸ್ಕೃತಿ' ಶೀರ್ಷಿಕೆ ಎಂಬ ಅಡಿಯಲ್ಲಿ ಚರ್ಚೆಗೊಳಪಡಿಸಲಾಗಿದೆ. ಈ ಎಲ್ಲಾ ಚರ್ಚೆಗಳಿಗೂ ಆಯ್ದ ದಲಿತ-ಬಂಡಾಯ ಕಾದಂಬರಿಗಳ ತಾತ್ವಿಕ ಹಿನ್ನೆಲೆಯನ್ನು ಮುಖ್ಯವಾಗಿಟ್ಟುಕೊಳ್ಳಲಾಗಿದೆ. ಪ್ರತಿ ಪಾತ್ರಗಳ ಮೂಲಕ ಅವು ಕಟ್ಟಿಕೊಳ್ಳುವ ಸಾಮಾಜಿಕ ಹಾಗೂ ಸಾಮೂಹಿಕ ಜಾಗೃತಿಯನ್ನು ಜವಾಬ್ದಾರಿಯನ್ನು ವಿವರಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಅಧ್ಯಯನದ ಮುಖ್ಯಾಂಶಗಳನ್ನು ದಾಖಲಿಸಲಾಗಿದೆ. ಇಡೀ ಅಧ್ಯಯನದ ಫಲಿತಗಳನ್ನು ತಾತ್ವಿಕವಾದ ಚೌಕಟ್ಟಿನಲ್ಲಿಟ್ಟು ಅದರ ಇತಿ-ಮಿತಿಗಳನ್ನು ಕಂಡುಕೊಳ್ಳಲಾಗಿದೆ. ಇದು ಇಡೀ ಪ್ರಬಂಧವನ್ನು ಆಮೂಲಾಗ್ರವಾಗಿ ಪುನರಾವಲೋಕನ ಮಾಡಲು ಅನುವು ಮಾಡಿಕೊಟ್ಟಿದೆ. ಕೆಳವರ್ಗಗಳು ಕಾಲದ ಒತ್ತಡಗಳಲ್ಲಿ ತನ್ನನ್ನು ತಾನು ತನ್ನೊಳಗಿಂದಲೇ ಸೃಷ್ಟ್ಯಾತ್ಮಕವಾಗಿಸಿಕೊಂಡ ತನ್ನ ಸುತ್ತಲಿನ ಅಮಾನುಷ ಪರಿಸರಕ್ಕೆ ಆ ಮೂಲಕ ಪ್ರತಿರೋಧ ತೋರಿದ ಹೊಸ ಲೋಕ ಹುಡುಕಿಕೊಂಡ ಗುಣಾತ್ಮಕ ಬೆಳವಣಿಗೆಯನ್ನು ಕಂಡುಕೊಳ್ಳಲಾಗಿದೆ.

ಶತಮಾನಗಳಿಂದ ಶೋಷಣೆಗೊಳಗಾದ ಕೆಳವರ್ಗಗಳು ಪ್ರತಿಷ್ಠಿತ ವ್ಯವಸ್ಥೆಯ ಅಡಿಯಲ್ಲಿ ಸಿಕ್ಕು ನರಳುತ್ತಾ ಬಂದಿವೆ. ಆಧುನಿಕ ಶಿಕ್ಷಣ ಪದ್ಧತಿಯಿಂದಾಗಿ ಇದುವರೆಗೂ ಶಿಕ್ಷಣದಿಂದ ವಂಚಿತರಾಗಿದ್ದವರಿಗೆ ಶಿಕ್ಷಣ ದೊರೆತು ತಮ್ಮ ಸಮಸ್ಯೆಗಳ ವಿರುದ್ಧ ಧ್ವನಿ ಎತ್ತಲು, ಮಾತಾಡಲೂ ಸಾಧ್ಯವಾಯಿತು. ಮೇಲುಜಾತಿ, ವರ್ಗಗಳ ಜನರು ತಮ್ಮ ಮೇಲೆ ಹೇರಿದ್ದ ನಿರ್ಬಂಧಗಳ ವಿರುದ್ಧ ಹೋರಾಡಲು ಪ್ರಾರಂಭಿಸಿದ್ದು ಈ ಸಂದರ್ಭದಲ್ಲಿಯೇ. ಇದಕ್ಕೆ ಪೂರಕವಾಗಿ ಪ್ರಧಾನ ಸಂಸ್ಕೃತಿ ದಲಿತ ಸಂಸ್ಕೃತಿಯನ್ನು, ಮೂಲೆಗುಂಪು ಮಾಡಿದುದರ ವಿರುದ್ಧವೂ ಪ್ರತಿಭಟನೆ ಆರಂಭಗೊಂಡಿತು. ಅವರು ಒಪ್ಪಿಕೊಂಡು ಬಂದ ಜೀವನ ವಿಧಾನಗಳನ್ನು ಸಮರ್ಥಿಸುವ, ಅನಾದಿ ಕಾಲದಿಂದಲೂ ರಕ್ಷಿಸಿಕೊಂಡು ಬಂದಿದ್ದ ತಮ್ಮ ಸಂಸ್ಕೃತಿಯನ್ನು ಪುನರ್ ರೂಪಿಸಿಕೊಳ್ಳುವ ಗಂಭೀರ ಪ್ರಯತ್ನಗಳು ರೂಪಗೊಂಡವು. ಸಾಹಿತ್ಯದಲ್ಲಿ ಅದನ್ನು ದಾಖಲಿಸುವ ಪ್ರಯತ್ನಗಳು ಈ ಕಾಲದಲ್ಲಿ ನಡೆದವು.

ಇಂಥ ಕ್ರಿಯಾಶೀಲ ಸಾಹಿತ್ಯ ಸಂಸ್ಕೃತಿಯು ದಲಿತ ಬಂಡಾಯ ಸಾಹಿತ್ಯ ಚಳುವಳಿಯ ಪರಂಪರೆಯಾಗಿದೆ. ಬಂಡಾಯ ಸಾಹಿತ್ಯವು ದೀನ ದುರ್ಬಲರ ಏಳಿಗೆಗಾಗಿ, ಊಳಿಗಮಾನ್ಯ ವ್ಯವಸ್ಥೆ, ಬಂಡವಾಳಶಾಹಿ ವ್ಯವಸ್ಥೆ, ವರ್ಗ ಸಂಘರ್ಷ, ಜಾತಿ ಭೇದ ಮುಂತಾದ ಸಾಮಾಜಿಕ ಅಸಮತೋಲನಗಳ ವಿರುದ್ಧ ಸಿಡಿದೆದ್ದು ಒಂದು ತಾತ್ವಿಕ ಚೌಕಟ್ಟನ್ನು ನಿರ್ಮಿಸಿಕೊಂಡಿತು. ಆ ಮೂಲಕ ಸಾಹಿತ್ಯ ಎಲ್ಲ ಪ್ರಕಾರಗಳಲ್ಲಿ ಕ್ರಿಯಾಶೀಲಗೊಳ್ಳಲು ಕಾರಣವಾಯಿತು. ದಲಿತ-ಬಂಡಾಯ ಸಾಹಿತ್ಯದ ಪ್ರಣಾಳಿಕೆಯಲ್ಲಿ ಹೀಗೆ ಹೇಳಲಾಗಿದೆ.

"ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಕಂಡು ಬರುತ್ತಿರುವ ಪ್ರಗತಿಪರ ಧೋರಣೆಗಳು ತೆಗೆದುಕೊಂಡ ತಿರುವುಗಳು, ಎದುರಿಸಿದ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ, ಅಗತ್ಯ ಎಷ್ಟುಂಬುದು ಗೊತ್ತಾಗುತ್ತದೆ. ಒಕ್ಕೂಟ, ಪ್ರಗತಿ-ಪಂಥಗಳ ಸಾಫಲ್ಯ-ವೈಫಲ್ಯಗಳ ದಾಖಲೆ ನಮಗೊಂದು ಎಚ್ಚರದ ಸಂಗತಿಯೂ ಆಗಿದೆ. ನಮ್ಮ ದೇಶದ ಚಾರಿತ್ರಿಕ, ರಾಜಕೀಯ ಬೆಳವಣಿಗೆಗಳ ಸ್ವರೂಪದಿಂದಾಗಿ ಉದ್ಭವಿಸಿದ ಇಂದಿನ ವಿಶಿಷ್ಟ ಸಂದರ್ಭದ ಹಿನ್ನಲೆಯಲ್ಲಿ ನಮ್ಮ ಹೋರಾಟದ ನೆಲೆಗಳನ್ನು ಕಂಡುಕೊಳ್ಳಬೇಕಾಗಿದೆ. ಜನವಿರೋಧಿ ನಿಲುವುಗಳು ವಿವಿಧ ಮುಖವಾಡಗಳ ಮರೆಯಲ್ಲಿ ಒಂದಾಗಿ ವಿಜೃಂಭಿಸುತ್ತಿರುವ ಈ ಸಂದರ್ಭ, ಪ್ರಗತಿಪರ ಧೋರಣೆಯು ಎಲ್ಲರಿಗೂ ಒಂದು ಸವಾಲು. ಈ ಸವಾಲಿಗೆ ನಮ್ಮ ಉತ್ತರ; ಎಲ್ಲ ವಾಮಪಂಥೀಯರ

ಸಂಘಟನೆ. ಮತ್ತೂ ಸ್ಪಷ್ಟಪಡಿಸುವುದಾದರೆ, ಸಮಕಾಲೀನ ಚರಿತ್ರೆಯ ಬೆಳವಣಿಗೆಯ ಸ್ವರೂಪದಿಂದಾಗಿ ಎಲ್ಲ ವಾಮಪಂಥೀಯರ ಸಾಂಸ್ಕೃತಿಕ ಒಗ್ಗಟ್ಟು ಈಗ ಅತ್ಯಂತ ಮುಖ್ಯವಾದದ್ದು. ಈ ದಿಕ್ಕಿನಲ್ಲಿ ಬಂಡಾಯ ಸಾಹಿತ್ಯ ಚಳುವಳಿಯು ಕನ್ನಡ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅತ್ಯಂತ ವ್ಯಾಪಕವಾಗಿ ಹಬ್ಬುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು ನಮ್ಮ ಮುಖ್ಯ ಗುರಿಗಳಲ್ಲೊಂದಾಗಬೇಕು. ನಮ್ಮ ಹೋರಾಟ ಪ್ರಧಾನವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು; ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟಿದ್ದು. ಸಾಹಿತಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು, ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ನಮ್ಮ ಬೆಂಬಲ. ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆ".[೧]

ಇಂಥ ಹೋರಾಟದ ದಾಖಲೆಯೊಂದಿಗೆ ದಲಿತ ಬಂಡಾಯ ಕಾದಂಬರಿಗಳು ಸೈದ್ಧಾಂತಿಕವಾಗಿ ಮತ್ತು ತಾತ್ವಿಕವಾಗಿ ಪ್ರಮುಖ ಸ್ವರೂಪ ಲಕ್ಷಣಗಳನ್ನು ಹೊಂದಿದೆ. ಈ ಪ್ರಣಾಳಿಕೆಯಲ್ಲಿ ದೇಶದ ರಾಜಕೀಯ ಬೆಳವಣಿಗೆಯ ಪರಿಣಾಮ, ಎಡಪಂಥೀಯ ಒಲವು, ಶೋಷಿತರ ಪರವಾದ ಹೋರಾಟ, ಅಸ್ಪೃಶ್ಯತೆ, ಜಾತಿ ಪದ್ಧತಿ ಮತ್ತು ಲಿಂಗತಾರತಮ್ಯಗಳ ವಿರುದ್ಧ ಧ್ವನಿ ಎತ್ತುವ ಧಾಟಿ ಇದನ್ನೆಲ್ಲ ಇಲ್ಲಿ ಒತ್ತಿ ಹೇಳಲಾಗಿದೆ. ಈ ಎಲ್ಲಾ ಧ್ವನಿಗಳು ಮೂಲತಃ ಸಮಾನ ಸಮಾಜಕ್ಕೆ ಹಂಬಲಿಸಿವೆ. ಇದರಿಂದಾಗಿ ತನ್ನ ಇಂಥ ಧೋರಣೆಯನ್ನು ಪ್ರಚಾರವಾಗಿಸಲು ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಬಳಸಿಕೊಂಡಿದೆ. ಕಾದಂಬರಿ ಪ್ರಕಾರವು ಕೆಳವರ್ಗದವರ ಬದುಕನ್ನು ದಾಖಲಿಸುತ್ತಾ ಪ್ರತಿಷ್ಠಿತ ವರ್ಗಗಳ ಶೋಷಣೆಯ ಹಲವು ಮುಖಗಳನ್ನು ಬಯಲುಗೊಳಿಸುತ್ತದೆ. ಆ ಮೂಲಕ ಶೋಷಕನಿಗೆ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯ ಧೋರಣೆಯನ್ನು ತಾಳುತ್ತದೆ. ಕೆಳವರ್ಗಗಳು ಪ್ರತಿಭಟಿಸುವ ಧೋರಣೆಯು ಕೆಲವೊಮ್ಮೆ ರೋಷ, ಸಿಟ್ಟಿನಿಂದ ಸಿಡಿದಿದ್ದರೆ, ಕೆಲವು ಕಾದಂಬರಿಗಳಲ್ಲಿ ಯಾವ ಆಕ್ರೋಶವಿಲ್ಲದೆ ವಿಡಂಬನೆ, ವ್ಯಂಗ್ಯ, ಕಟಕಿ ಮಾಡುವುದರ ಮೂಲಕ ತಣ್ಣಗಿನ ಪ್ರತಿಭಟನೆ ವ್ಯಕ್ತಪಡಿಸುತ್ತವೆ."ಮನುಷ್ಯ ಮನುಷ್ಯರ ನಡುವಿನ ಕಲ್ಲಿನ ಕೋಟೆ ಕಟ್ಟುವ, ಅಮಾನವೀಯ ಬದುಕನ್ನು ಹಸನುಗೊಳಿಸುವ ಆಕಾಂಕ್ಷೆ ಬಂಡಾಯ ಸಾಹಿತ್ಯದ ಬೆನ್ನೆಲುಬು. ಈ ಆಕಾಂಕ್ಷೆ ಹೊತ್ತ ವ್ಯವಸ್ಥೆಯ ವಿರೋಧಿ ಆಶಯಗಳ ಅಭಿವ್ಯಕ್ತಿಯೇ ನಮ್ಮ ಸೃಜನಶೀಲತೆಯ ಮುಖ್ಯ ಕಾಳಜಿ"[೨]

ಆಗಿದೆ ಎಂದು ಬರಗೂರರು ಅಭಿಪ್ರಾಯ ಪಡುತ್ತಾರೆ. ಇದೇ ಅರ್ಥದಲ್ಲಿ ಕಾದಂಬರಿಯ ತಾತ್ವಿಕತೆಗೆ ಅರ್ಥ ಬರುವಂತೆ ಬಂಡಾಯದ ಸೈದ್ಧಾಂತಿಕರಲ್ಲಿ ಒಬ್ಬರಾದ ಜಿ.ರಾಮಕೃಷ್ಣ ಅವರ ಮಾತುಗಳಲ್ಲಿ ಅದು ಖಚಿತವಾಗಿ ಗೋಚರಿಸಿದೆ.

"ಸಾಹಿತ್ಯವೂ ಒಂದು ಕಲೆ, ಅದು ಕೇವಲ ಹೇಳಿಕೆಯಲ್ಲ ಎಂಬುದನ್ನು ಮನನ ಮಾಡಿಕೊಳ್ಳಬೇಕು. ಬಂಡಾಯ ಸಾಹಿತ್ಯದಲ್ಲಿಯೂ ಕಲಾತ್ಮಕ ಚಿತ್ರಣಕ್ಕೆ ಮಹತ್ವದ ಸ್ಥಾನವಿರಲೇ ಬೇಕು. ಕೇವಲ ಉದ್ವೇಗದಿಂದ ಸಾಹಿತ್ಯದ ಸೃಷ್ಟಿಯಾಗುವುದಿಲ್ಲ. ಕೆಂಪು ಮುದ್ರೆ ಧರಿಸಿಕೊಂಡು, ಕೆಂಬಾವುಟ ಹಿಡಿದು ಸಾಮೂಹಿಕ ಕೃಷಿಕ್ಷೇತ್ರದ ಕೆಲಸಗಾರರಂತೆ ಮೂವತ್ತು ಜನ ರಂಗಸ್ಥಳಕ್ಕೆ ಬಂದ ಮಾತ್ರಕ್ಕೆ ಅದು ಬಂಡಾಯ ನಾಟಕವಾಗುವುದಿಲ್ಲ. ಇಂದಿನ ನಿಕಟ ಪರಿಸ್ಥಿತಿಯ ಹೀನತೆಯನ್ನು ಸೂಚಿಸಿ, ಅದರಿಂದ ವಿಮುಕ್ತಿ ಹೇಗೆ ಎಂಬುದನ್ನು ಘಟನೆ, ಪ್ರತಿಮೆ, ಕೃತಿ, ರೂಪಕ, ಇತ್ಯಾದಿಗಳಿಂದ ನಿರೂಪಿಸುವುದು ಬಂಡಾಯ ಕಲೆಯ ಮಾರ್ಗ, ವಿಷಯ ಲಂಪಟರನ್ನು, ಬಂಡವಾಳಿಗರ ಸುಖಲೋಲುಪತೆಯನ್ನು, ಸಾಂಪ್ರದಾಯಿಕ ಸಂಸ್ಕೃತಿಯ ಆರಾಧಕರಾದ ಬುದ್ಧಿಜೀವಿಗಳನ್ನು ಜರೆದು ಖಾರವಾದ ನಾಲ್ಕು ಮಾತು ಹೇಳಿದ ಮಾತ್ರಕ್ಕೂ ಅದು ಬಂಡಾಯ ಸಾಹಿತ್ಯವಾಗದೆ ಹೋಗಲು ಸಾಧ್ಯ. ಮಾನವನ ವ್ಯಕ್ತಿತ್ವದ ಸೊಗಸು, ಅದರ ವಿಕಾಸಕ್ಕಿರುವ ಅಡ್ಡಿ ಅದರ ನಿವಾರಣೆಯ ವಿಧಾನ-ಇವು ಬಂಡಾಯ ಸಾಹಿತ್ಯದ ರೂಪರೇಷೆಯನ್ನು ಒದಗಿಸುತ್ತದೆ."[೩]

ಇಂಥ ಘೋಷಿತ ನಿಲುವುಗಳು ಕಾದಂಬರಿ ಪ್ರಕಾರಗಳಲ್ಲಿ ಮೂಡಿವೆ. ಆದರೆ ಇಂಥ ನಿಲುವುಗಳು ಒಟ್ಟಾರೆಯಾಗಿ ಕಾಣಿಸಿಕೊಳ್ಳದೇ ಬೇರೆ ಬೇರೆ ಸ್ತರಗಳಲ್ಲಿ ದಲಿತ-ಬಂಡಾಯ ಕಾದಂಬರಿಗಳಲ್ಲಿ ಅನಾವರಣ ಗೊಂಡಿವೆ.

"ದಲಿತ ತನ್ನ ಅಧೋಗತಿಯ ಕಾರಣಗಳನ್ನು ತಿಳಿದು ಸವರ್ಣೀಯರ ದಬ್ಬಾಳಿಕೆಯ ತಳಮಳ ತಾಳಲಾರದೆ ಬರೆಯುವಾಗ ಕ್ರೋಧ, ಆವೇಶ ಹಾಗೂ ಆಕ್ರೋಶಗಳು ಶಬ್ದರೂಪ ತಾಳುತ್ತವೆ. ಹೀಗೆ ಈ ಶಬ್ದ ರೂಪಗಳು ದಲಿತ ಸಾಹಿತ್ಯ ದಲಿತ ಲೋಕದ ಬದುಕು-ಬವಣೆಗಳನ್ನು ಒಳಗೊಂಡಿರಬೇಕು. ದಲಿತರ ಬದುಕಿಗೆ ಬಂಧನವಾಗಿರುವ ಅಸ್ಪೃಶ್ಯತೆ, ಅವಮಾನಗಳು, ಅತ್ಯಾಚಾರಗಳು ತಲೆ-ತಲೆಮಾರುಗಳಿಂದ ನಡೆದು ಬಂದ ಧಾರ್ಮಿಕ, ಸಾಮಾಜಿಕ ಅಸಹ್ಯ ಪದ್ಧತಿಗಳು ಸಾಹಿತ್ಯದಲ್ಲಿ ಚಿತ್ರಿತಗೊಳ್ಳಬೇಕು. ದಲಿತನು ತಾನು ಅನುಭವಿಸಿದ ನೋವುಗಳು ಸಾಮಾಜಿಕ ಸಂಘರ್ಷವೊಂದಕ್ಕೆ ಪ್ರೇರಣೆಯಾಗುವುದು ಈ ಸಾಹಿತ್ಯದ ಮುಖ್ಯ ಲಕ್ಷಣವೆನಿಸುತ್ತದೆ."[೪]

ದಲಿತ ಸಾಹಿತ್ಯ ಚಳವಳಿಗೆ ಅಂಬೇಡ್ಕರ್ ವಿಚಾರವಾದವು ಮೂಲ ಸೆಲೆಯಾಗಿದೆ. ಸ್ವಾತಂತ್ರ್ಯ ಸಮಾನತೆ, ಸೋದರತ್ವ, ವರ್ಗರಹಿತ, ವರ್ಣರಹಿತ ಪ್ರಜಾಸತ್ತೆಯ ಸಮಾಜವಾದ ಇವು ಅಂಬೇಡ್ಕರ್

ವಾದದ ಸೂತ್ರಗಳು. ಇವು ದಲಿತ ಸಾಹಿತ್ಯದ ಮಾರ್ಗದರ್ಶಕ ತತ್ವಗಳು ಕೂಡ. ಜೊತೆಗೆ ಅಂಬೇಡ್ಕರ್ ಸಿದ್ಧಾಂತವಾದ ಶಿಕ್ಷಣ-ಸಂಘಟನೆ-ಹೋರಾಟತತ್ವಗಳು ದಲಿತ ಕಾದಂಬರಿಗಳಲ್ಲಿ ರೂಪ ಪಡೆದಿವೆ. ಈ ಕಾದಂಬರಿಗಳು ಮೂಲತಃ ದಲಿತರ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವುದರಿಂದ ಸಮುದಾಯದ ಅಧ್ಯಯನ ದೃಷ್ಟಿಯಿಂದ ತುಂಬಾ ಮಹತ್ವದ ವಿಚಾರಗಳನ್ನು ತಿಳಿಸಿಕೊಡುತ್ತವೆ. ತನಗಿಂತ ಮೇಲ್ಜಾತಿ, ಮೇಲ್ವರ್ಗಗಳಿಂದಲೂ ಅವಮಾನಿತರಾದವರನ್ನು ಹೊಸ ಬದುಕಿನತ್ತ ತರುವಲ್ಲಿ ದಲಿತ ಸಾಹಿತ್ಯದಿಂದಲೇ ಸಾಧ್ಯವಾಗುತ್ತದೆ. ಇದನ್ನು ಅನಂತಮೂರ್ತಿಯವರು ಸರಿಯಾಗಿಯೇ ಗುರುತಿಸಿದ್ದಾರೆ. ''ಒಬ್ಬ ಅವಮಾನಿತ ವ್ಯಕ್ತಿ ಸ್ವಾಭಿಮಾನಿಯೂ ಆದಾಗ ಹುಟ್ಟುವ ಸಾಹಿತ್ಯಕ್ಕೆ ಒಂದು ಗುಣವಿರುತ್ತದೆ. ಅದನ್ನು ನಾವು ಪ್ರಪಂಚದ ಎಲ್ಲ ಕಡೆಯೂ ಪ್ರತಿಭಟನಾ ಸಾಹಿತ್ಯವೆಂದು ಕಾಣುತ್ತೇವೆ. ಹೀಗೆ ಅವಮಾನಿತ ಸ್ವಾಭಿಮಾನಿಯಾದವನು ಅಸ್ಪೃಶ್ಯನೂ ಆಗಿದ್ದಲ್ಲಿ ನಮ್ಮ ದಲಿತ ಸಾಹಿತ್ಯ ಹುಟ್ಟಿ ಬರುತ್ತದೆ. ಆದ್ದರಿಂದ ಅವಮಾನಿತರ ಜಾಗತಿಕ ಸಾಹಿತ್ಯದ ನಡುವೆ ಈ ಸಾಹಿತ್ಯಕ್ಕೊಂದು ಸ್ಪಷ್ಟರೂಪವಿರುತ್ತದೆ.''[೫] ಹೀಗಾಗಿ ದಲಿತ ಸಾಹಿತ್ಯವು ಪ್ರಮುಖವಾಗಿ ದಲಿತ ಸಂವೇದನೆಯೇ ಆಗುತ್ತದೆ. ಅಸ್ಪೃಶ್ಯ ವರ್ಗದಿಂದ ಬಂದ ದೇವನೂರು ಮಹಾದೇವ ಅವರು ಈ ಸಾಹಿತ್ಯ ಅನನ್ಯತೆಯ ರೂಪವನ್ನು ಪ್ರತ್ಯೇಕವಾದ ಪರಿಭಾಷೆಯಲ್ಲಿ ಹೇಳುತ್ತಾರೆ.

''ನಾನು ಅಂಥ ಕತ್ತಲ ರಾಜ್ಯದಿಂದ ಬಂದಂಥವನು, ಕಲಾ ಮಾಧ್ಯಮದಲ್ಲಿ ನಾನು ಕಂಡುಕೊಳ್ಳುತ್ತಿರುವುದು ಒಂದು ಆಕಸ್ಮಿಕವೇ. ನಾನು ಇದುವರೆಗೆ ಬರೆದಿರುವುದು ನಮ್ಮ ರಾಜ್ಯದ ಮನುಷ್ಯನ ಆರೇಳು ಬೆರಳುಗಳು ಹೆಚ್ಚೆಂದರೆ, ಒಂದು ಹಸ್ತ ಇದ್ದೀತು. ಅದಷ್ಟೇ ಕನ್ನಡ ಸಾಹಿತ್ಯದ ಗತಿಯನ್ನು ಅಲ್ಲಾಡಿಸುವಲ್ಲಿ ತನ್ನ ಪ್ರಮಾಣಕ್ಕಿಂತ ಹೆಚ್ಚಾಗಿ ಅಲ್ಲಾಡಿಸಿದೆ. ಒಂದೆರಡು ಬೆರಳು ಹಸ್ತಕ್ಕೆ ಕತ್ತಲ ರಾಜ್ಯದ ಇಡೀ ಮನುಷ್ಯ ಮಾತಾಡುವುದಾದರೆ ಅದರಿಂದ ಉಂಟಾಗುವ ಬದಲಾವಣೆಯು ನನ್ನ ಕಲ್ಪನೆಗೆ ಎಟುಕದಷ್ಟಾಗಬಹುದು. ಆ ಬದಲಾವಣೆಗಾಗಿ ಈ ಮನುಷ್ಯನ ನಾಡಿಗೆ ನುಡಿಕೊಡಲು ನೂರಾರು ಜನರು ಹುಟ್ಟಬೇಕಾದೀತು. ಒಂದು ಆಂದೋಲನ ಇದನ್ನು ಕಾಣಿಸಬಹುದೇನೋ''[೬] ಎನ್ನುವಲ್ಲಿ ಮಹಾದೇವರು ಅಂಬೇಡ್ಕರ್ ಸಿದ್ಧಾಂತವನ್ನು ಅಕ್ಷರಶಃ ತಪ್ಪದೇ ಪಾಲಿಸಿಕೊಂಡಿದ್ದಾರೆ. ಅಂಬೇಡ್ಕರರು, ''ನಿಮ್ಮ ಜಾತಿಗಳು ತಮ್ಮ ಗುರಿಗಳನ್ನು ಸಾಧಿಸಲಾಗದಿದ್ದಲ್ಲಿ ಅವರು ಈ ದೇಶದಲ್ಲಿ ಮನುಷ್ಯ ಮಾತ್ರವಾಗಿ ಪರಿಗಣಿಸಲ್ಪಡುವಂತೆ ಮಾಡಲಾಗದಿದ್ದಲ್ಲಿ, ಸಾಮಾಜಿಕ ಮರ್ಯಾದೆಗನುಗುಣವಾಗಿ ಅವರ ಜೀವನ ವಿಕಸಿತವಾಗುವಂತೆ ಮಾಡಲಾಗದಿದ್ದಲ್ಲಿ ನಾನು ತುಪಾಕಿಯಿಂದ ನನ್ನ ಎದೆಯನ್ನು ಸೀಳಿಕೊಂಡು ಸಾಯುತ್ತೇನೆ.''[೭]

ಮೇಲೆ ಹೇಳಲಾದ ಸೈದ್ಧಾಂತಿಕತೆಯ ಮೂಲಕ ದಲಿತ-ಬಂಡಾಯ ಕಾದಂಬರಿಗಳು ಒಂದು ನಿರ್ಧಿಷ್ಟ ರೂಪ ಪಡೆದುಕೊಂಡಿವೆ. ಇಡೀ ಕನ್ನಡ ಸಾಹಿತ್ಯ ಚರಿತ್ರೆಯ ಸಿದ್ಧಾಂತ, ವಸ್ತು, ಭಾಷೆಗಳಿಗಿಂತ ಭಿನ್ನವಾಗಿರುವುದರಿಂದಲೇ ಇದರ ಸ್ವರೂಪವೂ ಭಿನ್ನವೆನಿಸುತ್ತದೆ. ಅಲ್ಲದೇ ಈ ಪರಂಪರೆಯ ಕಾದಂಬರಿಗಳು ಕಾಮ ಮತ್ತು ನಿಸರ್ಗವರ್ಣನೆಯೊಂದಿಗೆ ಮನುಷ್ಯನ ಹುಡುಕಾಟಕ್ಕೆ ಅಣಿಯಾದವು. ಹಾಗಾಗಿ ಅದು ವ್ಯಕ್ತಿಕೇಂದ್ರಿತವಾಗಿ ಮೂಡಿ ಬಂದು ಏಕತಾನತೆಯನ್ನು ಅನುಭವಿಸುವಂತೆ ಮಾಡಿತು. ಇದನ್ನೇ ದಲಿತ-ಬಂಡಾಯ ಕಾದಂಬರಿಗಳು 'ವ್ಯಕ್ತಿ ಕೇಂದ್ರಿತ'ವಾಗಿದ್ದನ್ನು 'ಶೋಷಣಾ ರಹಿತ ಸಮಾಜ ಕೇಂದ್ರಿತ'ವಾಗಿ ಚಿತ್ರಿಸಲು ಹಂಬಲಿಸಿದವು. ಹಾಗಾಗಿ ಈ ಕಾದಂಬರಿಗಳಲ್ಲಿ ಕೆಳವರ್ಗಗಳ ಭಿನ್ನ ಭಿನ್ನ ಸಮುದಾಯದ ಜೀವನ ವಿವರಗಳನ್ನು ದಾಖಲಿಸಿತು. ಈ ಕಾದಂಬರಿಗಳು ಬಾಹ್ಯವಾಗಿ ದೀರ್ಘವಾಗಿಯೂ, ಗಾತ್ರದಲ್ಲಿ ಚಿಕ್ಕದಾಗಿಯೂ ಇಲ್ಲ. ಆಂತರಿಕವಾಗಿ ಇಡೀ ಕೆಳವರ್ಗಗಳ ಲೋಕವನ್ನು ತೆರೆದಿಡುತ್ತವೆ. ಸಾಂಪ್ರದಾಯಿಕ ಕನ್ನಡ ಸಾಹಿತ್ಯದಿಂದ ಭಿನ್ನವಾದ ಗ್ರಾಮೀಣ ವಿನ್ಯಾಸದ ವಸ್ತುವನ್ನು ಆರಿಸಿಕೊಂಡು, ಅದಕ್ಕೆ ತಕ್ಕ ಹಾಗೆ ಭಾಷೆಯ ಬಳಕೆಯನ್ನೂ ವಿಭಿನ್ನ ನೆಲೆಯಲ್ಲಿ ಬಳಸಿರುವುದು ತಿಳಿಯುತ್ತದೆ. ಆ ಮೂಲಕ ಹೊಸತೊಂದು ಜಗತ್ತನ್ನು ಅನಾವರಣಗೊಳಿಸುತ್ತದೆ. ಆದ್ದರಿಂದ ಗ್ರಾಮೀಣ ಪರಿಸರದ ಜಾನಪದ ಭಾಷೆಯೊಂದಿಗೆ ಗ್ರಂಥಸ್ಥ ಸಾಹಿತ್ಯ ಭಾಷೆಯನ್ನೂ ದುಡಿಸಿಕೊಂಡು ಸಾಫಲ್ಯತೆಯನ್ನು ಪಡೆದುಕೊಂಡಿತು.

ದೇವನೂರು ಮಹಾದೇವರ 'ಕುಸುಮ ಬಾಲೆ' ಕಾದಂಬರಿಯೂ ಇತ್ತ ಗದ್ಯವಲ್ಲದ ಅತ್ತ ಪದ್ಯವಲ್ಲದ, ದೀರ್ಘವಾಗಿರದ - ಚಿಕ್ಕದಾಗಿಯೂ ಇರದ ದಲಿತ-ಬಂಡಾಯ ಸಾಹಿತ್ಯದ ವಿನೂತನ ಪ್ರಕಾರವಾಗಿದೆ. ಪದ್ಯದ ಲಯವನ್ನು, ಗದ್ಯದ ಸೊಗಡನ್ನು ಒಳಗೊಂಡಿರುವ ಈ ಕಾದಂಬರಿ ಆಧುನಿಕ ಚಂಪೂ ಶೈಲಿಯಂತೆ ಕಾಣಿಸುತ್ತದೆ. ಎಪ್ಪತ್ತೇಳು ಪುಟಗಳಲ್ಲಿ ಭೂತ, ವರ್ತಮಾನ, ಭವಿಷ್ಯದ ಸಂಗತಿಗಳನ್ನೆಲ್ಲಾ ಹಿಡಿದಿಟ್ಟುಕೊಂಡಿದೆ. ಡಾ. ಸದಾಶಿವ ಎಣ್ಣೆಹೊಳೆಯವರು ಅಭಿಪ್ರಾಯ ಪಡುವಂತೆ "ಬಹುಶಃ ವೃತ್ತಿನಿರತ ಕಾದಂಬರಿಕಾರರ ಕೈಯ್ಯಲ್ಲಿ ಏಳುನೂರು ಪುಟಗಳ ಕಾದಂಬರಿಯಾಗಬಹುದಾದದ್ದು ಇಲ್ಲಿ ಎಪ್ಪತ್ತೇಳು ಪುಟಗಳಲ್ಲಿ ಮುಗಿದಿದೆ. ಆದರೆ ಏಳುನೂರು ಪುಟ ಬರೆದೂ ಹೇಳಲು ಸಾಧ್ಯವಾಗದ್ದನ್ನು 'ಕುಸುಮ ಬಾಲೆ' ಎಪ್ಪತ್ತೇಳು ಪುಟಗಳಲ್ಲಿ ಸಾಧಿಸಿದೆ"[೮] ಎನ್ನುವಲ್ಲಿ ಈ ಕಾದಂಬರಿಯ ಸ್ವರೂಪ ಖಚಿತಗೊಳ್ಳುತ್ತದೆ.

'ಅಂತೆಯೇ' ಗಾತ್ರದ ದೃಷ್ಟಿಯಿಂದ ಹೆಸರಿಸಬಹುದಾದ ಕೃತಿಗಳೆಂದರೆ, ಅರವಿಂದ ಮಾಲಗತ್ತಿಯವರ 'ಕಾರ್ಯ', ಬರಗೂರು ರಾಮಚಂದ್ರಪ್ಪರವರ 'ಸೂರ್ಯ', ಇವರ ಕಾದಂಬರಿಗಳಿಗಿಂತಲೂ ಗಾತ್ರದಲ್ಲಿ ಭಿನ್ನವಾಗಿರುವ ಕುಂ.ವೀ.ಯವರ 'ಕಪ್ಪು', ಮನಜ ಅವರ 'ಮಾಗಿ', ಜಂಬಣ್ಣ ಅಮರಚಿಂತರ

‘ಕುರುಮಯ್ಯ ಮತ್ತು ಅಂಕುಶದೊಡ್ಡಿ’, ಬಿ.ಟಿ.ಲಲಿತಾ ನಾಯ್ಕರ ‘ಗತಿ’, ಮುಳ್ಳೂರು ನಾಗರಾಜರ ‘ಮರಣ ಮಂಡಲ ಮಧ್ಯದೊಳಗೆ’, ಕಾದಂಬರಿಗಳನ್ನು ಹೆಸರಿಸಬಹುದು.

ಪ್ರಸ್ತುತ ಕಾದಂಬರಿಗಳು ಶೋಷಿತ ಗ್ರಾಮೀಣ ಸಮುದಾಯಗಳ ಜೀವನದ ವಸ್ತುವನ್ನು ಆಯ್ದುಕೊಂಡು ಆ ಸಮಾಜದಲ್ಲಿಯ ಶೋಷಿತ ವರ್ಗಗಳ ಸ್ಥಾನಮಾನವನ್ನು, ನೋವು ಅಸಮಾನತೆಗಳ ನೆಲೆಯನ್ನು ಅಭಿವ್ಯಕ್ತಿಸುವುದರ ಜೊತೆಗೆ ಕಾದಂಬರಿಕಾರನು ತನ್ನ ನಿಲುವನ್ನು ಸಹ ಆ ಕೃತಿಯಲ್ಲಿ ಸೈದ್ಧಾಂತಿಕವಾಗಿ ಪ್ರಕಟಪಡಿಸುತ್ತಾನೆ. ಹೀಗಾಗಿ ಕಾದಂಬರಿಕಾರ ದಲಿತ-ಬಂಡಾಯ ಹಾಗೂ ವ್ಯಕ್ತಿವಾದಿಗಳ ವಿಚಾರಗಳನ್ನು ಮೇಳೈಸಿಕೊಂಡು ಕೃತಿರಚನೆಗೆ ತೊಡಗಿರುವುದು ಗ್ರಹಿಕೆಗೆ ಬರುತ್ತದೆ.

೧. ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು...

೨. ಎಲ್ಲ ಜನಪರ ನಿಲುವುಗಳಿಗೆ ಬೆಂಬಲ, ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ಹೋರಾಟದ ಮುಖ್ಯ ದಾಖಲೆ.”

೩. ಸಾಹಿತಿಗೆ ಸಾಮಾಜಿಕ-ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ.

೪. ಅಸ್ಪೃಶ್ಯತೆ, ಜಾತಿಪದ್ಧತಿ ಮತ್ತು ಲಿಂಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು.

ಈ ಅಂಶಗಳನ್ನು ಹಿಂದಿನ ಪುಟದಲ್ಲಿ ಉಲ್ಲೇಖಿಸಿದಂತೆ ದಲಿತ-ಬಂಡಾಯ ಸಾಹಿತ್ಯ ಪ್ರಣಾಳಿಕೆಯಿಂದ ಕ್ರೋಢೀಕರಿಸಲಾಗಿದೆ. ಈ ಅಂಶಗಳು ದಲಿತ-ಬಂಡಾಯ ಕಾದಂಬರಿಗಳ ಒಲವು-ನಿಲುವೂ ಆಗಿವೆ. “ಇತಿಹಾಸದ ಪ್ರತಿಯನ್ನು ಗುರುತಿಸುವ, ಬೌದ್ಧಿಕ ಕಸರತ್ತುಗಳಿಂದ ದೂರವಾದ, ವೈಯಕ್ತಿಕ ತೀಟೆಯಿಂದ ಮುಕ್ತವಾದ ಜನರ ಅನೇಕ ರೀತಿಯ ಆಶೋತ್ತರಗಳನ್ನು ಪ್ರತಿನಿಧಿಸುವ ಹಾಗೂ ಈ ಆಶೋತ್ತರಗಳಿಗೆ ಕಾರಣವಾಗಿ ನಿಲ್ಲುವ ಆಳವಾದ ಸಾಮಾಜಿಕ-ರಾಜಕೀಯ ಸಂಗತಿಗಳು ಮತ್ತು ಅವುಗಳನ್ನು ನಿಯಂತ್ರಿಸುವ ಜಾತಿ-ಧರ್ಮ-ವರ್ಗ ಇವುಗಳನ್ನು ಅರ್ಥಮಾಡಿಕೊಳ್ಳುವ, ತನ್ನ ಓದುಗರಿಗೆ ಅರ್ಥಮಾಡಿಸುವಲ್ಲಿನ ಪ್ರಯತ್ನದಲ್ಲಿಯೇ ಬಂಡಾಯ ಸಾಹಿತ್ಯದ ಒಲವಿರುವುದು.”[೯]

ಹಾಗಾಗಿ ಕಾದಂಬರಿಗಳು ಶೋಷಣೆಯ ಮೂಲವನ್ನು ಹುಡುಕಿ ಅದರ ಸ್ವರೂಪವನ್ನು ಗುರುತಿಸಿ ಮೂಲಭೂತ ಬದಲಾವಣೆಯ ಕಡೆ ತೀವ್ರ ಒಲವು ತೋರಿಸುತ್ತವೆ. “ಸಮಸ್ಯೆಗಳು ಆವರಿಸಿಕೊಂಡಾಗ ಇವೆಲ್ಲವುಗಳ ವಿರುದ್ಧ ಬಂಡಾಯವೇಳುವವನೇ ನಿಜವಾದ ಜನಪರ ವ್ಯಕ್ತಿಯಾಗುತ್ತಾನೆ. ‘ಸಮತಾವಾದ’ ಅವನ ತಾತ್ವಿಕತೆಯ ನೆಲೆಯಾಗಿರಲೇ ಬೇಕಾಗುತ್ತದೆ. ಇಲ್ಲಿ ಉತ್ಪಾದನಾ ಸಾಧನಗಳು ಸಾಮೂಹಿಕ ಒಡೆತನಕ್ಕೆ ಒಳಪಡುತ್ತವೆ. ಮತ್ತು ಯೋಜಿತ ಅರ್ಥರೀತಿ ಅಸ್ತಿತ್ವಕ್ಕೆ ಬರುತ್ತದೆ. ಅನುಭೋಗ್ಯ

ವಸ್ತುಗಳ ಹೆಚ್ಚಳ ಮತ್ತು ಅಂಥವುಗಳನ್ನು ಬಿಟ್ಟು ಇತರ ಎಲ್ಲಾ ಉತ್ಪಾದನಾ ಸಾಧನಗಳಲ್ಲಿನ ಖಾಸಗಿ ಒಡೆತನದ ರದ್ಧತಿ ಇವು ಜನಪರ ನಿಲುವುಗಳ ಕಾರ್ಯಗಳಾಗಿರುತ್ತವೆ. ಸಮಾಜದಲ್ಲಿನ ವರ್ಗ-ಜಾತಿ ವೈಷಮ್ಯಗಳನ್ನು ತೊಡೆದು ಹಾಕುವುದರೊಂದಿಗೆ ಭಾಷೆಯಲ್ಲಿನ ವರ್ಗ ವ್ಯತ್ಯಾಸವನ್ನು ತೊಡೆದು ಹಾಕುವ ಕೆಲಸ ಇಲ್ಲಿ ನಡೆಯುತ್ತದೆ. ಅಂದರೆ, ಜನಪರ ನಿಲುವು ಕೇವಲ ಒಂದು ಘೋಷಣೆಯಲ್ಲ, ಬದಲಾಗಿ ಕ್ರಾಂತಿಕಾರೀ ಬದಲಾವಣೆಗೆ ಹಾತೊರೆಯುವ ಭಾವ; ಸಮಾಜವನ್ನು ಪೂರ್ತಿಯಾಗಿ ನಿರ್ಮಿಸುವ ಕೆಲಸವಿದು."[೧೦]

ಇದರಿಂದಾಗಿ ಈ ಕಾದಂಬರಿಗಳಲ್ಲಿ ತಾತ್ವಿಕವಾಗಿ ಒಲವು ನಿಲುವುಗಳನ್ನು ಗುರ್ತಿಸಲು ಯತ್ನಿಸಲಾಗಿದೆ. ಈ ಪಂಥದ ಕಾದಂಬರಿಗಳ ವಸ್ತು ಒಂದೇಯಾದರೂ ಅವು ಕಟ್ಟಿಕೊಡುವ ತಾತ್ವಿಕತೆ ಭಿನ್ನವಾಗಿರುತ್ತವೆ. ವಸ್ತುವಿನ ಆಯ್ಕೆಯಿಂದ ಏಕರೀತಿಯ ಮನೋಭಾವನೆಯಿದ್ದರೂ, ಅಭಿವ್ಯಕ್ತಿಯ ನೆಲೆಯಲ್ಲಿ ಭಿನ್ನ ತಾತ್ವಿಕಾಂಶಗಳು ಪ್ರತಿಪಾದಿಸಲ್ಪಡುತ್ತವೆ. ವೈಯಕ್ತಿಕ ನೆಲೆಯಲ್ಲಿ ಸಮಾಜಪರ ಚಿಂತನೆಯ ನಿಲುವುಗಳು ಅವರವರ ಒಲವಿಗೆ ತಕ್ಕಂತೆ ಅಭಿವ್ಯಕ್ತಗೊಂಡುದು ದಲಿತ ಬಂಡಾಯ ಲೇಖಕರ ಸ್ವರೂಪವನ್ನು ಹೇಳುತ್ತದೆ.

ದೇವನೂರರ ಒಟ್ಟು ಪ್ರತಿಪಾದನೆ ಮನುಷ್ಯ-ಮನುಷ್ಯನಾಗುವ ವ್ಯಕ್ತಿ ಸಮಾನತೆ ಕಡೆ ಹಾಗೂ ಆರ್ಥಿಕ ಸಮಾನತೆ ಇಂತಹ ಅಸಮಾನ ನೆಲೆಗಳು ಛಿದ್ರವಾಗಿ ಸಮಾನತೆ ನೆಲೆಸಬೇಕೆಂಬ ಒಲವುಳ್ಳದ್ದಾಗಿದೆ. ಕುಸುಮಬಾಲೆಯಲ್ಲಿ ಮೇಲ್ಜಾತಿ-ವರ್ಗದ ಸ್ತ್ರೀಯರೊಂದಿಗೆ ದಲಿತ ವರ್ಗದ ಪುರುಷರ ನಡುವೆ ಅನೈತಿಕ ಸಂಪರ್ಕವೇರ್ಪಡಿಸುವುದರ ಮೂಲಕ ಮೇಲು-ಕೀಳಿನ ಪರಿಕಲ್ಪನೆಗಳನ್ನು ಸಮಾನತೆಯ ನೆಲೆಗಳತ್ತ ಚಲನಶೀಲಗೊಳಿಸುತ್ತಾರೆ.

ಅಲ್ಲದೇ ರಾಜಕೀಯ ಪ್ರಜ್ಞೆಯ ಕಡೆಗೂ ಒಲವು ತೋರಿಸಿ, ಖಚಿತವಾದ ನಿಲುವನ್ನು ಸಾಧಿಸುತ್ತಾರೆ. ಇದಕ್ಕೆ ಕುಸುಮ ಬಾಲೆಯಲ್ಲಿ ಬರುವ ಗಾರಸಿದ್ಧನ ಎಳನೀರು ಕದ್ದ ಪ್ರಸಂಗ, ದಲಿತ ಸಂಘರ್ಷ ಸಂಘದ ಸ್ಥಾಪನೆಯ ಪ್ರಸಂಗಗಳನ್ನು ಉದಾಹರಿಸಬಹುದು. ಇದರಂತೆ ಮುಳ್ಳೂರು ನಾಗರಾಜರು ರಾಜಕೀಯ ಭಾಗವಹಿಸುವಿಕೆ ಮತ್ತು ವರ್ಣಸಂಕರದತ್ತ ಮುಖ ಮಾಡುತ್ತಾರೆ. 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಅಗಸರ ಕೋಮಿಗೆ ಸೇರಿದ ಮುಳುಗಮ್ಮ ದಲಿತ ಕೋಮಿಗೆ ಸೇರಿದ ಹೊಲೆಯರ ಸಂಗಯ್ಯ ಇವರ ಅನೈತಿಕ ಸಂಬಂಧ, ಪ್ರೇಮಪ್ರಕರಣ ಪ್ರಸಂಗ ಗಮನಿಸಬಹುದಾಗಿದೆ. ಅವರು ರಾಜಕೀಯ ಪ್ರಜ್ಞೆಯನ್ನು ಬಸುರಾಜುವಿನ ಪಾತ್ರದ ಮೂಲಕ ಬೆಳೆಸುವ ರೀತಿ ಕುತೂಹಲವಾದದ್ದು.

ಇನ್ನುಳಿದಂತೆ, ಮನಜ, ಅರವಿಂದ ಮಾಲಗತ್ತಿಯವರು ತಮ್ಮ ಸಮುದಾಯದ ವರ್ಗಗಳಲ್ಲಿರುವ, ಮೌಢ್ಯತೆ, ಅಜ್ಞಾನ, ಸಂಪ್ರದಾಯ, ನಂಬಿಕೆಗಳನ್ನು ತೊಡೆದು ಹಾಕುವತ್ತ ಒಲವು ತೋರಿಸುತ್ತಾರೆ. ತಮ್ಮ ಸಮುದಾಯಗಳ ನಡುವಿನ ಸಾಂಸ್ಕೃತಿಕ ಸಂಘರ್ಷವನ್ನು ತೋರೆಯಲು ಪ್ರಯತ್ನಿಸಿದ್ದಾರೆ. ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ, ಶೋಷಣೆಯನ್ನು ಚಿತ್ರಿಸಿ, ಮಹಿಳಾ ವಿಮೋಚನೆಗಾಗಿ ಬಿ.ಟಿ.ಲಲಿತಾನಾಯ್ಕ, ಕುಂಬಾರವೀರಭದ್ರಪ್ಪ, ಅವರು ತಾತ್ವಿಕ ಹೋರಾಟ ನಡೆಸುತ್ತಾರೆ. ''ಗ್ರಾಮೀಣ ಬದುಕಿನ ಅಮೂಲ್ಯ ಅನುಭವದ್ರವ್ಯ ನೀಡುವ ಮೂಲಕ ಲಂಬಾಣಿ ಜನಾಂಗದ ಜೀವನದ ವಾಸ್ತವಿಕತೆಗಳನ್ನು ಅನಾವರಣ ಮಾಡುವ ಬಿ.ಟಿ.ಲಲಿತಾನಾಯಕ ಅವರು ಜನಪರ ನಿಲುವಿನ ಕೆಲವೇ ಕೆಲವು ಲೇಖಕಿಯರಲ್ಲಿ ಒಬ್ಬರಾಗಿದ್ದಾರೆ.''[೧೧] ಅವರು 'ಗತಿ' ಕಾದಂಬರಿಯಲ್ಲಿ ಜನಾಂಗದ ಅನಕ್ಷರತೆ, ಮೂಢನಂಬಿಕೆಗಳನ್ನು ಬಯಲುಗೊಳಿಸುತ್ತಾರೆ. ಈ ಅಂಶಗಳಿಂದ ಅಸಹಾಯಕಳಾದ ಲಚ್ಮಿ, ಸೋನಿಯವರ ಮೇಲೆ ಮೇಲ್ವರ್ಗ ನಡೆಸುವ ಅತ್ಯಾಚಾರವನ್ನು; ಶೋಷಣೆಯನ್ನು ಚಿತ್ರಿಸುತ್ತಾರೆ. ಲಚ್ಮಿಗೆ ಸಂಪ್ರದಾಯದ ಹೆಸರಿನಲ್ಲಿ ಚಿತ್ರಹಿಂಸೆ ನೀಡುವಾಗ ''ನೋಡಿ ನಿಮ್ಮ ಕಾಲು ಬೀಳಲಿಕ್ಕ, ದಂಡ ತೆರಲಿಕ್ಕ ನಾಯೇನೂ ಮಂದಿ ಹೆಣ ಬೀಳ್ಸಿಲ್ಲ - ಯಾರ್ದಾರ ಮನಿ ಮುರ್ದಿಲ್ಲ... ನನ್ನದೇನೂ ತಪ್ಪಿಲ್ಲಂದ ಮ್ಯಾಲ ಒಂದು ಪೈಸಾನೂ ದಂಡ ಕೊಡುವಾಕಿಯಲ್ಲ ಅದೇನು ಮಾಡ್ಕೊಂತೀರೋ ಮಾಡ್ಕೋರಿ''[೧೨] ಎಂದು ಪ್ರತಿಭಟಿಸುತ್ತಾಳೆ. ಈ ಪ್ರತಿಭಟನೆಯ ಕಠೋರ ನಿಲುವು ಬಡ ಮೂಕ ಕೆಳವರ್ಗದ ಮಹಿಳೆಯರಲ್ಲಿ ಧೈರ್ಯ ಮೂಡಿಸುತ್ತದೆ. ಹಾಗೆಯೇ ದಲಿತ ಮಹಿಳೆಯರಲ್ಲಿ ಮೂಡಿದ ಪ್ರಜ್ಞಾ ಸ್ತರವನ್ನು ವಿವರಿಸುತ್ತದೆ. ಮನಜ ಅವರ 'ಮಾಗಿ' ಕಾದಂಬರಿಯಲ್ಲೂ, 'ಮಾಗಿ' ತನ್ನ ಸಂಬಂಧಿಕರಿಂದಲೇ ಶೋಷಣೆಗೊಂಡು ತೀವ್ರವಾಗಿ ಪ್ರತಿಭಟಿಸುತ್ತಾಳೆ. ಎಲ್ಲಾ ದಲಿತ ಬಂಡಾಯ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಅಮಾನವೀಯವಾಗಿ ಶೋಷಣೆಗೊಳಗಾಗುತ್ತಾರೆ. ಆದರೆ ಅಂಥ 'ಅಮಾನವೀಯವಾದ ರಾಡಿಯಲ್ಲೂ ದಲಿತ ಹೂಗಳು ಅರಳಿ ಬದುಕನ್ನು ಹರಳು ಗಟ್ಟಿಸಿಕೊಂಡಿವೆ. ರಾಡಿಯ ಚಿತ್ರಣದ ಜೊತೆಗೆ ಹೂವಿನ ಚಿತ್ರಣವನ್ನು ಕೊಡುವುದೂ ಸಾಹಿತ್ಯ ಜವಾಬ್ದಾರಿ ಗಳಲ್ಲೊಂದಾಗಿದೆ.'[೧೩] ಆದ್ದರಿಂದ ಕಾದಂಬರಿಕಾರರು ಹೆಣ್ಣಿನ ಶೋಷಣೆಯನ್ನು ಅನಾವರಣಗೊಳಿಸುತ್ತಲೇ ವಿಮೋಚನೆಯತ್ತ, ಸ್ವಾವಲಂಬಿ ಬದುಕಿನತ್ತ ಒಲವು ಮೂಡಿಸುತ್ತಾರೆ.

ಒಂದು ಸಾಮಾಜಿಕ ಸಂರಚನೆಯ ಗರ್ಭದೊಳಗೆ ಅಡಗಿದ ಶೋಷಿತ ಮತ್ತು ಅಮಾನವೀಯ ನೆಲೆಗಳ ಮುರಿಯುವಿಕೆ ಮತ್ತು ಹೊಸದರ ಕಟ್ಟುವಿಕೆ ದಲಿತ-ಬಂಡಾಯ ಕಾದಂಬರಿಗಳ ಬಹುಮುಖ್ಯ ಒಲವು-ನಿಲುವುಗಳಾಗಿರುವುದು ಇಲ್ಲಿ ಕಾಣುತ್ತದೆ. ಅಕ್ಷರವಂಚಿತವಾದ ಅಸಂಖ್ಯಾತ ಸಮುದಾಯಗಳಿಗೆ ತನ್ನನ್ನು ನಿಕೃಷ್ಟವಾಗಿ ಕಾಣುವ ಪ್ರಬಲವರ್ಗಗಳ ವಿರುದ್ಧ ಪ್ರತಿಭಟನೆಯನ್ನು ಒಡ್ಡುವ, ಪ್ರಶ್ನಿಸುವ

ಸಾಮರ್ಥ್ಯವನ್ನು ಜಾಗೃತಗೊಳಿಸುವುದೇ ದಲಿತ-ಬಂಡಾಯ ಕಾದಂಬರಿಗಳ ತಾತ್ವಿಕ ಸಂಘರ್ಷವಾಗಿದೆ. ಯಾವುದೇ ಒಂದು ನೆಲೆಯ ಮಾನವ ಸಮುದಾಯದ ಜೀವನ ಕ್ರಮಗಳೇ ಇಡೀ ಮಾನವ ಜನಾಂಗದ ಸಂಸ್ಕೃತಿಯಿಂದ ವೈಭವೀಕರಿಸುತ್ತ, ಬಂದ ನೆಲೆಗಳ ವಿರುದ್ಧ ಸಿಡಿದೆದ್ದರು. ಪಾರ್ಶ್ವಿಕವಾದ ಸಾಂಸ್ಕೃತಿಕ ವ್ಯಾಖ್ಯಾನಗಳನ್ನು ಮಾನವ ಚರಿತ್ರೆಯ ವಿಕಾಸದ ಚರ್ಚೆಗಳನ್ನು ಉಗ್ರವಾಗಿ ಪ್ರತಿಭಟಿಸಿದರು. ನಮಗೂ ಒಂದು ಸಾಂಸ್ಕೃತಿಕ ನೆಲೆಯಿದೆ. ಅದರ ಅಧ್ಯಯನ ಮಾಡುವುದರಿಂದ ಇಡೀ ಸಂಸ್ಕೃತಿಯಲ್ಲಿ ಹೊಸ ಚಲನೆ ಉಂಟಾಗುತ್ತದೆ ಎನ್ನುವ ಪರಿಕಲ್ಪನೆಗಳನ್ನು ಹೊಸೆದರು. ಬರಹ ನೂತನ ಆವಿಷ್ಕಾರಗಳ, ಸಂಘಟನೆ ಮತ್ತು ಚಳುವಳಿಗಳ ಮೂಲಕ ಹೊಸ ಸಾಂಸ್ಕೃತಿಕ ವ್ಯಾಖ್ಯಾನಗಳನ್ನು ಪ್ರಚಾರಪಡಿಸಿದರು. ಅಂಚಿನಲ್ಲಿರುವ ಜಗತ್ತಿನಲ್ಲಿ ಹೊಸರೀತಿಯ ಮಿಸುಕಾಟಗಳನ್ನು ಸಾಧ್ಯವಾಗಿಸಿದರು. ಶೋಷಿತ ಬದುಕು ಮತ್ತು ಸಂವೇದನೆಗಳನ್ನು ಮಾನವ ಸಂಸ್ಕೃತಿಯ ಪ್ರಜ್ಞೆಯ ಭಾಗವಾಗಿ ಚರಿತ್ರೆ ಮತ್ತು ಸಮಕಾಲೀನ ವಾಸ್ತವದಲ್ಲಿ ಗ್ರಹಿಸುವ ಕಾದಂಬರಿಕಾರರ ನಿಲುವುಗಳೇ ತುಂಬ ಮಹತ್ವವಾದಂತವು. ಪ್ರತಿಷ್ಠಿತವಾಗಿ ಬದುಕುವವರಿಗೆ ಎದುರಾಗಿ ಅಪ್ರಸ್ತುತ, ಉಪೇಕ್ಷಿತ ಎಂದೆನಿಸಿದ್ದು ಜಗತ್ತನ್ನು ಅದರ ಅಂತಃ ಶಕ್ತಿಯೊಂದಿಗೆ ಅನುಭವದ ಆಳದಿಂದ ಕರಾರುವಕ್ಕಾಗಿ ಚಿತ್ರಿಸುತ್ತಾರೆ. ಶ್ರಮ ಬದುಕಿನ ಕ್ರಿಯಾಶೀಲ ನೆಲೆಗಳನ್ನು ಶ್ರಮದ ಬಗೆಗಿನ ಗೌರವ ಮತ್ತು ಬದ್ಧತೆಗಳನ್ನು ಎತ್ತಿಹಿಡಿಯುವ ಕಾದಂಬರಿಕಾರರ ತಾತ್ವಿಕ ಧೋರಣೆಗಳು ಚರಿತ್ರೆಯಲ್ಲಿ ಹೊಸ ಮಿಸುಕಾಟಗಳನ್ನು ಹುಟ್ಟು ಹಾಕಿದ್ದು ಕಂಡು ಬರುತ್ತದೆ. ಹುಸಿ ಸಂಸ್ಕೃತಿಯ ವಿನ್ಯಾಸಗಳನ್ನು, ಭೋಗಲಾಲಸೆಯನ್ನು ಕಾಲದ ಮೂಲಕ ಬದುಕನ್ನು ಕಟ್ಟಿಕೊಳ್ಳುವ ನಿಸರ್ಗವಿಮುಖ ಬದುಕಿನ ಹುನ್ನಾರಗಳನ್ನು ಪ್ರಶ್ನಿಸುವ ಮೂಲಕ 'ಕಾಲ'ವನ್ನು ನಿರ್ವಹಿಸಿಕೊಳ್ಳುವ ಸಂಸ್ಕೃತಿಗಳ ಅಂತಃಪ್ರಜ್ಞೆಗಳನ್ನು ಜಾಗೃತವಾಗಿಸುತ್ತಾರೆ. ಈ ದಾರಿಯಲ್ಲಿ ವೈಭವೀಕರಣಕ್ಕೆ ಬದಲಾಗಿ, ಮಾನವೀಕರಣವನ್ನು, ವೇದನೆಯ ಬದಲಾಗಿ ವಾಸ್ತವವನ್ನು, ಅದರ ಒಡಲಲ್ಲಿ ಹುಟ್ಟುವ ವಿಷಾದಗಳನ್ನು ಕಾದಂಬರಿಕಾರರು ಬಹುಮುಖ್ಯ ಪ್ರಮೇಯಗಳನ್ನಾಗಿಸಿಕೊಂಡಿದ್ದಾರೆ. ಹೀಗೆ ಶ್ರಮ ಬದುಕಿನ ವಸ್ತು ಸಂಗತಿಗಳು, ನೋವು ಅವಮಾನಗಳು, ಪರ್ಯಾಯದ ಎಚ್ಚರಗಳು ಅದರ ಎಲ್ಲ ಅಂತಃಸತ್ವ ಮತ್ತು ಭೌಗೋಳಿಕತೆಯೊಂದಿಗೆ ಹೊಸ ಅರ್ಥ ಮತ್ತು ತಾತ್ವಿಕ ನೆಲೆಗಳನ್ನು ಪಡೆದುಕೊಳ್ಳುವುದು ದಲಿತ ಬಂಡಾಯ ಕಾದಂಬರಿಗಳ ಧನಾತ್ಮಕ ಅಂಶವಾಗಿದೆ. ವಿವಿಧ ಸಾಮಾಜಿಕ ಸ್ತರಗಳಿಂದ ಬಂದವರು ಅವರವರ ವರ್ಗ ನೆಲೆ ಮತ್ತು ಅರಿವಿನ ಹಿನ್ನೆಲೆಯಲ್ಲಿ ಬಹುಮುಖಿಯಾದ ಸಾಂಸ್ಕೃತಿಕ ವಿನ್ಯಾಸಗಳನ್ನು ಕಟ್ಟಿಕೊಟ್ಟರು. ಹೀಗೆ ಕಾದಂಬರಿಕಾರ ತಮ್ಮ ಒಲವು-ನಿಲುವುಗಳನ್ನು ಕಾದಂಬರಿ ಮೂಲಕ ಬಿಚ್ಚಿಟ್ಟಿದ್ದು ಅಧ್ಯಯನದಿಂದ ಕಂಡುಬರುತ್ತದೆ.

## ಪರಂಪರೆ-ಪ್ರಭಾವ-ಪ್ರಯೋಜನ

ಪ್ರತಿಯೊಂದು ಸಾಹಿತ್ಯವು ಸೃಜನಶೀಲ ಪರಂಪರೆಯನ್ನು ಹೊಂದಿರುತ್ತದೆ. ಅದು ಸಾಹಿತ್ಯ ಹಾಗೂ ಸಾಹಿತ್ಯೇತರ ಪರಂಪರೆಯನ್ನು ಒಳಗೊಂಡು ಸಮಕಾಲೀನ ಸಂದರ್ಭದಲ್ಲಿ ನಿರ್ದಿಷ್ಟ ರೂಪ ಪಡೆಯುತ್ತದೆ. ಪರಂಪರೆ ಎಂಬುದು ಸಂಪ್ರದಾಯಗಳಿಂದ ಬೇರೆಯಾದದ್ದು. ಒಂದು ಸಂಸ್ಕೃತಿಯ ಗಟ್ಟಿ ಮೌಲ್ಯಗಳನ್ನು ಅಡಗಿಸಿಕೊಂಡಿರುವಂಥದ್ದು. ಸಂಪ್ರದಾಯಗಳು ರೂಢಿಗತವಾಗಿ ಹರಿದು ಬಂದಂಥದ್ದಾಗಿದೆ. ಹಾಗಾಗಿ ಸಂಪ್ರದಾಯ ನಿಂತ ನೀರಾದರೆ, ಪರಂಪರೆ ಹರಿವ ಹೊಳೆ. ಸಂಪ್ರದಾಯದಲ್ಲಿ ಸಮಕಾಲೀನ ಮೌಲ್ಯಗಳು ಆಯಾ ಕಾಲದಲ್ಲಿ ಸ್ಥಗಿತಗೊಳ್ಳುತ್ತವೆ. ಪರಂಪರೆಯು ಸಮಕಾಲೀನ ಮೌಲ್ಯಗಳನ್ನು ಸಾರ್ವಕಾಲಿಕ ಮೌಲ್ಯಗಳಾಗಿ ಪರಿವರ್ತಿಸುತ್ತದೆ. ದಲಿತ ಬಂಡಾಯ ಲೇಖಕರು ಸ್ಥಗಿತಗೊಂಡ ಸಂಪ್ರದಾಯದ ವಿರೋಧಿಗಳಾಗಿ ಪರಂಪರೆಯನ್ನು ಅನುಸರಿಸುತ್ತಾರೆ. ಹಾಗಾಗಿ ಪ್ರಸಿದ್ಧ ನಾಟಕಕಾರ ಬರ್ಟೋಲ್ಡ್ ಬ್ರೆಕ್ಟ್ ಹೇಳಿದಂತೆ ‘‘ಪರಂಪರೆಯ ಜೊತೆಗೆ ಸಂಬಂಧ ಮತ್ತು ಮುಂದುವರಿಕೆ ಬಂಡಾಯದವರ ಸ್ಪಷ್ಟ ನಿಲುವು’’[೧೩] ಆಗಿದೆ.

ಹೀಗಾಗಿ ಬಂಡಾಯ ಲೇಖಕರು ಈ ಪದದಿಂದಲೇ ಸಂಘಟಿತರಾಗಿ ತಮ್ಮ ಬಂಡಾಯದ ಧ್ವನಿಯನ್ನು ಹಿಂದಿನ ಕಾಲದ ಲೇಖಕರು ವ್ಯಕ್ತಪಡಿಸಿದ ಬಂಡಾಯ ಧ್ವನಿಯೊಂದಿಗೆ ಸಮೀಕರಿಸಿಕೊಂಡಿದ್ದಾರೆ. ಈ ಧ್ವನಿಯನ್ನು ಪೂರ್ತಿಯಾಗಿ ಅಲ್ಲದಿದ್ದರೂ ಆಂಶಿಕವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಇಂತಹ ಬಂಡಾಯ ಮನೋಧರ್ಮವನ್ನು ಗುರುತಿಸುವ ಇಂದಿನ ಬಂಡಾಯ ಲೇಖಕ ಪರಂಪರೆಯೆಂದು ಪರಿಭಾವಿಸುತ್ತಾನೆ.

ದಲಿತ ಲೇಖಕನಿಗೆ ‘‘ಪರಂಪರೆಯು ಸಾಹಿತ್ಯದ ಬಗ್ಗೆ ಚಿಕಿತ್ಸಕ ಸ್ವರೂಪದ ಗೌರವ ಭಾವನೆ ಇದೆ. ಎಂದರೆ ಪರಂಪರೆಯನ್ನು ನಿರಾಕರಿಸುವ ವಿಚಾರ ಒಂದಾದರೆ, ವೈಭವೀಕರಿಸಿ ಅದಕ್ಕೆ ನೇಣು ಬೀಳುವುದು ಇನ್ನೊಂದು ವಿಚಾರ. ಇವೆರಡಕ್ಕಿಂತ ಭಿನ್ನವಾದುದು ಚಿಕಿತ್ಸಕ ಸ್ವರೂಪದ ವಿಚಾರ. ಪರಂಪರೆಯ ಸಾಹಿತ್ಯವನ್ನು ಓದುವ, ಅರ್ಥೈಯಿಸಿಕೊಳ್ಳುವ ತಮ್ಮತನವನ್ನು ಕಂಡುಕೊಳ್ಳುವ ರೀತಿಯೇ ಪ್ರಧಾನವಾದುದು. ಸಾಹಿತ್ಯ ಪರಂಪರೆಯನ್ನು ನಿರಾಕರಿಸುವುದೆಂದರೆ, ಕೊಲೆ ಮಾಡವುದು ಎಂದರ್ಥ. ಹಾಗೆಯೇ ವೈಭವೀಕರಿಸುವುದು ಎಂದರೆ, ಕತ್ತಲಾಗಿಸುವುದು ಅಥವಾ ಕುರುಡಾಗಿಸುವುದು ಎಂದರ್ಥ. ಓದುವ, ವಿಮರ್ಶಿಸುವ, ಅರ್ಥೈಸುವ ಕ್ರಿಯೆ ಎಂದರೆ ಆ ಪರಂಪರೆಯ ಸಾಹಿತ್ಯವನ್ನು ಗೌರವಿಸುವುದು ಎಂದರ್ಥ. ಜೀವಂತವಾಗಿಡುವುದು ಎಂದರ್ಥ. ಹೀಗೆ ದಲಿತರು ಪರಂಪರೆಯ ಸಾಹಿತ್ಯವನ್ನು ವಾಸ್ತವಿಕ ನೆಲೆಯಲ್ಲಿ ನಿಂತು ನೋಡುವ, ವಿಮರ್ಶಿಸುವ ಕೆಲಸ ಮಾಡಿದ್ದಾರೆ ಹಾಗೂ

ಮಾಡುತ್ತಿದ್ದಾರೆ. ಹೀಗೆ ಸ್ಥಾನವನ್ನು ಕೊಡುವುದರೊಂದಿಗೆ ತಮ್ಮತನವನ್ನು ಕಂಡುಕೊಳ್ಳುವುದಾಗಿದೆ, ಎಂದರೆ ಆ ಸಾಹಿತ್ಯದ ಆಕರ ಸಾಮಗ್ರಿಯಿಂದ ತಮ್ಮ ಪೂರ್ವದ ಇತಿಹಾಸ ಕಟ್ಟುವ ಕ್ರಿಯೆಗೆ ಬಳಸಿಕೊಳ್ಳುವುದು, ತಮ್ಮ ಮೂಲ ಎಲ್ಲಿ ಎಂದು ಶೋಧಿಸಿಕೊಳ್ಳುವುದು, ತಮ್ಮ ನೆಲೆಯನ್ನು ಕಂಡುಕೊಳ್ಳುವುದು, ಸಂಸ್ಕೃತಿಯ ಕುರುಹುಗಳನ್ನು ಹೆಕ್ಕಿ ತೆಗೆಯುವುದು, ಹೀಗೆ ಪರಂಪರೆಯನ್ನು ಗೌರವಿಸುವುದರೊಂದಿಗೆ ಅದನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.’’[೧೪]

ಬಂಡಾಯ ಪಂಥದವರು ಹಿಂದಿನವರ ಪರಂಪರೆಯನ್ನು ನೋಡುವ ಪರಿಯು, ದಲಿತ ಲೇಖಕ ನೋಡುವ ಪರಿಯಲ್ಲಿ ವೈವಿಧ್ಯಗಳಾಗಿ ಕಾಣುತ್ತವೆ. ಬಂಡಾಯ ಲೇಖಕ ಅಂಥ ಪರಂಪರೆಯನ್ನು ಮುಂದುವರೆಸಿಕೊಂಡು ಸಾಮಾಜಿಕ ಅಸಮಾನತೆಯ ವಿರುದ್ಧ ತೀವ್ರ ಆಕ್ರೋಶ, ಸಿಟ್ಟನ್ನು ಪ್ರತಿಭಟನೆಯ ಧೋರಣೆಯಾಗಿ ಸ್ವೀಕರಿಸುತ್ತಾನೆ. ಮೇಲೆ ಹೇಳಿದಂತೆ ದಲಿತ ಲೇಖಕನೂ ಇಂಥ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಧೋರಣೆ ತಾಳುತ್ತಾನೆ. ಆದರೆ ಸಿಟ್ಟು, ರೋಷ ತಾಳದೇ ಪರಂಪರೆಯ ಮೂಲಕ ಅವನ ಮೂಲ ಸಂಸ್ಕೃತಿಯ ಹುಡುಕಾಟ, ಇತಿಹಾಸವನ್ನು ಕಟ್ಟುವ ಕ್ರಿಯೆ ಅಂದರೆ ಹೊಸ ಸಮಾಜವನ್ನು ಕಟ್ಟುವ ಕನಸು ಕಾಣುತ್ತಾನೆ.

ಬಂಡಾಯದ ಪರಂಪರೆಯನ್ನು ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಗುರ್ತಿಸಬಹುದು. ಅದು ಆದಿ ಕವಿ ಪಂಪನಿಂದ ಹಿಡಿದು ಆಧುನಿಕ ಕನ್ನಡದ ನವ್ಯ ಸಾಹಿತ್ಯದವರೆಗೂ ಕಂಡುಬರುತ್ತದೆ. ಈ ನಡುವೆ ಗೋಚರಿಸಿದ ಬಂಡಾಯದ ಪರಂಪರೆಯು ಇಂದಿನ ದಲಿತ ಬಂಡಾಯ ಸಾಹಿತ್ಯ ಪ್ರಮುಖವಾಗಿ ಗಮನ ಹರಿಸುತ್ತದೆ. ಸಾಮಾಜಿಕ ಅಸಮತೋಲನಕ್ಕೆ ಹೋರಾಡಿದ ವಚನ ಸಾಹಿತ್ಯ ಈ ಸಾಹಿತ್ಯಕ್ಕೆ ಮೂಲ ಸೆಲೆಯಾಗಿದೆ. ಇಂಥ ಸಾಹಿತ್ಯ ಪರಂಪರೆಯ ಮೂಲಕ ದಲಿತ-ಬಂಡಾಯ ಸಾಹಿತ್ಯ ಕಥೆ-ಕಾದಂಬರಿ, ಕಾವ್ಯ, ನಾಟಕಗಳ ಮೂಲಕ ಇಂದಿನ ಕಾಲ ಪರಿಸ್ಥಿತಿಯನ್ನು ಚಿತ್ರಿಸುತ್ತದೆ. ಹಾಗಾಗಿ ಇಲ್ಲಿನ ಅಧ್ಯಯನದಲ್ಲಿ ದಲಿತ ಬಂಡಾಯ ಕಾದಂಬರಿಗಳ ಪರಂಪರೆಯನ್ನು ನೋಡುವುದಾಗಿದ್ದರಿಂದ ಒಟ್ಟು ಸಾಹಿತ್ಯದ ಪರಂಪರೆಯನ್ನು ವಿಶ್ಲೇಷಣೆಗೆ ತೆಗೆದುಕೊಂಡಿಲ್ಲ. ಸಂಕ್ಷಿಪ್ತವಾಗಿ ಅದನ್ನು ವಿವರಿಸುವ ಮೂಲಕ ಪ್ರಕೃತ ಅಧ್ಯಯನವನ್ನು ಮುಂದುವರೆಸಲಾಗಿದೆ. ದಲಿತ-ಬಂಡಾಯ ಕಾದಂಬರಿಗಳಲ್ಲಿ ಚಿತ್ರಿತಗೊಂಡಿರುವ ವೇಶ್ಯಾ ಸಮಸ್ಯೆ, ಜಾತಿಪದ್ಧತಿ, ಲಿಂಗಬೇಧದಂತಹ ಸಮಸ್ಯೆಗಳು ೧೨ನೇ ಶತಮಾನದಲ್ಲಿ ವಚನಕಾರರು ಮೊಟ್ಟ ಮೊದಲ ಬಾರಿಗೆ ಧ್ವನಿಯನ್ನು ಎತ್ತಿರುವುದು ಗಮನಾರ್ಹ ಸಂಗತಿ. ಆದರೆ ವಚನಕಾರರು ಅಂಥ ಸಮಸ್ಯೆಗಳನ್ನು ಧಾರ್ಮಿಕ ನೆಲೆಯಲ್ಲಿ ಪರಿಹರಿಸಲು ಪ್ರಯತ್ನಪಟ್ಟರು. ಅಲ್ಲದೇ ಆಡುಭಾಷೆಯನ್ನೇ ಸಂವಹನಕ್ಕೆ ಬಳಸಿಕೊಂಡರು. ಯಾವುದೇ ಒಂದು ಸಮುದಾಯದ ಆಶೋತ್ತರಗಳಿಂದ ವಚನ ಚಳುವಳಿ ಬರಲಿಲ್ಲ. ಒಟ್ಟು ಸಮಾಜದ ನಿಲುವನ್ನು

ಬದಲಾಯಿಸುವುದು ಆ ಚಳುವಳಿಯ ಮುಖ್ಯ ಧೋರಣೆಯಾಗಿತ್ತು. ಆದ್ದರಿಂದ ಪದ್ಯದ ಮೂಲಕ ಕೆಳವರ್ಗಗಳ ಒಟ್ಟು ಸಾಂಸ್ಕೃತಿಕ ನೋಟಗಳನ್ನು ನೀಡಲಾಗಲಿಲ್ಲವೆನ್ನಬಹುದು. ಆದರೆ ಮುಂದೆ ಇಂತಹ ಆಶೋತ್ತರಗಳನ್ನು ಹೊತ್ತು ತಂದಂತಹ ದಲಿತ-ಬಂಡಾಯ ಸಾಹಿತಿಗಳು ಅಂಥ ಸಮಸ್ಯೆಯನ್ನೇ ಎತ್ತಿಕೊಂಡು ಒಟ್ಟು ಕೆಳಸಂಸ್ಕೃತಿಯ ಬದುಕನ್ನು ಬಯಲುಗೊಳಿಸುತ್ತಾ ಹೊಸ ಬದುಕಿನತ್ತ ಬದಲಾವಣೆಗಾಗಿ ಹಂಬಲಿಸುವಂತಾಯಿತು. ಪ್ರಮುಖವಾಗಿ ವಚನಕಾರರು ಎತ್ತಿದ ಸಮಸ್ಯೆಯನ್ನೇ ಇವರು ಸಂಪೂರ್ಣ ಅಂದರೆ, ವ್ಯಕ್ತಿಗತವಾಗಿ ನೋಡದೇ ಕೆಳಸಮುದಾಯಗಳ ದೃಷ್ಟಿಯಿಂದ ನೋಡಿದರು. ಇಂಥ ಪರಂಪರೆಯು ಆಧುನಿಕ ಕನ್ನಡ ಕಾದಂಬರಿಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಸ್ವತಂತ್ರ ಪೂರ್ವದಲ್ಲಿ ರಚಿತಗೊಂಡ ಕಾದಂಬರಿಗಳಲ್ಲಿ ವೇಶ್ಯಾ ಪದ್ಧತಿಯು ಪ್ರಖರವಾಗಿ ಚಿತ್ರಿತಗೊಂಡಿದೆ. "ಆದರೆ ಆ ಸಮಸ್ಯೆಯ ಜೊತೆಗೆ ಈ ಕಾದಂಬರಿಗಳು ಸಮಾಜಕ್ಕೆ ಒಂದು ಸಮಸ್ಯೆಯಾಗಿ ಪರಿಣಮಿಸುವ ರೀತಿಯಲ್ಲಿ ಬೆಳೆದುದೇ ಹೊರತು, ಹೆಣ್ಣಿನ ದೇಹವಿಕ್ರಯದ ಈ ಅವಹೇಳನಕರವಾದ ಅಂಶದ ಮೇಲೆ ಕ್ಷಕಿರಣಗಳನ್ನು ಬೀರಿ ಗಂಭೀರವಾದ ಪರಿಭಾವನೆಗೆ ಕಾರಣವಾಗುವಂತಹ ಕೃತಿಗಳು ಬರಲಿಲ್ಲ."[೧೯] ಬದಲಾಗಿ ಜನಪ್ರಿಯತೆಗಳಿಸುವ ಹಂಬಲದಿಂದ ಅಂಥ ಸಮಸ್ಯೆಯನ್ನು ದಟ್ಟವಾಗಿ ವರ್ಣನೆ ಮಾಡಿದರು. ಅತೃಪ್ತ ಕಾಮನೆಗಳು ವಿಕೃತಿಯಾಗೇ ಉಳಿದುಕೊಂಡವು.

ಇಂಥ ಸಮಸ್ಯೆಯನ್ನು ಗಂಭೀರವಾಗಿ ನೋಡಲು ಪ್ರಯತ್ನಿಸಿದವರೆಂದರೆ ಪ್ರಗತಿಶೀಲ ಪಂಥದವರು, ಅದರಲ್ಲೂ ಬಸವರಾಜ ಕಟ್ಟೀಮನಿಯವರು 'ಬೀದಿಯಲ್ಲಿ ಬಿದ್ದವಳು' 'ನೀ ನನ್ನ ಮುಟ್ಟಬೇಡ' ಕಾದಂಬರಿಗಳಲ್ಲಿ ವೇಶ್ಯಾ ವೃತ್ತಿಗೆ ತೊಡಗಿಕೊಂಡ ಹೆಣ್ಣಿನ ವರ್ಣನೆ ಮಾಡದೇ ಆ ಹೆಣ್ಣು ಅಂಥ ವೃತ್ತಿಗೆ ಇಳಿಯಲು ಕಾರಣಗಳನ್ನು ಶೋಧಿಸುತ್ತಾರೆ. 'ನೀ ನನ್ನ ಮುಟ್ಟಬೇಡ' ಕಾದಂಬರಿಯಲ್ಲಿ ಹೊಲೆಯರ ಹೆಣ್ಣೊಬ್ಬಳು ಉತ್ತಮರೆಂಬುವರ ಕಣ್ಣಿಗೆ ಬಿದ್ದು ಆಕೆಗಾಗಿ ಅವರಲ್ಲಿ ಸ್ಪರ್ಧೆ ಪ್ರತಿಸ್ಪರ್ಧೆಗಳು ನಡೆದು ಆಕೆ ವೇಶ್ಯೆಯ ಮಟ್ಟಕ್ಕಿಳಿಯಬೇಕಾಗಿ ಬರುತ್ತದೆ. ಕುಂ.ವೀ.ಯವರು ಇದೇ ಪರಂಪರೆಯನ್ನು 'ಕಪ್ಪು' ಕಾದಂಬರಿಯಲ್ಲಿ ಮುಂದುವರಿಸುತ್ತಾರೆ. ಇಲ್ಲಿ ಕೆಳವರ್ಗದ ಹೆಣ್ಣೊಬ್ಬಳನ್ನು ಬಸವಿ ಮಾಡುವ ಹಣಾಹಣಿಯಲ್ಲಿ ತೊಡಗಿದರೆ, ಇದನ್ನು ಹೆಣ್ಣು ನಿರಾಕರಿಸುತ್ತಾಳೆ. ಅವಳ ಮೂಲಕ ಸಂಪ್ರದಾಯ ನಾಶಗೊಳ್ಳುತ್ತದೆ. ಕೊನೆಗೆ ಬಸವಿಯಾಗದೆಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಲ್ಲಿ ಕುಂ.ವೀ.ಯವರು ಪರಂಪರೆಯನ್ನು ಬೆಳೆಸಿದರಾದರೂ ಆ ಮೂಲಕ ಅಸಹಾಯಕ ಹೆಣ್ಣಿಗೆ ಸ್ವತಂತ್ರಕೊಡಿಸುವ ಕಡೆ ಆಸಕ್ತಿವಹಿಸುತ್ತಾರೆ. ಬಸವರಾಜ ಧರ್ಮದ ಹೆಸರಿನಲ್ಲಿ ಅಸಹಾಯಕ ಹೆಣ್ಣುಗಳನ್ನು ಸೂಳೆಯಾಗಿ ಮಾಡುವ ಪ್ರತಿಷ್ಟಿತ ವರ್ಗಗಳ ಸಂಚನ್ನು ಬಯಲುಗೊಳಿಸುತ್ತಾರೆ. ಕುಂ.ವೀ.ಯವರು ಇಂಥ ವಿಕೃತಿಗಳನ್ನು ಬಯಲುಗೊಳಿಸುತ್ತಲೇ ಅಂಥ ವ್ಯವಸ್ಥೆಯ ವಿರುದ್ಧ

ಪ್ರತಿಭಟನೆಯ ಧೋರಣೆಯನ್ನು ತಾಳುತ್ತಾರೆ. ಆ ಮೂಲಕ ಪ್ರತಿಸಂಸ್ಕೃತಿಯ ನಿರ್ಮಾಣಕ್ಕಾಗಿ ಹಂಬಲಿಸುತ್ತಾರೆ. (ಮಾಗಿ, ಕುರುಮಯ್ಯ ಮತ್ತು ಅಂಕುಶದೊಡ್ಡಿ) ದಲಿತ-ಬಂಡಾಯ ಕಾದಂಬರಿಗಳೆಲ್ಲವೂ ಇಂಥ ಸಮಸ್ಯೆಯನ್ನು ಪರಂಪರೆಯ ಮೂಲಕ ವಾಸ್ತವ ಸ್ಥಿತಿಯ ಬದುಕನ್ನು ಅನಾವರಣಗೊಳಿಸುತ್ತವೆ. ಟಿ.ಎಸ್. ಎಲಿಯೆಟ್ ಹೇಳುವಂತೆ

"Tradition is a matter of much windes Significance. it cannot be inherited and if you want it you must obtain it by great labour"[೧೬]

ಪರಂಪರೆಯನ್ನು ಅರಗಿಸಿಕೊಂಡು ಬರೆಯಲಾಗದ ಯಾವುದೇ ಲೇಖಕನ ಕೃತಿ ಮಹತ್ತರವಾಗಲಾರದೆಂಬ ಎಲಿಯಟ್ಟನ ಮಾತು ಗಮನಾರ್ಹವಾದುದು. ಆದರೆ "ಕನ್ನಡ ಸಾಹಿತ್ಯ ಪರಂಪರೆಯು ಬಂಡಾಯ ಸಾಹಿತಿಗೆ ಅಭಿಮಾನದ ಸಂಗತಿಯೇ ವಿನಾ ಪರಂಪರೆಯ ಪ್ರವಚನ ಮಾಡುವುದೇ ಆತನ ಗುರಿಯಲ್ಲ, ಹೊಸ ಸಾಂಸ್ಕೃತಿಕ ಪರಂಪರೆಯ ನಿರ್ಮಾಣ ಹಾಗೂ ಎಲ್ಲಂದದ ಸಮಾನತೆಯನ್ನು ಹೊಂದಿದ ಸಮಾಜ ಕಟ್ಟುವುದು ಆತನ ಮುಖ್ಯ ಉದ್ದೇಶ."[೧೭] ಆದ್ದರಿಂದಲೇ ಒಟ್ಟು ಸಾಹಿತ್ಯ ಪರಂಪರೆಗೆ ಜೋತು ಬೀಳದೆ ಆ ಸಾಹಿತ್ಯ ಆಂಶಿಕವಾಗಿ ಅಡಗಿಸಿಕೊಂಡಿರುವ ಬಂಡಾಯದ ಧ್ವನಿಯನ್ನು ಮೌಲ್ಯವಾಗಿ ಸ್ವೀಕರಿಸಿದೆ.

ದಲಿತ ಬಂಡಾಯ ಸಾಹಿತ್ಯ ವಚನ-ಚಳುವಳಿ ಹುಟ್ಟುಹಾಕಿದ ಆಡು ಮಾತಿನ ಪರಂಪರೆಯನ್ನು ವಿಶಿಷ್ಟವಾಗಿ ಪರಿಗಣಿಸಿಕೊಂಡು ಕ್ರಿಯಾತ್ಮಕವಾಗಿ ಬೆಳೆಯುತ್ತದೆ. ಈ ಹಿನ್ನೆಲೆಯಲ್ಲಿ ದಲಿತ ಬಂಡಾಯ ಕಾದಂಬರಿಗಳು 'ಆಡುಮಾತಿನ' ಭಾಷಾ ಪ್ರಯೋಗಗಳಿಂದ ತುಂಬಿವೆ. ಈ ಪ್ರಯೋಗ ಸಮಕಾಲೀನ ಸಂದರ್ಭದ ಅನಿವಾರ್ಯವೂ ಆಗಿದೆ. ಯಾಕೆಂದರೆ, ಬಂಡಾಯ ಸಾಹಿತ್ಯವೆಂಬುದು ಒಂದು ಮನೋಧರ್ಮವಾಗಿ ವ್ಯವಸ್ಥೆಯ ಕ್ರೌರ್ಯವನ್ನು ಪ್ರಶ್ನಿಸಿ ನೊಂದವರ ಬದುಕನ್ನು ಹಸನಗೊಳಿಸುವುದೇ ಆಗಿದೆ. ಆದ್ದರಿಂದಲೇ ಕೆಳವರ್ಗಗಳ ಭಾಷೆ, ಸಾಹಿತ್ಯ, ಕಲೆ, ಬದುಕು ಹೀಗೆ ಒಟ್ಟು ಸಂಸ್ಕೃತಿಯನ್ನು ಕಾದಂಬರಿಗಳು ಚಿತ್ರಿಸುತ್ತವೆ. ಮತ್ತು ದಾಖಲಿಸುತ್ತವೆ. ದಲಿತೀಯ ಕಾದಂಬರಿಗಳು ದಲಿತ ಸಂವೇದನೆಯಿಂದ ದಲಿತರ ಸಂಸ್ಕೃತಿಯನ್ನು ದಾಖಲಿಸುವತ್ತ ಸಾಗಿವೆ. ದಲಿತರ ಸಮಸ್ಯೆಗಳು, ಅವರ ಕುಟುಂಬ ವ್ಯವಸ್ಥೆ, ಆಚರಣೆ, ನಂಬಿಕೆಗಳು, ಬದಲಾಗುತ್ತಿರುವ ಮೌಲ್ಯಗಳೊಂದಿಗಿನ ಸಂಘರ್ಷ, ರಾಜಕೀಯ ಪ್ರಜ್ಞೆ, ಪ್ರತಿಭಟನೆಯ ವಿವರಗಳು ಈ ಕಾದಂಬರಿಗಳಲ್ಲಿ ಕಾಣಿಸಿಕೊಂಡಿವೆ. ಹಾಗಾಗಿ "ತಮ್ಮ ಸಾಹಿತ್ಯವನ್ನು ತಾವೇ ವಿಮರ್ಶಿಸಿಕೊಂಡು ಸಾಹಿತ್ಯ ಚಳುವಳಿಗೆ ಹೊಸ ಬಗೆಯ ಚಾಲನೆಯನ್ನು ಒದಗಿಸುವ ಪರಂಪರೆಯನ್ನು ಆರಂಭಿಸಿದರು"[೧೮] ಇದಕ್ಕೂ ಮುನ್ನ "೧೯೩೦ರ ದಶಕದಲ್ಲಿಯೇ ಜಿ.ವೆಂಕಟಯ್ಯನವರು ಬರೆದ 'ಮುರಿದ ಮದುವೆ', 'ನೊಂದ ಜೀವ', 'ಚಂದನದ

ಕೊರಡು' ಕಾದಂಬರಿಗಳು ದಲಿತ ಸಮಾಜದ ಬೇರೆ ಬೇರೆ ದೃಶ್ಯಗಳನ್ನು ಒದಗಿಸುತ್ತವೆ. ಇವು ಆರಂಭದ ದಲಿತ ಕಾದಂಬರಿಗಳೆಂದು ಗುರುತಿಸಲಾಗುತ್ತದೆ.''[೧೯]

ದಲಿತೀಯ ಕಾದಂಬರಿಗಳಿಗೆ ಜಿ.ವೆಂಕಟಯ್ಯನವರ ಕಾದಂಬರಿಗಳು ಪರಂಪರೆಯಾದಂತೆ, ಮರಾಠಿ ದಲಿತ ಆತ್ಮಚರಿತ್ರೆಗಳು ಪ್ರೇರಕವಾಗಿವೆ. ಇವು ಸಮಕಾಲೀನ ನೈಜ ಬದುಕನ್ನು, ಪ್ರಜ್ಞೆಯನ್ನು ಮೂಡಿಸುತ್ತವೆ. ಆದ್ದರಿಂದಲೇ ಕುಸುಮ ಬಾಲೆಯನ್ನು ಕುರಿತು ಯು.ಆರ್.ಅನಂತಮೂರ್ತಿಯವರು ಹೀಗೆ ಅಭಿಪ್ರಾಯ ಪಡುತ್ತಾರೆ, ''ಕುಸುಮಬಾಲೆಯಲ್ಲಿ ವ್ಯಕ್ತವಾಗುವಂತೆ ದಲಿತ ಬದುಕಿಗೆ ಒಂದು ಪರಂಪರೆಯಿದೆ. ಆ ಪರಂಪರೆಯಿಂದ ದೊರೆತ ಸ್ಥಳೀಯ ತಿಳುವಳಿಕೆಯಿದೆ. ಬದುಕುವ ಛಲ, ಜೀವ ಪ್ರೀತಿ ಇವೆ. ದಲಿತರಿಗೆ ಬದುಕುವ ಉಪಾಯಗಳೂ ಗೊತ್ತಿವೆ.''[೨೦] ಎಂಬುವಲ್ಲಿ ವಾಸ್ತವ ಹಾಗೂ ಚರಿತ್ರೆಯ ಪರಂಪರೆ ಗೋಚರವಾಗುತ್ತದೆ.

ಈ ಕಾದಂಬರಿಗಳು ಮಾನವತಾವಾದಿ ಪರಂಪರೆಯನ್ನು ಹೊಂದಿವೆ. ಯಾಕೆಂದರೆ, ದಲಿತ ಸಂವೇದನೆ ಮೂಲತಃ ಸಮಾನತೆಗಾಗಿ ಹಂಬಲಿಸುತ್ತಿರುವ ಸಂದರ್ಭದಲ್ಲಿ ಮಾನವೀಯತೆಯನ್ನು ಮೈಗೂಡಿಸಿಕೊಂಡಿದೆ. ಆ ಮೂಲಕ ಶೋಷಕರ ಮನಪರಿವರ್ತನೆ ಮಾಡುವ ಆಶಯವೂ ಇದೆ. ಮೂಲತಃ ಕೆಳವರ್ಗಗಳು ಮಾನವೀಯವಾಗಿಯೇ ಸಮಾಜದೊಂದಿಗಿನ ಸಂಬಂಧದ ಅನನ್ಯತೆಯನ್ನು ಕಾಣಲೂ ಯತ್ನಿಸುತ್ತಾನೆ. ಈ ಸಂಬಂಧಗಳ ಪರಂಪರೆ ಶತಮಾನಗಳ ಹಿಂದಿನಿಂದಲೂ ಪಡೆದಿದ್ದಾನೆ. ಮನಜ ಅವರ 'ಮಾಗಿ' ಕಾದಂಬರಿಯು ದಲಿತ ಬದುಕಿನ ಸಾಂಸ್ಕೃತಿಕ ದಾಖಲೆಯನ್ನು ಒದಗಿಸುತ್ತದೆ. ದಲಿತ ಕುಟುಂಬ ಒಡೆದು ಹಾಳಾಗುವ ಚಿತ್ರಣವನ್ನು ನೀಡುತ್ತದೆ. ಗ್ರಾಮೀಣ ಬದುಕಿನ ದಟ್ಟವಾದ ಚಿತ್ರಣವು ವಾಸ್ತವಿಕ ನೆಲೆಯಲ್ಲಿ ಪರಂಪರೆಯ ಮೂಲಕ ಒಳಗೊಂಡು ಬರುವುದು ಗಮನಾರ್ಹವಾಗಿದೆ.

ಟಿ.ಪಿ.ಅಶೋಕ ಅವರು ಅಭಿಪ್ರಾಯ ಪಡುವಂತೆ ''ಮಾಗಿ ಕೂಡ ಒಂದು ಸಮರ್ಥ ರಚನೆ. ಆದರೆ ಅದು ಯಾಕೆ ಅನನ್ಯವೆಂದು ತೋರುವುದಿಲ್ಲ? ದಲಿತ ಸಾಹಿತ್ಯ ಸಂದರ್ಭದಲ್ಲಿ ಮನಜ ಕೊಂಚ ಬೇರೆ ದಾರಿ ಹಿಡಿದಿದ್ದಾರೆ. ಆದರೆ 'ಮಾಗಿ' ಕನ್ನಡದ ಉದಾರವಾದಿ ಮಾನವತಾವಾದಿ ಕಾದಂಬರಿ ಪರಂಪರೆಗೆ ಸೇರಿದ್ದು, ತಾತ್ವಿಕವಾಗಿ 'ಮರಳಿ ಮಣ್ಣಿಗೆ' ಹತ್ತಿರದ ಸಂಬಂಧವನ್ನು ಹೊಂದಿದೆ.''[೨೧] ದಲಿತರು ಸ್ವಾತಂತ್ರ್ಯ ಪೂರ್ವ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾಣಿಸಿಕೊಳ್ಳದಿರುವುದನ್ನೂ ಅವರು ಟಿ.ಪಿ.ಅಶೋಕರು ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಗುರುತಿಸುತ್ತಾರೆ. ಆದರೆ ಒಟ್ಟು ದಲಿತರ ಉದಾರತೆಯನ್ನು ಆ ಕಾದಂಬರಿಯಲ್ಲಿ ಗುರ್ತಿಸಲು ಸಾಧ್ಯವಿಲ್ಲವೆಂಬುದನ್ನು ಗಮನಿಸಬೇಕಿದೆ. ಯಾಕೆಂದರೆ, ದಲಿತ ಸಂವೇದನೆ ದಲಿತ ಲೇಖಕನಿಂದಲೇ ಸೃಜನಗೊಂಡು ಸಾಹಿತ್ಯ ಪರಿಪೂರ್ಣತೆಯನ್ನು ಪಡೆಯುತ್ತದೆ.

ಆದರೆ ದಲಿತ ಬಂಡಾಯ ಕಾದಂಬರಿಗಳು ಚಿತ್ರಸುವ ವಸ್ತುವಿನ ಆಂಶಿಕ ರೂಪವನ್ನು ಪೂರ್ವದ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಬಂದಿರುವುದು ತಿಳಿಯುತ್ತದೆ. ಜಾತಿಪದ್ಧತಿ, ಲಿಂಗಬೇಧ, ಮಹಿಳಾ-ಶೋಷಣೆ, ದಲಿತ ಬದುಕಿನ ಚಿತ್ರಣ ಮುಂತಾದ ವಸ್ತುಗಳು ಪ್ರಧಾನವಾಗಿ ಗೋಚರಿಸುವುದಿಲ್ಲ. ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯು ದಲಿತ ಚೋಮನ ಜೀವನವನ್ನು ಕುರಿತು ದಾಖಲಿಸುತ್ತದೆ. ಹಾಗೆಯೇ ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಹೂವಯ್ಯ, ಮುಕಂದಯ್ಯ, ಗುತ್ತಿ, ತಿಮ್ಮಿ, ಪೀಂಚಲು, ಎಂಬಂತಹ ದಲಿತ ಪಾತ್ರಗಳನ್ನು ಸೃಷ್ಟಿಸಿ, ಸ್ಪಂದಿಸುತ್ತಾರೆ.

ಶಿವರಾಮಕಾರಂತರಿಗೆ 'ಚೋಮನ ದುಡಿ' ಸೃಷ್ಟಿಗೆ ಮುಲ್ಕರಾಜ್ ಆನಂದರ 'ಅನ್‌ಟಚೆಬಲ್' ಕಾದಂಬರಿ ಪೂರಕವಾಗಿದೆ ಎಂಬುದನ್ನು ಗುರ್ತಿಸಬಹುದು. ಅನ್‌ಟಚ್‌ಎಬಲ್ ಕಾದಂಬರಿಯಲ್ಲಿ 'ಬಾಕ' ಒಂದು ದಿನದ ಬದುಕಿನ ಅನುಭವವನ್ನು ಚಿತ್ರಿಸಿರುವ ಹಾಗೆ ಕಾರಂತರು ಚೋಮನ ಇಡೀ ಬದುಕನ್ನು ಚಿತ್ರಣಗೊಳಿಸುತ್ತಾರೆ. ಇಂಥ ಪರಂಪರೆಯನ್ನು ಜಿ.ಎಸ್.ಆಮೂರರು ಈ ಎರಡೂ ಕಾದಂಬರಿಗಳನ್ನು ಸಮೀಕರಿಸಿ 'ಬಾಕ' ಹಾಗೂ 'ಚೋಮನ' ಅಸ್ಪೃಶ್ಯತೆಯ ಅನುಭವವನ್ನು ಸಮೀಕರಿಸಿದ್ದಾರೆ." ಈ ಪರಂಪರೆಯು ೭೦ರ ದಶಕದ ದಲಿತ-ಬಂಡಾಯ ಕಾದಂಬರಿಗಳಲ್ಲಿ ಕಾಣಿಸಿಕೊಂಡಿದೆ.

ಹೀಗೆ ದಲಿತ-ಬಂಡಾಯ ಕಾದಂಬರಿಗಳು ಕನ್ನಡ ಸಾಹಿತ್ಯ ಪರಂಪರೆಯನ್ನು ಮೈಗೂಡಿಸಿಕೊಂಡು, ಸಮಕಾಲೀನ ಸಂದರ್ಭದ ದಲಿತ, ಕೆಳವರ್ಗದ, ಬಡವರ ಪರಂಪರೆಯೊಂದಿಗೆ ರೂಪ ಪಡೆದಿದೆ ಎನ್ನುವಲ್ಲಿ ಸಂಶಯ ಕಾಣದು. ದಲಿತರು ಮೌಖಿಕ ಪರಂಪರೆಯಲ್ಲಿ ಮುಕ್ತವಾಗಿ ಮತ್ತು ಗಟ್ಟಿಯಾಗಿ ತಮ್ಮ ಅಭೀಪ್ಸೆಗಳನ್ನು ಕನ್ನಡದಲ್ಲಿ ಪ್ರಕಟಿಸಿದ್ದಾರೆ. ಆದರೆ ಶಿಷ್ಟ ಸಾಹಿತ್ಯಕ್ಕೆ ಬಂದಾಗ ಅವರ ರಚನೆಗಳು ಒಂದು ರೀತಿಯ ಹೋರಾಟದ, ತೊಳಲಾಟದ, ಕೆಲವೊಮ್ಮೆ ದ್ವಂದ್ವ ಅಭಿವ್ಯಕ್ತಿಗಳು ಆಗುವ ಅನಿವಾರ್ಯತೆ ಇದೆ.[೨೨]

## ಪ್ರಭಾವ

ಒಂದು ನಿರ್ದಿಷ್ಟ ಸಾಹಿತ್ಯವು ತನ್ನ ಪರಂಪರೆಯ ಸಾಧ್ಯತೆಗಳನ್ನು ತೀರಿಸಿಕೊಂಡು ಜಡ ರೂಪ ತಾಳುವ ಹೊತ್ತಿಗೆ ಮತ್ತೊಂದು ಸಾಹಿತ್ಯ ಪರಂಪರೆಯ ಉಗಮಕ್ಕೆ ಕಾರಣವಾಗುವ ಅಂಶಗಳನ್ನು ತನ್ನ ಒಡಲಲ್ಲಿ ಧರಿಸಿಕೊಂಡಿರುತ್ತದೆ. ಇದರ ಜೊತೆಗೆ ಪ್ರಮುಖವಾಗಿ ಅನ್ಯ ದೇಶದ, ಕಾಲದ, ಸಾಮಾಜದಲ್ಲಿನ ವಾಸ್ತವಿಕ ಘಟನೆಗಳು ಹೊಸ ಸಾಹಿತ್ಯ ಉಗಮಕ್ಕೆ ಕಾರಣವಾಗುತ್ತವೆ. ಹೀಗೆ ಅನ್ಯ ಪ್ರಭಾವಕ್ಕೆ ಒಳಗಾಗುವಾಗ, ಪ್ರಭಾವಕ್ಕೆ ಒಳಗಾದ ಸೃಜನಶೀಲತೆಯನ್ನು ಪ್ರಶ್ನಿಸುವುದಿಲ್ಲ. ಬದಲಾಗಿ,

ಸೃಜನಶೀಲತೆಯನ್ನು ಅರ್ಥೈಸುವುದಕ್ಕೆ ಸಹಕಾರಿಯಾಗುತ್ತದೆ. ಶಾಂತಿನಾಥ ದೇಸಾಯಿಯವರು ಗುರುತಿಸಿದಂತೆ "ಸೃಜನಾತ್ಮಕ ಪ್ರಭಾವದ ಸಂದರ್ಭದಲ್ಲಿ ಲೇಖಕನ ಪ್ರತಿಭೆ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದಿಲ್ಲ. ತದ್ವಿರುದ್ಧವಾಗಿ ಹೊರಗಿನ ಪ್ರಭಾವದಿಂದ ಲೇಖಕ ತನ್ನ ತನವನ್ನು ಶೋಧಿಸುತ್ತಾನೆ. ರೂಪಿಸುತ್ತಾನೆ."[೨]

ಹಾಗಾಗಿ ಒಂದು ಸಾಹಿತ್ಯ ಸೃಜನತೆಯು ಸಾಹಿತ್ಯಿಕ ಮತ್ತು ಸಾಹಿತ್ಯೇತರ ಅಂಶಗಳಿಂದಲೂ ಪ್ರಭಾವಕ್ಕೆ ಒಳಗಾಗುತ್ತಾನೆ. ಹೀಗೆ ಪ್ರಭಾವಕ್ಕೆ ಒಳಗಾಗುವಾಗ ಲೇಖಕ ಯಾಂತ್ರಿಕವಾಗಿ ಒಳಗಾಗುವುದಿಲ್ಲ. ಬದಲಾಗಿ ತನ್ನ ಕಾಲದ ಅವಶ್ಯಕತೆಗಳಿಗೆ ಅನುಗುಣವಾಗಿ ತನಗೆಷ್ಟು ಬೇಕೋ ಅಷ್ಟನ್ನು ಪರಿಸರದಿಂದ ಪಡೆಯುತ್ತಾನೆ. ಹಾಗಾಗಿ ಲೇಖಕ ಸಾಹಿತ್ಯದ ಮೂಲಕ ಅಂತರ್ಮುಖಿಯಾಗಿ ಹಾಗೂ ಸಮಾಜದ ಬಾಹ್ಯ ಅಂಶಗಳನ್ನು ತನ್ನ ಸೃಜನತೆಯಲ್ಲಿ ರೂಪಿಸಿಕೊಳ್ಳುತ್ತಾನೆ. ಹೀಗೆ ಸಂಬಂಧ ಕಟ್ಟಿಕೊಳ್ಳುವಾಗ ಒಂದೇ ವಿಧವಾಗಿರುವುದಿಲ್ಲ. ಇರಬೇಕಾಗಿಯೂ ಇಲ್ಲ. ಏಕೆಂದರೆ, ಸಾಮಾಜಿಕ ಕ್ರಿಯೆಗಳು ಆಯಾ ಕಾಲ ಘಟ್ಟದೊಂದಿಗೆ ಚಲನೆಯನ್ನು ಹೊಂದಿರುತ್ತವೆ. ಹಾಗೆಯೇ ಲೇಖಕ ಕೂಡ ಅಂಥ ಚಲನೆಯ ಕಡೆ ಮುಖಮಾಡುತ್ತಾನೆ. ಆಯಾ ಕಾಲ ಸಂದರ್ಭದಲ್ಲಿ ಜರುಗುವ ಘಟನೆಗಳು ಭಿನ್ನ ಭಿನ್ನವಾಗಿರುವುದರಿಂದ ಲೇಖಕ ಭಿನ್ನ ಪರಿಸರದ ಪ್ರಭಾವಕ್ಕೆ ಒಳಗಾಗುತ್ತಾನೆ. ಹೀಗಾಗಿ ಪ್ರಭಾವವನ್ನು ಗುರುತಿಸುವುದರಿಂದ ಕೃತಿಯ ಸ್ವರೂಪವನ್ನು ಅರ್ಥೈಸಲು ಸಹಕಾರಿಯಾಗುತ್ತದೆ.

ದಲಿತ-ಬಂಡಾಯ ಸಾಹಿತ್ಯ ಚಳವಳಿ ೭೦ರ ದಶಕದಲ್ಲಿ ಉಗಮಗೊಂಡಿತು. ಇದರ ಹುಟ್ಟಿನ ಹಿಂದೆ ಆ ದಶಕದಲ್ಲಿ ನಡೆದ ಅನೇಕ ಘಟನೆಗಳು ಕಾರಣವಾಗಿ ನಿಂತಿವೆ. ಹಾಗೆಯೇ ಚಳವಳಿಗಳು, ಸಿದ್ಧಾಂತಗಳೂ ಪ್ರಮುಖವಾಗಿ ಪ್ರಭಾವ ಬೀರಿವೆ.

ಮೊದಲಿಗೆ ಇಂಡಿಯಾದ ನಿಕೃಷ್ಟ ಜಗತ್ತಿನ ದಲಿತ ಸಂವೇದನೆಯ ಜಾಗೃತಿಗೆ ಅಂಬೇಡ್ಕರ್ ಚಿಂತನೆ ಕಾರಣವಾದರೆ, ಶೂದ್ರ ಜಗತ್ತಿನ ಎಚ್ಚರಕ್ಕೆ ಲೋಹಿಯಾ ಚಿಂತನೆಗಳು ಮತ್ತು ಪ್ರಜಾಪ್ರಭುತ್ವದ ಫಲಗಳು ಹಾಗೂ ವೈಫಲ್ಯಗಳು ಕಾರಣವಾಗಿವೆ. ಜಾತಿ ಕೇಂದ್ರಿತ ಅಂಬೇಡ್ಕರ್ ಚಿಂತನೆಗಳು ಸಹಜವಾಗಿ ದಲಿತರ ಮೊದಲ ಸ್ತರವನ್ನು ಅಲ್ಲಾಡಿಸಿದೆ. ಸಮಾಜವಾದದ ಕನಸು ಕಂಡ ಲೋಹಿಯಾ ಗುರುತಿಸಿದ ಜಾತಿ ವ್ಯವಸ್ಥೆಯ ಜೊತೆಗಿನ ಪ್ರಜಾಪ್ರಭುತ್ವದ ವಿವಿಧ ಮುಖಗಳನ್ನು ಕಂಡುಕೊಳ್ಳುವಲ್ಲಿ ನಮ್ಮ ಲೇಖಕರ ಕೃತಿಗಳು ಪ್ರಜ್ಞಾ ಪೂರ್ವಕವಾಗಿ ಕೆಲಸ ಮಾಡಿವೆಯೆಂಬುದು ಗಮನಾರ್ಹ ಅಂಶ. ಜೊತೆಗೆ ದಲಿತ-ಬಂಡಾಯ ಲೇಖಕರು ಮಹಾರಾಷ್ಟ್ರದ ದಲಿತ ಪ್ಯಾಂಥರ್ ಸಾಹಿತ್ಯ, ಕರ್ನಾಟಕದಲ್ಲಿ ಬಸವಲಿಂಗಪ್ಪನವರ 'ಬೂಸಾ' ಪ್ರಕರಣ, ದೇವರಾಜ ಅರಸರು ತಂದ ಭೂ ಮಸೂದೆ ಕಾಯ್ದೆ, ಹಾವನೂರು ವರದಿ(೧೯೭೬) ಮುಂತಾದ ಚಳವಳಿಗಳಿಂದ ಪ್ರಭಾವಿತಗೊಂಡಿದ್ದಾರೆ. ಹೀಗಾಗಿ ದಲಿತ-

ಬಂಡಾಯದ ಯಾವೊಬ್ಬ ಲೇಖಕನು ಸಿದ್ಧಾಂತಗಳ ಚೌಕಟ್ಟಿನಲ್ಲಿರದೇ ಸಿದ್ಧಾಂತಗಳನ್ನು ತನ್ನ ಸೃಜನತೆಯಲ್ಲಿ ರೂಪಿಸಿಕೊಂಡಿಲ್ಲವೆಂಬುದು ಅವರ ಕಾದಂಬರಿಗಳನ್ನು ಅಧ್ಯಯನ ಮಾಡುವಲ್ಲಿ ಸ್ಪಷ್ಟವಾಗುತ್ತದೆ. ಇದನ್ನು ಬರಗೂರು ರಾಮಚಂದ್ರಪ್ಪನವರು ಸರಿಯಾಗಿಯೇ ಗುರುತಿಸಿದ್ದಾರೆ. "ಬಂಡಾಯ ಸಾಹಿತ್ಯ ಯಾರೊಬ್ಬರ ವೈಯುಕ್ತಿಕ ಪ್ರಯೋಗಾಸಕ್ತಿಯ, ಸ್ವಘೋಷಿತ ನಿಲುವುಗಳ ಅಸಾಹಿತ್ತಿಕ ಕಲ್ಪನೆಯಲ್ಲ. ಆಶಾವಾದ ರಾಜಕೀಯ ಪ್ರಜ್ಞೆಯಿಂದ ಅಸಮಾನತೆಯ ಅಸಹ್ಯ ಅನುಭವದಿಂದ, ಸಾಮಾಜಿಕ ಜವಾಬ್ದಾರಿಯ ಹಿನ್ನಲೆಯಲ್ಲಿ ಸ್ಫೋಟಗೊಂಡ ಚರಿತ್ರೆಯ ಅನಿವಾರ್ಯ ವಾಸ್ತವ."[೨೪] ಇಲ್ಲಿ ಉಲ್ಲೇಖಿಸಲಾದ ತಾತ್ವಿಕ ಅಂಶಗಳು ದಲಿತ-ಬಂಡಾಯ ಕಾದಂಬರಿಗಳಲ್ಲಿ ಹೇಗೆ ಕೆಲಸ ಮಾಡಿವೆ ಎಂಬುದರತ್ತ ಗಮನಹರಿಸಬಹುದಾಗಿದೆ.

ಬಂಡಾಯ ಕಾದಂಬರಿಗಳು ಹೆಚ್ಚಾಗಿ ಮಾರ್ಕ್ಸ್ ಸಿದ್ಧಾಂತಗಳಿಂದ ಪ್ರಭಾವಗೊಂಡಿವೆ. ಈ ಪ್ರಭಾವಕ್ಕೆ ಒಳಗಾದ ದಲಿತೇತರ ಬರಹಗಾರರು ಎಲ್ಲಾ ಜಾತಿಯ ಬಡವರನ್ನು ಸಮಾನರೆಂದು ಗುರುತಿಸಿ, ವರ್ಗ ಸಂಘರ್ಷಕ್ಕೆ ಪ್ರಚೋದನೆ ನೀಡುತ್ತಾರೆ. ಜಾತಿಯನ್ನು ಇವರು ಅಷ್ಟಾಗಿ ಗಮನಿಸುವುದಿಲ್ಲ ಬದಲಾಗಿ ಆರ್ಥಿಕತೆಗೆ ಮಹತ್ವನೀಡುತ್ತಾರೆ. ಈ ನಿಟ್ಟಿನಲ್ಲಿ ಬರಗೂರು ರಾಮಚಂದ್ರಪ್ಪ, ಕುಂ.ವೀರಭದ್ರಪ್ಪ, ಜಂಬಣ್ಣ ಅಮರಚಿಂತ, ಬಿ.ಟಿ.ಲಲಿತಾ ನಾಯ್ಕ, ಚೆನ್ನಣ್ಣ ವಾಲಿಕಾರ ಮುಂತಾದ ಕಾದಂಬರಿಕಾರರು ಮಾರ್ಕ್ಸ್‌ವಾದಿಯ ಹಿನ್ನಲೆಯಿಂದ ರೂಪಗೊಂಡವರಾಗಿದ್ದಾರೆ. ಬರಗೂರರ 'ಬೆಂಕಿ' 'ಒಂದುಊರಿನಕತೆ' 'ಸೂರ್ಯ', ಕಾದಂಬರಿಗಳಲ್ಲಿ ಊಳಿಗಮಾನ್ಯ ವ್ಯವಸ್ಥೆಯಡಿ ಶೋಷಿತ ಸಮುದಾಯಗಳು ವ್ಯವಸ್ಥೆಯ ಎದುರು ದಿಟ್ಟತನದಿಂದ ಎದ್ದು ನಿಲ್ಲಬೇಕಾಗಿದೆ ಎಂಬುದನ್ನು ಗುರುತಿಸುತ್ತಾರೆ. ಅದು ಒಂದು ಬಗೆಯಲ್ಲಿ ವರ್ಣಹೋರಾಟವೂ, ವರ್ಗ ಹೋರಾಟವೂ ಅಂತರ್ಗತವಾಗಿ ನಡೆಯುವ ಸನ್ನಿವೇಶ. "ಈ ಚಲನ ಶೀಲತೆಗೆ ವರ್ಗ ಸಂಘರ್ಷವೇ ಮುಖ್ಯ ಸ್ಫೂರ್ತಿಯಾಗಿದೆ. ಜಾತಿಯನ್ನು ಸೀಳಿಕೊಂಡು ವರ್ಗವಾಗಿ ಬೆಳೆಯುವುದರ ಜೊತೆಗೆ ಇಲ್ಲಿಯ ಮಾದರಿಗಳು ಹಾತೊರೆಯುತ್ತವೆ. ಬಂಡವಾಳ ಶಾಹಿಯ ಪ್ರಭಾವದಿಂದ ಪ್ರತಿ ಜಾತಿಯಲ್ಲೂ ವರ್ಗ ಸಂರಚನೆ ಶುರುವಾಗಿದೆ. ಮತ್ತು ಅದು ಹಾಗೇ ಆಗ ಬೇಕಾಗಿರುವುದು ಒಂದು ಚಾರಿತ್ರಿಕ ಸತ್ಯ ಕೂಡ."[೨೫]

'ಒಂದು ಊರಿನ ಕತೆ' ಕಾದಂಬರಿ ಪ್ರಮುಖವಾದದ್ದು. ಈ ಕಾದಂಬರಿಯಲ್ಲಿ ಜಾತಿಯಾಧಾರಿತ ವ್ಯವಸ್ಥೆಯಡಿಯಲ್ಲಿ ಅಸ್ಪೃಶ್ಯನಾದ ರಾಮು ಹೇಗೆ ಪ್ರತಿಕ್ರಿಯಿಸುತ್ತಾನೆ ಎಂಬುದು ಗಮನಾರ್ಹ ಅಂಶ. ರಾಮು ಅಕ್ಷರ ಕಲಿತೋನಾಗಿದ್ದುದರಿಂದ, ಮೇಲ್ಜಾತಿಯವರ ಮುಖಂಡರಿಗೆ ಹೆದರಲಾರ. ಪಂಚಾಯ್ತಿ ಸಭೆಯಲ್ಲಿ ರಾಮು ಸಿಗರೇಟು ಸೇದುತ್ತಾನೆ. ಇಲ್ಲಿ ಸಭೆಯಲ್ಲಿ ಸಿಗರೇಟು ಹಚ್ಚುವ ಕ್ರಿಯೆ ಸರಿಯೋ ತಪ್ಪೋ ಪ್ರಶ್ನೆಯಲ್ಲ, ಆದರೆ ರಾಮುವಿನ ಈ ಕ್ರಿಯೆ ಅವನ ಸ್ವಾತಂತ್ರ್ಯದ ಸಂಕೇತವಾಗುತ್ತದೆ.

ಇಲ್ಲಿ ಜಾತಿಯಾಧಾರಿತ ವರ್ಗ ಸಂರಚನೆಯುಂಟಾಗುತ್ತದೆ. ರಾಮುವಿನ ಪಾತ್ರದಲ್ಲಿ ಮಾರ್ಕ್ಸ್‌ನ ಸಿದ್ಧಾಂತವನ್ನು ಸೂಕ್ಷ್ಮವಾಗಿ ಕಾಣಿಸಿಕೊಳ್ಳುತ್ತದೆ. ಪಂಚಾಯ್ತಿಯ ಮೆಂಬರು ಮಾಡುವ ಮೇಲ್ಜಾತಿ ಮುಖಂಡರ ಪಂಚಾಯ್ತಿಯಲ್ಲಿ ಕೆಳವರ್ಗದ ರಾಮು ಪ್ರತಿಭಟನೆಯ ಧೋರಣೆಯನ್ನು ತಾಳುತ್ತಾನೆ. ಈ ಧೋರಣೆಯಿಂದ ಶತಮಾನಗಳಿಂದ ಅಸಹಾಯಕರಾದ ಅಸ್ಪೃಶ್ಯ ಸಮುದಾಯ, ವರ್ಗ ಸಂಘಟಿತರಾಗಿ ಮಾತನಾಡಲು ಶುರುಮಾಡುತ್ತಾರೆ. "ಅಧಿಕಾರ ಪಡೆಯಲು ಸಂಘಟನೆ ಅವಶ್ಯಕವಾಗುತ್ತದೆ. ಸಂಘಟನೆಗೆ ಜಾತಿ ಮೊದಲ ಆಧಾರವಾಗುತ್ತದೆ. ಆದರೆ ಯಾವೊಂದು ಜಾತಿಯೂ ನಿರ್ಣಯಕವಾಗುವುದಿಲ್ಲ. ಆಗ ಮುಖ್ಯ ಶಕ್ತಿಯನ್ನು ಒಡೆಯಲು ಬೇರೆ ಬೇರೆ ಜಾತಿ ಒಂದಾಗ ಬೇಕಾಗುತ್ತದೆ."[೨೬] ಇಂಥ ಸಂಘಟನೆ ಅಕ್ಷರಶ್ಯ ರಾಮುವಿನ ಮೂಲಕ ನಡೆಯುತ್ತದೆ.

ಮೆಂಬರು ಮಾಡುವ ಆಯ್ಕೆಯ ಅಂತ್ಯದಲ್ಲಿ ದಲಿತ ವರ್ಗದ ಬಸವಯ್ಯ ಜಮೀನ್ದಾರನ ಕಡೆ ಸೇರುವುದರ ಮೂಲಕ ಶೋಷಕ ಶಕ್ತಿ ಒಂದಾಗುತ್ತದೆ. ಏಕೆಂದರೆ, ಬಸವಯ್ಯ ಜಾತಿಯಿಂದ ಅಸ್ಪೃಶ್ಯನಾಗಿದ್ದರೂ, ಆರ್ಥಿಕ ದೃಷ್ಟಿಯಿಂದ ಸ್ಥಿತಿಯುಳ್ಳವನಾಗಿರುತ್ತಾನೆ. ಹಾಗಾಗಿ ಜಾತಿಯನ್ನು ವರ್ಗಶಕ್ತಿ ಹಿಂದೆ ಹಾಕುತ್ತದೆ. ಈ ಕಡೆ ದಲಿತರೆಲ್ಲರೂ ವರ್ಗ ಶಕ್ತಿಯಾಗಿ ರೂಪುಗೊಳ್ಳುತ್ತಾರೆ. ದಲಿತರಲ್ಲೇ ರಾಮು ಮುಖ್ಯನಾಗುತ್ತಾನೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಜಾತಿಯ ಸಂಘಟನೆಯ ಹಿನ್ನೆಲೆಯಲ್ಲಿ ಜಮೀನ್ದಾರನನ್ನು ಸ್ವಲ್ಪ ಪ್ರಮಾಣದಲ್ಲಿಯಾದರೂ ಅಲುಕಿಸಿದ್ದು ಪ್ರಮುಖವಾಗುತ್ತದೆ.

ಇಂಥದೊಂದು ಪ್ರಸಂಗವನ್ನು ಬರಗೂರರು 'ಸೂರ್ಯ' ಕಾದಂಬರಿಯಲ್ಲಿಯೂ ಕಟ್ಟಿಕೊಡುತ್ತಾರೆ. ಜಮೀನ್ದಾರನ ಮನೆಯ ಜೀತಗಾರ ಕರಿಯ ಗೌಡತಿ ಸೀತಕ್ಕನೊಂದಿಗೆ ಅನೈತಿಕ ಸಂಬಂಧ ಹೊಂದುವ ಮೂಲಕ ಆತನ ಪ್ರಭುತ್ವನ್ನು, ಅಡಗಿಸುತ್ತಾನೆ. ಈ ಸಂದರ್ಭದಲ್ಲಿ ಬರಗೂರರು ಸಮಾಜದಲ್ಲಿ ಭದ್ರವಾಗಿ ನೆಲೆಗೊಂಡ ಊಳಿಗಮಾನ್ಯ ವ್ಯವಸ್ಥೆಯನ್ನು ನಿರ್ವೀರ್ಯಗೊಳಿಸುವ ಆಶಯ ಒಂದಾದರೆ, ಶೋಷಿತ ಕೆಳವರ್ಗಗಳ ಸಮಾನತೆ ಕಾಪಾಡುವ ಆಶಯ ಮತ್ತೊಂದಾಗಿದೆ. ಈ ಎರಡೂ ದೃಷ್ಟಿಕೋನಗಳು ಸಫಲವಾಗಲು ಕರಿಯನನ್ನು ಕೇಂದ್ರವ್ಯಕ್ತಿಯನ್ನಾಗಿ ಮಾಡುತ್ತಾರೆ. ಇದು ಮಾರ್ಕ್ಸ್‌ವಾದಕ್ಕೆ ಹತ್ತಿರವಾದಂತೆಯೂ, ಆ ಸಮಾಜದ ಪರಿಸರ ಅನಿವಾರ್ಯತೆಯೂ ಆಗಿದೆ.

ಮಾರ್ಕ್ಸ್‌ನ ವಿಚಾರ ಸರಣಿಯನ್ನು ದಲಿತ-ಬಂಡಾಯ ಕಾದಂಬರಿಕಾರರು ರೂಢಿಸಿಕೊಂಡರೂ, ಅದನ್ನು ಬಳಸಿಕೊಳ್ಳುವ ರೀತಿ ವಿಭಿನ್ನವಾಗಿರುತ್ತವೆ. ಕೆಲವು ಕಾದಂಬರಿಯ ಉದ್ದಕ್ಕೂ ಆ ವಾದದ ಸರಣಿ ಪ್ರಭಾವಿತಗೊಂಡರೆ, ಇನ್ನೂ ಕೆಲವು ಕಾದಂಬರಿಗಳಲ್ಲಿ ಆಂಶಿಕವಾಗಿ ಕಾಣಿಸಿಕೊಳ್ಳುತ್ತದೆ. ಅದು ಪಾತ್ರಗಳ ಮೂಲಕ ಕೆಲವು ಸನ್ನಿವೇಶಗಳಲ್ಲಿಯೂ ಪ್ರಭಾವಗೊಂಡಿರಬಹುದು. ಏಕೆಂದರೆ ಆಯಾ

ಕಾಲದಲ್ಲಿ ರಚಿತಗೊಂಡ ಕಾದಂಬರಿಯು ಆ ನೆಲದ ವಾಸ್ತವದ ತುಡಿತಗಳನ್ನು ಮೈಗೂಡಿಸಿಕೊಳ್ಳ ಬೇಕಾಗುತ್ತದೆ. ಹೀಗಾಗಿ ಕಾದಂಬರಿಯು ಅಂದಂದಿನ ಸಾಮಾಜಿಕ ಪ್ರಭಾವಗಳನ್ನು ಪಡೆದುಕೊಂಡು ವ್ಯಕ್ತಿವಾದಿ ಸಿದ್ಧಾಂತ ಹಾಗೂ ಸಮಾಜದ ಪ್ರಭಾವಗಳನ್ನು ಒಟ್ಟಿಗೆ ಸ್ವೀಕರಿಸಿಕೊಳ್ಳುತ್ತದೆ. ಇದರಿಂದಾಗಿ ಮಾರ್ಕ್ಸ್‌ಸಿದ್ಧಾಂತವು ಕಾದಂಬರಿಯಲ್ಲಿ ಸಮಸ್ಯೆಯಾಗಿ ಪ್ರಭಾವಕ್ಕೊಳಗಾಗದೇ ಇಡಿಯಾಗಿ ಪಡೆದುಕೊಳ್ಳುತ್ತದೆಂಬುದನ್ನು ಮನಗಾಣಬೇಕಿದೆ.

ಈ ಹಿನ್ನೆಲೆಯಲ್ಲಿ ಕುಂ.ವೀ., ಜಂಬಣ್ಣ ಅಮರಚಿಂತ, ಬಿ.ಟಿ.ಲಲಿತಾನಾಯ್ಕ ಮುಂತಾದವರು ತಮ್ಮ ಕಾದಂಬರಿಗಳಲ್ಲಿ ಇಂತಹ ಪ್ರಭಾವಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ ವ್ಯಾಖ್ಯಾನಿಸಿಕೊಳ್ಳುತ್ತಾರೆ. ಕುಂಬಾರ ವೀರಭದ್ರಪ್ಪನವರು ಆರ್ಥಿಕ ಸಂರಚನೆಯ ಆಧಾರದ ಮೇಲೆ ವರ್ಗ ಸಂಘರ್ಷಣೆಯ ತಾತ್ವಿಕತೆಯನ್ನು ಚರ್ಚಿಸುತ್ತಾರೆ. ಇದು ಅವರ 'ಕಪ್ಪು' ಕಾದಂಬರಿಯಲ್ಲಿ ಗ್ರಹಿಕೆಗೆ ಬರುತ್ತದೆ. ಎರಡು ಊಳಿಗಮಾನ್ಯ ಶಕ್ತಿಗಳು ಪರಸ್ಪರ ದ್ವೇಷದಿಂದಾಗಿ, ಕೆಳವರ್ಗದ ಭರಮಜ್ಜನ ಕುಟುಂಬವನ್ನು ನಾಶಗೊಳಿಸಿದರೆ, ಅಬಲೆಯಾದ ಗೌರಿಯನ್ನು ಲೈಂಗಿಕತೆಗೆ ಬಳಸಿಕೊಳ್ಳುವ ಆತುರದಲ್ಲಿ ಆ ಎರಡೂ ಶಕ್ತಿಗಳು ನಾಶಹೊಂದುತ್ತವೆ. ಅಂದರೆ, ಕುಂ.ವೀ.ಯವರು ಊಳಿಗಮಾನ್ಯ ವ್ಯವಸ್ಥೆಯನ್ನು ನಿರ್ವೀರ್ಯಗೊಳಿಸುವುದು 'ಗೌರಿ'ಯಂಥ ಅಬಲೆಯಿಂದಲೂ ಹೇಗೆ ಸಾಧ್ಯವೆಂಬುದನ್ನು ತೋರಿಸಿಕೊಡುತ್ತಾರೆ.

ಬಿ.ಟಿ.ಲಲಿತಾನಾಯ್ಕರು ಮಾರ್ಕ್ಸ್‌ಸಿದ್ಧಾಂತದೊಂದಿಗೆ 'ಗತಿ' ಕಾದಂಬರಿಯನ್ನು ಚಿತ್ರಿಸುತ್ತಾರೆ. ಕಾದಂಬರಿಯ ಕೊನೆಯಲ್ಲಿ ಮಾರಸಿಂಗ್, ಹರಸಿಂಗ್ ಹಾಗೂ ಪವಾರ್‌ನಂತಹ ಕೆಳವರ್ಗದ ಫ್ಯೂಡಲಿಸ್ಟರು, ಪೋಲೀಸರ ಆಗಮನದಿಂದ ವ್ಯವಸ್ಥೆಯೇ ಛಿದ್ರಗೊಂಡು ಈ ಫ್ಯೂಡಲಿಸ್ಟರು ಪೋಲೀಸರ ವಶವಾಗುತ್ತಾರೆ. ಅಸಹಾಯಕರಾದ ಸೋನಿ, ಲಚ್ಮಿ, ಚಂದುನಂತವರು ಆದರ್ಶವ್ಯಕ್ತಿಗಳಾಗಿ ಉಳಿಯುತ್ತಾರೆ. ಹೀಗೆ ದಲಿತೇತರ ಬಂಡಾಯ ಕಾದಂಬರಿಗಳಲ್ಲಿ ಅನೇಕ ಸಂದರ್ಭಗಳಲ್ಲಿ ಮಾರ್ಕ್ಸ್‌ವಾದ ಪ್ರಭಾವವಿರುವುದನ್ನು ಗುರುತಿಸಬಹುದು.

ದಲಿತೀಯ ಕಾದಂಬರಿಗಳು ಹೆಚ್ಚಾಗಿ ಅಂಬೇಡ್ಕರ್ ಸಿದ್ಧಾಂತ ಹಾಗೂ ಲೋಹಿಯ ವಾದವನ್ನು ಮೈಗೂಡಿಸಿಕೊಂಡಿವೆ. ಇವರನ್ನು ಎಡಪಂಥೀಯರೆಂದು ಗುರುತಿಸಲಾಗುತ್ತದೆ. ಅಂಬೇಡ್ಕರರು ಜಾತಿಯಾಧಾರವಾಗಿ ಅಸ್ಪೃಶ್ಯ ಜನಾಂಗವನ್ನು ಪ್ರಮುಖವಾಗಿ ಕೇಂದ್ರವಾಗಿಸಿಕೊಳ್ಳುತ್ತಾರೆ. ಅವರ ಈ ಚಿಂತನೆ ಏಕ ಮುಖವಲ್ಲ, ಎಲ್ಲಾ ಜಾತಿಯ ದುರ್ಬಲ ಬಡವರನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಇವರ ಪ್ರಕಾರ "ಎಲ್ಲ ವಿಧಗಳಿಂದಲೂ ಅಸಮಾನತೆಯನ್ನು ಸಂಸ್ಥೀಕರಿಸುವುದೇ 'ಬ್ರಾಹ್ಮನಿಸಂ'ನ ಅಧಿಕೃತ ತತ್ವವಾಗಿದೆ. ಇದನ್ನು ತಲಸ್ಪರ್ಶಿಯಾಗಿ ವಿರೋಧಿಸಿದ ಅವರು ದಲಿತರ ಏಳಿಗೆಗಾಗಿ ಸ್ವ-

ಸುಧಾರಣೆ, ಸ್ವ-ಪ್ರಗತಿ, ಸ್ವಾವಲಂಬನೆ, ಸ್ವಾಭಿಮಾನ, ಸ್ವಪ್ರತ್ಯಯ ಇದನ್ನು ಬಲವಾಗಿ ಪ್ರತಿಪಾದಿಸಿದರು.''[೨೭] ಇಂತಹ ವಿಚಾರಗಳಿಂದ ದಲಿತ ಸಾಹಿತ್ಯ ಪ್ರೇರಣೆ ಪಡೆದಿದೆ. ದಲಿತ ಸಾಹಿತ್ಯದ ಹಿಂದಿರುವ ಪ್ರೇರಣೆಯ ವಿನ್ಯಾಸ ಕುರಿತು ವಿಶ್ಲೇಷಿಸಲೆತ್ನಿಸುವ ಡಾ.ಬಿ.ಎಂ.ಪುಟ್ಟಯ್ಯ, ಅವರು ''ದಲಿತರ ಈ ಬರವಣಿಗೆಗಳ ಹಿಂದಿರುವ ಪ್ರಾಥಮಿಕ ಪ್ರೇರಣೆ ಎಂದರೆ ಔಪಚಾರಿಕ ಶಿಕ್ಷಣದಿಂದ ಬಂದ ಒಂದು ರೀತಿಯ ಎಚ್ಚರಿಕೆ (ಅರಿವು-ಜಾಗೃತಿ ಎಂಬ ಅರ್ಥಗಳಲ್ಲಿ)ಯೇ ಆಗಿದೆ; ಆನಂತರ ಇವರು ಓದಿಕೊಂಡ ಕೆಲವು ಬರಹಗಳು, ಬದುಕಿನ ಕರಾಳ ಸಂಗತಿಗಳು ಹೋರಾಟದ ನೇರ ಅನುಭವಗಳೂ ಬೆನ್ನೆಲುಬಾಗಿ ಬಂದಿವೆ; ಪೆರಿಯಾರ್, ಲೋಹಿಯಾ, ಅಂಬೇಡ್ಕರ್, ಮಾರ್ಕ್ಸ್ ಮತ್ತು ಗಾಂಧಿ - ಇವರ ಪ್ರಭಾವಗಳು ಬೇರೆ ಬೇರೆ ಪ್ರಮಾಣಗಳಲ್ಲಿ, ಬೇರೆ ಬೇರೆ ಸ್ವರೂಪಗಳಲ್ಲಿ ಪ್ರೇರಣೆಯಾಗಿವೆ ಎನ್ನುತ್ತಾರೆ. ಅವರು ಸಮೀಕರಿಸುವಂತೆ, ಕನ್ನಡ ದಲಿತ ಸಾಹಿತ್ಯ ಎಪ್ಪತ್ತರ ದಶಕದ ನಂತರದ ಸೃಷ್ಟಿ, ಎಪ್ಪತ್ತರ ದಶಕದ ಆರ್ಥಿಕ ಪಲ್ಲಟಗಳ, ಚಾರಿತ್ರಿಕ ಬಿಕ್ಕಟ್ಟುಗಳ ಒಡಲಿನಿಂದ ದಲಿತ ಸಾಹಿತ್ಯ ಮೈದಾಳಿದೆ. ದಲಿತ ಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ ಪ್ರತಿಸಂಸ್ಕೃತಿ ನೆಲೆಗಳಿಗೆ ಸಮಕಾಲೀನ ಒತ್ತಡಗಳಿವೆ. ಸಮಕಾಲೀನ ಒತ್ತಡಗಳೆನ್ನುವ ಸಾಮಾಜಿಕ ವೈರುಧ್ಯಗಳಿಗೆ, ತಾತ್ವಿಕ ಆಳದಲ್ಲಿ ದೀರ್ಘವಾದ ಮಹಾನ್ ಪರಂಪರೆ ಇದೆ.''[೨೮] ಈ ಥರದ ವಿವರಣೆಗಳು ದಲಿತ ಕಾದಂಬರಿಗಳ ಸೃಜನತೆಯನ್ನು ಅರ್ಥೈಸಲು ಸುಲಭವಾಗುತ್ತದೆ.

ದಲಿತೀಯ ಕಾದಂಬರಿಗಳು ಈ ರೀತಿಯ ಪ್ರಭಾವಕ್ಕೊಳಗೊಂಡು ರಚಿತಗೊಂಡಿವೆ ಎಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ, ಆ ಕಾದಂಬರಿಗಳು ದಲಿತ ಬದುಕಿನ ಸಂಸ್ಕೃತಿಯ ದಾಖಲೆಗಳಾಗಿ ಚಿತ್ರಿಸಲ್ಪಟ್ಟಿವೆ. ದಲಿತರ ಬದುಕಿನಲ್ಲಿ ನಡೆದ ಹಾಗೂ ನಡೆಯುತ್ತಿರುವ ಶೋಷಣೆ, ಬಡತನ, ಅತ್ಯಾಚಾರ, ಅವರು ನಂಬಿರುವ ಮೂಢನಂಬಿಕೆ, ಸಂಪ್ರದಾಯ ಮುಂತಾದ ಹಲವು ಒಳನೋಟಗಳನ್ನು ತೆರೆದು ತೋರಿಸುತ್ತಲೇ ಆ ಮೂಲಕ ಪ್ರತಿಭಟನೆ ವ್ಯಕ್ತಪಡಿಸುತ್ತವೆ. ಅಂಥಹ ಪ್ರಮುಖ ಕಾದಂಬರಿಗಳನ್ನು ಇಲ್ಲಿ ಪಟ್ಟಿ ಮಾಡಬಹುದು; ಕುಸುಮ ಬಾಲೆ, ಮಾಗಿ, ಕಾರ್ಯ, 'ಮರಣಮಂಡಲ ಮಧ್ಯದೊಳಗೆ' ಹೊಲಗೇರಿಯ ರಾಜಕುಮಾರ.

ದೇವನೂರು ಮಹಾದೇವರ ಕುಸುಮಬಾಲೆ ದಲಿತ ಬದುಕಿನ ವಿವರ ನೀಡುತ್ತಲೇ ಪ್ರತಿಸಂಸ್ಕೃತಿ ನಿರ್ಮಾಣದತ್ತ ಸಾಗುತ್ತದೆ. ಈ ಕಾರ್ಯದಲ್ಲಿ ಅಂಬೇಡ್ಕರ್ ವಿಚಾರಗಳನ್ನು ಗುರುತಿಸಬಹುದು. ವ್ಯವಸ್ಥೆಯಿಂದ ಜರ್ಜರಿತಗೊಂಡ ಅಕ್ಕಮಾದೇವಮ್ಮನ ಮಾನವೀಯತೆ, ಸ್ವ-ದುಡಿಮೆ, ಅಮಾಸನ ಸ್ವ-ದುಡಿಮೆ, ಸ್ವಾಭಿಮಾನ, ಚೆನ್ನನ ತಂದೆ ತಾಯಿಯರ ಸ್ವಾಭಿಮಾನ, ತೂರಮ್ಮ, ಹಟ್ಟಿ ಜೋತಮ್ಮರ ಮಾನವೀಯತೆ ಮುಂತಾದ ಸಂದರ್ಭಗಳಲ್ಲಿ ಕಾದಂಬರಿ ಕಟ್ಟಿಕೊಡುತ್ತದೆ. ಎಲ್ಲಾ ಪಾತ್ರಗಳು ತಮ್ಮ

ಬದುಕಿನ ಅನನ್ಯತೆಗಾಗಿ ಹೋರಾಡುವುದನ್ನು ದಾಖಲಿಸುತ್ತದೆ. ಟಿ.ಪಿ.ಅಶೋಕ ಅವರು ಹೇಳುವಂತೆ "ದಲಿತರ ಬದುಕಿನ ಸ್ಥಿತಿಯನ್ನು ಮಾತ್ರ ದಾಖಲಿಸುವುದು ದೇವನೂರರ ಸಾಹಿತ್ಯದ ಏಕಮಾತ್ರ ಉದ್ದೇಶವಾಗಿರುವುದಿಲ್ಲ, ದಲಿತ ಬದುಕಿನ ಸಾಧ್ಯತೆಗಳ ಕಾಣ್ಕೆಯೂ ಅವರ ಕೃತಿಗಳ ಮಹತ್ವದ ಅಂಶ. ದೇವನೂರರ ಕಾಣ್ಕೆಗಳು ಕೇವಲ ಕ್ರಾಂತಿಕಾರೀ ಕನಸುಗಾರಿಕೆಯ ಫಲಗಳಲ್ಲ. ದಲಿತ ಬದುಕಿನ ನಿಷ್ಠುರ ಗ್ರಹಿಕೆಗಳಿಂದ ಮತ್ತು ಐತಿಹಾಸಿಕ ಸಂದರ್ಭಗಳಿಂದ ಈ ಕಾಣ್ಕೆಗಳು ಮೂಡಿ ಬಂದಿವೆ."[೫] ಎನ್ನುವಲ್ಲಿ ಸಮಕಾಲೀನ ಸಂದರ್ಭದ ಒತ್ತಡ ಹಾಗೂ ಸಿದ್ಧಾಂತಗಳು ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

ಇಂತಹ ಪ್ರಭಾವವು 'ಮಾಗಿ' ಕಾದಂಬರಿಯಲ್ಲಿ ಗಾಢವಾಗಿ ಕಂಡುಬರುತ್ತದೆ. ದಲಿತ ಮುಖಂಡ ಯಜಮಾನ್ ದಾಸಪ್ಪರ ಸ್ವಾಭಿಮಾನವನ್ನು ಹಾಗೂ ಮಗವ್ವಳ ಪಾತ್ರ ಚಿತ್ರಿಸುವಲ್ಲಿ ಅಂಬೇಡ್ಕರ್‌ರ ವಿಚಾರವು ಅಥೆಂಟಿಕ್ ಆಗಿ ಮೂಡಿದೆ. ಯಜಮಾನ್ ದಾಸಪ್ಪನ ಅಧಿಕಾರವನ್ನು ನಿರ್ವೀರ್ಯಗೊಳಿಸಲು ಸಂಚುಹೂಡಿದ ಮೇಲ್ವರ್ಗದವರನ್ನು ಸ್ವಾಭಿಮಾನದಿಂದಲೇ ಸೋಲಿಸುತ್ತಾನೆ. ಮಾಗಿ ಎಲ್ಲಾ ಬಡತನ, ಅವಮಾನ, ಹಿಂಸೆ ತಾಳಿಕೊಂಡು ಸ್ವಂತ ದುಡಿಮೆಯಿಂದ ಬದುಕನ್ನು ಪುನಃ ರೂಪಿಸಿಕೊಳ್ಳುವುದನ್ನು ಚಿತ್ರಿಸುತ್ತಾರೆ.

ಪ್ರೊ. ಸುಜನಾ ಅಭಿಪ್ರಾಯದಲ್ಲಿ "ಭಾರತೀಯ ಸನ್ನಿವೇಶದಲ್ಲಿ ಯಾರೇ ಒಳ್ಳೆಯ ಕಾದಂಬರಿಯನ್ನು ಬರೆಯ ಹೊರಟರೂ ಅವರಿಗೆ ಕಾಡುವ ಸಮಸ್ಯೆಗಳು ಹಲವು ಹಾಗೂ ವಿಷಮ. ಯಾವುದೇ ಜಾತಿ-ವರ್ಗದ ಕಾದಂಬರಿಯನ್ನು ತುಂಬಾ ಪ್ರಾಮಾಣಿಕವಾಗಿ ಜೀವಂತವಾಗಿ ಬರೆಯುವಾಗ ಸುಲಭವಾಗಿ ಅರಗಿಸಿಕೊಳ್ಳಲಾಗದ ಕೆಲವೊಂದು ಸತ್ಯಗಳನ್ನು ತೆರೆದು ಕಾಣಿಸಬೇಕಾಗುತ್ತದೆ. ಸಮಾಜದ ತೀರಾ ಕೆಳಸ್ತರದಲ್ಲಿರುವ ದಲಿತ ವರ್ಗ ತನ್ನ ಮೇಲಿರುವ ನಾನಾ ಸ್ತರಗಳ, ನಾನಾ ರೀತಿಯಲ್ಲಿ ಪ್ರತಿಕ್ರಿಯಿಸುತ್ತವೆ. ಇವುಗಳ ಅನುಭವ ಆ ವರ್ಗದ ಜನಕ್ಕಿರುವಷ್ಟು ನಿಚ್ಚಳವಾಗಿ ಇತರ ನಾನಾ ಮೇಲ್ತರದ ಲೇಖಕರಿಗಿದ್ದೀತೆ? ಇದ್ದರೂ ಅಷ್ಟು ಗಾಢವಾಗಿದ್ದೀತೆ? ಕೆಲವೊಂದು 'ಇಸಂ'ಗಳಿಂದ ಆ ನೋಟ ಕದಡಿದರೆ? ಈ ಕಾದಂಬರಿಯಲ್ಲಿ ಬರುವ ಅರಮನೆಯ ಕುಸ್ತಿಯ ಪ್ರಸಂಗವನ್ನು ಬೇರೊಬ್ಬ ಲೇಖಕ ಹೇಗೆ ಚಿತ್ರಿಸಬಹುದಿತ್ತು? ಇಲ್ಲಿರುವ ಚಿತ್ರ ಭಾರತೀಯ ಸಾಮಾಜಿಕ ನಗ್ನ ಸತ್ಯವನ್ನು ಪ್ರಾಯಶಃ ವರ್ಗತತ್ವವನ್ನು ನುಂಗಿನೊಣೆಯುವಂಥದನ್ನು ಪ್ರತಿಪಾದಿಸಿತು. ಅದು ಕೊಂಚ ವಾಚ್ಯವಾಗಿದ್ದರೂ ಕೇವಲ ಕಲಾವಂತಿಕೆಯ ಕಡೆಗೆ ಗಮನವಿಟ್ಟಿದ್ದ ದಲಿತ ಲೇಖಕನಾಗಿದ್ದರೆ ಇದನ್ನು ನಯಗೊಳಿಸಿ ಜಾರಿಸಬಹುದಿತ್ತು. ಆದರೆ ಮಾನವ ರಾಗದ್ವೇಷಗಳು ಕೇವಲ ಸಾಮಾಜಿಕ ಶಿಸ್ತಿಗೇ ಒಳಪಡುವುದಿಲ್ಲ. ಮಾಗಿಯನ್ನು ಅಷ್ಟೆಲ್ಲ ಕೀಳಾಗಿ ನಡೆಸಿಕೊಂಡವರಾರು, ಮನೆಯವರೆ; ಮಗನೂ ಕೂಡ. ಇದನ್ನು ಈ ಕಾದಂಬರಿಕಾರ

ಚಿತ್ರಿಸಬಹುದಾದ ನಿರ್ಭಿಡೆಯಿಂದ ನಿರಾತಂಕದಿಂದ ಮೇಲ್ವರ್ಗದ ಕಾದಂಬರಿಕಾರ ಚಿತ್ರಿಸುವುದು ಸುಲಭವಾಗುತ್ತಿರಲಿಲ್ಲ''[೩೦] ಎಂಬುವಲ್ಲಿ ಸೈದ್ಧಾಂತಿಕೆಯು ಗ್ರಹಿಕೆಗೆ ಬರುತ್ತದೆ.

ಜಾತಿ ಸಮಸ್ಯೆ ದಲಿತರಿಗೆ ಅಂಟಿಕೊಂಡ ಶಾಪವಾಗಿದೆ. ಇದು ಅಕ್ಷರ ಕಲಿತ ಹಾಗೂ ಅನಕ್ಷರಸ್ಥ ದಲಿತನಿಗೂ ಈ ಸಮಸ್ಯೆ ಕಾಡಿದೆ. ಇಂಥ ಸಮಸ್ಯೆಯಿಂದ ಅಂಬೇಡ್ಕರ್‌ರವರು ಹೊರತಾಗಿರಲಿಲ್ಲ. ಹಾಗಾಗಿ ಜಾತಿ ಸಮಸ್ಯೆ ನಿವಾರಣೆಗಾಗಿ ಅನೇಕ ಹೋರಾಟಗಳನ್ನು ಮಾಡಿರುವುದು ಚಾರಿತ್ರಿಕ ಸಂಗತಿ. ಈ ಸಂಗತಿಯನ್ನು ಮೂಳ್ಳೂರು ನಾಗರಾಜರು 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ 'ಹೊಲೆಯರ ಪುಟ್ಟಣ್ಣನ' ಪಾತ್ರದಲ್ಲಿ ಗುರುತಿಸುತ್ತಾರೆ. ಇವನು ಮೇಗಳ ಕೇರಿಯವರ ಕೆರೆಗೆ ಹೋಗೆ ನೀರು ಕುಡಿದದ್ದನ್ನು ನೋಡಿದ ಆ ಜನಗಳೂ ಪುಟ್ಟಣ್ಣನ್ನು ಹಿಗ್ಗಾಮುಗ್ಗಾ ಹೊಡೆಯುತ್ತಾರೆ. ಅದಕ್ಕೆ ಪುಟ್ಟಣ್ಣ ಪ್ರತಿಕ್ರಿಯಿಸುವುದು ಹೀಗೆ

"ಕೊಬ್ಬು ಇಲ್ಲಾ ಯಾನೂ ಇಲ್ಲಳಿ, ಬಾಯಾರುಕವಾಯ್ತು ನೀರು ಕುಡ್ದೆ, ಕೆರೆ ನೀರಾಗ ಕುಲ ಜಾತಿ ಕಟ್ಟು ಇದ್ದುದ ಸೋಮ್ಗಳ?''[೩೧]

ಎಂದು ಪ್ರತಿಕ್ರಿಯಿಸುವ ರೀತಿ ಗಮನಾರ್ಹವಾದದ್ದು. ಒಂದು ಪ್ರಸಂಗದಲ್ಲಿ ಅಂಬೇಡ್ಕರರವರು ಬಾಯಾರಿದಾಗ ಮೇಲ್ವರ್ಗದವರ ಕೆರೆಯ ನೀರು ಕುಡಿದು ಅವಮಾನ ಆಗಿದ್ದನ್ನು ಮುಳ್ಳೂರರು ಪುಟ್ಟಣ್ಣನ ಮೂಲಕ ಜಾತಿ ಸಮಸ್ಯೆಯನ್ನು ಮರುಕಳಿಸುತ್ತಾರೆ. ಹೀಗೆ ಚಿತ್ರಿಸುವಲ್ಲಿ ಹಾವನೂರು ವರದಿಯ ಪ್ರಭಾವವೂ ಬೀರಿದೆ. ಲೇಖಕರು ಜಾತಿವ್ಯವಸ್ಥೆಯನ್ನು ಹೋಗಲಾಡಿಸುವ ಆಶಯ ಹೊಂದಿರುವುದು ಗ್ರಹಿಕೆಗೆ ಬರುತ್ತದೆ.

ಅರವಿಂದ ಮಾಲಗತ್ತಿಯವರ 'ಕೌರ್ಯ' ಕಾದಂಬರಿ ಮಚಗಾರ ಬದುಕಿನ ವಿವರಗಳನ್ನೊಳಗೊಂಡಿದ್ದರಿಂದ ಆ ಸಂಸ್ಕೃತಿಯ ಸಾಮಾಜಿಕ ಅನಿವಾರ್ಯತೆಗಳು ದಟ್ಟವಾಗಿ ಮೂಡಿವೆ. ಈ ಅಂಶ ಕಾದಂಬರಿಯುದ್ದಕ್ಕೂ ಗ್ರಹಿಕೆಗೆ ಬರುತ್ತದೆ. ಆ ಸಮುದಾಯ ನಂಬಿಕೊಂಡು ಬಂದ ಸಂಪ್ರದಾಯ ಎಷ್ಟು ಕ್ರೂರವಾಗಬಲ್ಲದೆಂಬುದು ಕೌರ್ಯದ ವಿವಿಧ ಸನ್ನಿವೇಶದಲ್ಲಿ ಗೋಚರಿಸುತ್ತದೆ.

## ಪ್ರಯೋಜನ

ದಲಿತೀಯ ಕಾದಂಬರಿಗಳು ಸಾಹಿತ್ಯದ ದೃಷ್ಟಿಯಿಂದ ಕಲಾಕೃತಿಯಾಗಿ ರೂಪಪಡೆದಿವೆ. ಅದರ ಆಳದಲ್ಲಿ ಅಡಗಿಸಿಕೊಂಡಿರುವ ವಸ್ತು ದಲಿತ ಬದುಕಿನ ಸಾಂಸ್ಕೃತಿಕ ದಾಖಲೆಯಾಗಿದೆ. ಹಾಗಾಗಿ ದಲಿತ ಸಂಸ್ಕೃತಿಯ ಚಿತ್ರಣ ಕಥಾರೂಪವಾಗಿ ಬಿಚ್ಚಿಕೊಳ್ಳುವುದರಿಂದ ವಾಸ್ತವ ಜಗತ್ತು ಆ ಸಂಸ್ಕೃತಿಯ ಒಳಹರಿವಾಗಿದೆ. ಹೀಗಾಗಿ ದಲಿತ ಸಂಸ್ಕೃತಿ ವ್ಯವಸ್ಥೆಯ ಅಡಿಯಲ್ಲಿ ಶೋಷಣೆಗೊಳಗಾದ ಹಾಗೂ

ಶೋಷಣೆಗೊಳಗಾಗುತ್ತಿರುವ ಚಿತ್ರಣವನ್ನು ಅನಾವರಣಗೊಳಿಸುತ್ತದೆ. ಅಕ್ಷರ ಕಲಿತ "ದಲಿತ ಓದುಗರು ತಮ್ಮ ಸಂಕ್ರಮಣ ಕಾಲದ ದೃಶ್ಯಾತ್ಮಕ ಮತ್ತು ಶ್ರವ್ಯಾತ್ಮಕ ಧಾಟಿಗಳನ್ನು ಇಂತಹ ಕೃತಿಗಳಲ್ಲಿ ಗುರುತಿಸಿ ತಮ್ಮ ಬದುಕಿನ ವಿಮರ್ಶೆಯನ್ನು ಮಾಡುವುದರ ಮೂಲಕ ಮುಂದಿನ ಮಾರ್ಗದ ರೂಪುರೇಷೆಗಳನ್ನು ನಿರ್ಧರಿಸಿಕೊಳ್ಳಬಹುದು."[೩೨] ಎಂದು ಡಾ.ಬಿ.ಎ.ವಿವೇಕರೈ ಅಭಿಪ್ರಾಯಪಡುತ್ತಾರೆ.

ದಲಿತ ಕಾದಂಬರಿಗಳು ವರ್ತಮಾನ, ಭೂತ ಮತ್ತು ಭವಿಷತ್‌ಗಳ ಅನುಭವವನ್ನು ನೀಡುತ್ತವೆ. ಅಂದರೆ, ಕೆಳವರ್ಗ ವ್ಯವಸ್ಥಿತ ಅಡಿಪಾಯವೊಂದರ ಕೆಳಗೆ ಶೋಷಣೆಗಾಗಿ ಅದಮ್ಯ ಜೀವನ ಪ್ರೀತಿಗಾಗಿ ಪರದಾಡುತ್ತಾ ಇನ್ನೂ ಜೀವಂತವಾಗಿರುವುದನ್ನು ಆ ಮೂಲಕ ಗಮನಿಸಬಹುದು. ಹಾಗಾಗಿ ವಾಸ್ತವದಲ್ಲಿ ಶೋಷಣೆಗೆ ಒಳಗಾದ ದಲಿತವರ್ಗ ಇಂತಹ ಕೃತಿಗಳನ್ನು ಓದುವುದರಿಂದ ಈ ಮೂರು ಕಾಲಘಟ್ಟಗಳಲ್ಲಿ ಉದ್ಭವಿಸಬಹುದಾದ ಪರಿಣಾಮಗಳನ್ನು ಅರಿಯಲು ಸಹಕಾರಿಯಾಗಿದೆ. ಅಲ್ಲದೆ ಕಾದಂಬರಿಗಳಲ್ಲಿ ಚಿತ್ರಿಸಿರುವಂತೆ ಕೆಳವರ್ಗಗಳು ವ್ಯವಸ್ಥೆಯು ಎಸಗಿದ ಕ್ರೌರ್ಯದ ವಿರುದ್ಧವಾಗಿ ಹೋರಾಡುವ ಚಿತ್ರಗಳು ವಿಭಿನ್ನವಾದವುಗಳು. ಇಂಥ ವಿಭಿನ್ನ ಹೋರಾಟಗಳನ್ನು ವಿಭಿನ್ನ ಕಾದಂಬರಿಗಳು ಚಿತ್ರಿಸುವುದರಿಂದ ವಾಸ್ತವವಾಗಿ ಕೆಳವರ್ಗ ಅಂಥ ಪ್ರತಿಭಟನೆಗಳನ್ನೂ ಆಯ್ಕೆ ಮಾಡಿಕೊಂಡು ಹೊಸ ಬದುಕಿನತ್ತ ಸಾಗಬಹುದಾಗಿದೆ. ಮಾನಸಿಕವಾಗಿ ದುರ್ಬಲನಾದವನಿಗೆ ಪರೋಕ್ಷವಾಗಿ ಧೈರ್ಯ ಸೂಚಿಸುತ್ತವೆ. ಹಾಗಾಗಿ ಕೆಳವರ್ಗ ಈ ಮೂಲಕ ಧೈರ್ಯ ತೆಗೆದುಕೊಂಡು ತನ್ನ ಅಸ್ತಿತ್ವಕ್ಕಾಗಿ ಹೋರಾಡಲು ಸಹಕಾರಿಯಾಗಿದೆ.

ಈ ಕಾದಂಬರಿಗಳು ಸಾಹಿತ್ಯಿಕವಾಗಿ ದಲಿತರ ಬದುಕನ್ನು ಬಿಚ್ಚಿಕೊಳ್ಳುವುದರಿಂದ ಅವರ ಒಟ್ಟು ಸಾಂಸ್ಕೃತಿಕ ಚಿತ್ರಣಗಳನ್ನು ಹೊರಡಿಸುತ್ತವೆ. ಶೋಷಣೆಗೆ ಕಾರಣವಾಗುವ ಸಾಮಾಜಿಕ, ರಾಜಕೀಯ, ಆರ್ಥಿಕ ಸಮಸ್ಯೆಯ ಜಾಗೃತಿಯನ್ನುಂಟು ಮಾಡುತ್ತವೆ. ಈ ಅಂಶಗಳಿಗಾಗಿ ಮೇಲುವರ್ಗ ತನ್ನ ಹಿತಾಸಕ್ತಿಗಾಗಿ ಶೋಷಿತವರ್ಗವನ್ನು ಹೇಗೆ ಅಡಿಯಾಳಾಗಿ ಮಾಡಿಕೊಳ್ಳುತ್ತವೆಂಬುದನ್ನು ಅನಾವರಣ ಗೊಳಿಸುತ್ತದೆ. ಅಲ್ಲದೆ ಪ್ರತಿಷ್ಠಿತ ವರ್ಗ ಕೆಳವರ್ಗವನ್ನು ಅಮಾನವೀಯವಾಗಿ ವರ್ತಿಸುವುದನ್ನು ಗ್ರಹಿಕೆಗೆ ತರುತ್ತದೆ. ವಾಸ್ತವವಾಗಿ ಕೆಳವರ್ಗ ಸಮಾನತೆಗಾಗಿ ಹಂಬಲಿಸುತ್ತಿದೆ. ಹಾಗಾಗಿ ಹೇಗೆ ಸಮಾನತೆಯನ್ನು ಕಂಡುಕೊಳ್ಳಬಹುದೆಂದು ಸೂಚಿಸುತ್ತದೆ.

ವ್ಯವಸ್ಥೆಯು ರೂಪಿಸಿದ ಮಾರ್ಗಗಳು ಅತಿಯಾದಾಗ ಜಾಗೃತಗೊಂಡ ದಲಿತವರ್ಗ ಆ ವ್ಯವಸ್ಥೆಗೆ ಎಂಥ ಪರಿಣಾಮವನ್ನುಂಟು ಮಾಡಬಹುದೆಂಬುದನ್ನು ಮೇಲುವರ್ಗಗಳಿಗೆ ಪರೋಕ್ಷವಾಗಿ ಎಚ್ಚರಿಸುತ್ತದೆ. ಆ ಮೂಲಕ ಮೇಲುವರ್ಗ ಭವಿಷ್ಯತ್ತಿನಲ್ಲಿ ಆಗಬಹುದಾದ ಪರಿಣಾಮಗಳನ್ನು ಅರಿತು ತನ್ನ ಪ್ರಭುತ್ವವನ್ನು ಸಡಿಲಗೊಳಿಸಲು ಪ್ರಯತ್ನಿಸಿದ್ದು ಕಂಡುಬರುತ್ತದೆ.

ಕೆಳವರ್ಗ ತನ್ನ ಶೋಷಣೆಗೆ ಕೇವಲ ಪ್ರತಿಷ್ಠಿತವರ್ಗಗಳು ಮಾತ್ರ ಕಾರಣವಾಗುವುದಿಲ್ಲ. ಬದಲಾಗಿ ತನ್ನ ಸಮಾಜವೂ ಕಾರಣವಾಗುತ್ತದೆ. ತಾನು ವಂಶಪರಂಪರೆಯಿಂದ ನಂಬಿಕೊಂಡು ಬಂದಿರುವ ಸಂಪ್ರದಾಯ, ಆಚರಣೆ, ನಂಬಿಕೆಗಳು ಬದುಕಿನಲ್ಲಿ ಎಷ್ಟು ಕ್ರೂರವಾಗಬಹುದಾಗಿದೆ ಎಂಬುದನ್ನು ಕಾದಂಬರಿ ಹಲವು ಬಗೆ ಬಗೆಯಾಗಿ ತೋರಿಸುತ್ತದೆ. ಹಾಗಾಗಿ ಶೋಷಿತವರ್ಗ ಇಂಥ ಮೂಢನಂಬಿಕೆಗಳನ್ನು ಪುನರ್ವಿಮರ್ಶಿಸಿಕೊಳ್ಳಲು ಸಹಕಾರಿಯಾಗಿದೆ.

ಕೆಳವರ್ಗಗಳಲ್ಲಿನ ಮುಗ್ಧತೆ, ಮೌಢ್ಯತೆ, ಅನಕ್ಷರತೆ, ಒಂದು ಹಂತದಲ್ಲಿ ಜನಪದ ಬದುಕಿನಲ್ಲಿ ಮೌನ ಮೌಲ್ಯವಾಗಿತ್ತು. ಆದರೆ ಕಾಲ ಬದಲಾದಂತೆ ಇವರ ಮೌಲ್ಯ ಆಧುನಿಕ ಬದುಕಿನಲ್ಲಿ ಶೋಷಣೆಗೆ ಕಾರಣವಾಗಿದೆ. ಈ ಯುಗದಲ್ಲಿ ಕೆಳವರ್ಗಗಳ 'ಮೌನ ಕೀಳರಿಮೆಯನ್ನುಂಟು ಮಾಡುತ್ತದೆ. ಇಂಥ ಕೀಳರಿಮೆಯಿಂದ ವ್ಯಕ್ತಿತ್ವ ವಿಕಾಸಹೊಂದಲು ಅಡ್ಡಿಯನ್ನುಂಟು ಮಾಡುತ್ತದೆ. ಇಂಥ ಕೀಳಿರಿಮೆಯ ಪರಿಣಾಮಗಳನ್ನು ಈ ಕಾದಂಬರಿಗಳು ಸಾದಾರವಾಗಿ ಅನಾವರಣ ಗೊಳಿಸುತ್ತವೆ.

ಕೆಳವರ್ಗಗಳು ಅನಕ್ಷರತೆಯಿಂದ ಕೂಡಿದೆ. ಇಂದು ದಲಿತ ಚಳವಳಿಗಳು, ಸರ್ಕಾರಗಳು ಅಕ್ಷರ ಜಾಗೃತಿಯನ್ನುಂಟು ಮಾಡಲು ದಲಿತ ಚಳುವಳಿಗಳ ಮೂಲಕ ಮುಂದೆ ಬಂದಿವೆ. ಅನಕ್ಷರತೆಯಿಂದ ಆಗುವ ಪರಿಣಾಮಗಳನ್ನು ವಿವರವಾಗಿ ಪ್ರಚಾರಮಾಡುತ್ತಿವೆ. ಕಾದಂಬರಿಗಳು ಇಡೀ ಬದುಕಿನ ಕ್ರಿಯೆಯಲ್ಲಿ, ಅನಕ್ಷರತೆ ಎಂತಹ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ಒಟ್ಟು ಬದುಕಿನ ಮೂಲಕ ತೋರಿಸುತ್ತದೆ. ನಿದರ್ಶನಕ್ಕಾಗಿ ಮನಜರ ಮಾಗಿ ಕಾದಂಬರಿಯಲ್ಲಿ ಯಜಮಾನ ದಾಸಪ್ಪನ ಮನೆ ಒಡೆಯುವುದು ಅನಕ್ಷರತೆಯಿಂದಲೇ ಎಂಬುದು ಗೃಹೀತ.

"ದಾಸಪ್ಪನವರು ಪಡೆದುಕೊಂಡಿದ್ದ ಅಕ್ಷರಗಳು ವಸಂತನ ಅಂತರಾಳದೊಂದಿಗೆ ಮೂಡಿದಂತೆ ತೆಂಗಿನ ಸಸಿಗಳು ಗರಿಯೊಡೆದಿದ್ದು ಎನ್ನುವ ಮಾತು ಹೊಸ ತೋಟದ ಫಸಲು ಹೊಸ ಓದಿನ ತಿಳುವಳಿಕೆ ಇವು ದಲಿತ ಸಂಸ್ಕೃತಿಯಲ್ಲಿ ರೂಪಾಂತರವನ್ನು ಮಾಡಬಲ್ಲದು ಎಂಬ ಆಶಯವಿದೆ."[೩೩] ದಾಸಪ್ಪ ತೀರಿದ ನಂತರ ವಸಂತ ಅಕ್ಷರ ಪಡೆಯುವ ತನಕ, ಈ ನಡುವೆ ಅನಕ್ಷರತೆಯಿಂದಾಗಿ ದಾಸಪ್ಪನವರ ಮನೆ ಹೇಗೆ ಹಂತ ಹಂತವಾಗಿ ಪತನ ಹೊಂದುತ್ತದೆಯೆಂಬುದು ಗ್ರಹಿಕೆಗೆ ಬರುತ್ತದೆ. ಈ ನಡುವೆ ಮಾಗವ್ವಳ ಬದುಕು ನರಕಯಾತನೆಯಾಗಿ ಪರಿಣಮಿಸುತ್ತದೆ. ಇಂಥ ಸಂದರ್ಭಗಳನ್ನು ಕಟ್ಟಿಕೊಡುವ ಕಾದಂಬರಿಗಳಿಂದ ವಾಸ್ತವದಲ್ಲಿ ಕೆಳವರ್ಗ ವ್ಯಕ್ತಿಗತವಾಗಿ ಎಚ್ಚರಗೊಳ್ಳಬೇಕೆಂಬುದಲ್ಲದೇ ಸಾರ್ವತ್ರಿಕವಾಗಿ ಶಿಕ್ಷಣದ ಅಗತ್ಯವನ್ನು ಸೂಚಿಸುತ್ತದೆ.

ದಲಿತ ಬಂಡಾಯ ಕಾದಂಬರಿಗಳು ಕೆಳವರ್ಗದ ಬದುಕಿನ ಸಾಧ್ಯತೆಯನ್ನು ಸೂಚಿಸುತ್ತವೆ. ಸಾಹಿತ್ಯ ಕೃತಿಯೊಂದು ಕೊಡುವ ಸಾಧ್ಯತೆಗಳನ್ನು ಗಮನಿಸುವುದು ಮತ್ತು ತಮ್ಮ ನಿಜ ಬದುಕಿಗೆ ಅನ್ವಯಿಸಿ

ಪ್ರಯೋಗಿಸುವುದು ವಾಸ್ತವವಾಗಿ ದಲಿತ ಸಮುದಾಯದ ಓದುಗರ ದೃಷ್ಟಿಯಿಂದ ಪ್ರಯೋಜನವಾಗಬಲ್ಲದು.

ಸಮಕಾಲೀನ ಸಂದರ್ಭದಲ್ಲಿ ವಸಾಹತುಶಾಹಿ, ನವವಸಾಹತುಶಾಹಿ, ಜಾಗತೀಕರಣ, ಉದಾರೀಕರಣದಂತಹ ಜಾಗತಿಕ ಫಲಿತಗಳು ಕೆಳವರ್ಗದ ಬದುಕನ್ನೇ ಬುಡಮೇಲು ಮಾಡುತ್ತಿವೆ. ಇದರ ಬಹುಮುಖಿ ಆಯಾಮಗಳು ಯಾವುದೇ ಘೋಷಣೆಯಿಲ್ಲದೇ ಕೆಳವರ್ಗಗಳ ಬದುಕಿನಲ್ಲಿ ಪ್ರವೇಶಿಸುತ್ತಿದೆ. ಇದರಿಂದಾಗಿ ಕೆಳವರ್ಗ ಇಂಥ ಫಲಿತಗಳನ್ನು ಪರೋಕ್ಷವಾಗಿ ಸ್ವೀಕರಿಸುತ್ತಿದೆ. ಇದು ಅನಿವಾರ್ಯವಾಗಿ ಪರಿಣಮಿಸಿದೆ. "ಜಾಗತೀಕರಣವೆಂಬುದು ಇದೊಂದು ಆಸೆಯನ್ನಾಧರಿಸಿದ ಒಂದು ಸಂಯುಕ್ತ ರಚನೆ."[೩೪] ಹಾಗಾಗಿ ಇಂದು ನಿತ್ಯಜೀವನದ ವಿವಿಧ ವಸ್ತುಗಳ ಬೆಲೆಗಳು ಗಗನಕ್ಕೇರಿವೆ. ಇದರಿಂದಾಗಿ ಆರ್ಥಿಕವಾಗಿ ದುರ್ಬಲವಾದ ವರ್ಗ ಆರ್ಥಿಕ ಸಂಪಾದನೆಗಾಗಿ ಪಟ್ಟಣಗಳ ಕಡೆ ಸ್ಥಿತ್ಯಂತರಗೊಳ್ಳುತ್ತಿದ್ದಾರೆ. ದಲಿತ ಬಂಡಾಯ ಕಾದಂಬರಿಗಳು ಈ ಅಂಶಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಇದರಿಂದಾಗಿ ವಾಸ್ತವದಲ್ಲಿ ಕೆಳವರ್ಗದ ಓದುಗನಿಗೆ ಜಾಗತೀಕರಣದ ಪರಿಣಾಮಗಳು ಹಾಗೂ ಅದನ್ನು ಬಳಸಿಕೊಳ್ಳುವ ಜಾಗೃತಿಯನ್ನು ಮೂಡಿಸುತ್ತದೆ.

ಬಹುಮುಖ್ಯವಾಗಿ ದಲಿತ-ಬಂಡಾಯ ಕಾದಂಬರಿಗಳು, ಸ್ತ್ರೀ ಸಂವೇದನೆಗಳ ಬಗ್ಗೆ ವಿಶೇಷ ಕಾಳಜಿ ವಹಿಸುತ್ತವೆ. ಗ್ರಾಮೀಣ ಸಮಾಜದಲ್ಲಿ ಶೋಷಿತ ಹೆಣ್ಣೊಬ್ಬಳು ಜಾತಿಯಾಧಾರಿತ ಅಥವಾ ಪುರುಷರ ಬಲೆಗೆ ಹೇಗೆ ಸಿಕ್ಕಿಹಾಕಿಕೊಳ್ಳುತ್ತಾಳೆ. ಹಾಗೂ ಆ ಬಂಧನದಲ್ಲಿಯ ತನ್ನ ಯಾತನೆಯನ್ನು ಹೇಗೆ ಪರಿಹರಿಸಿಕೊಳ್ಳುತ್ತಾಳೆಂಬುದನ್ನು ಇಲ್ಲಿನ ವಿವಿಧ ಕಾದಂಬರಿಗಳು ಬಗೆ ಬಗೆಯಾಗಿ ಚಿತ್ರಿಸುತ್ತವೆ.

ಹೀಗೆ ಈ ಕಾದಂಬರಿಗಳು ವಾಸ್ತವ ಬದುಕಿನ ವಿವರಗಳನ್ನು ಪ್ರಕಟಿಸುವುದರಿಂದ, ಕೆಳವರ್ಗದ ಸಂಸ್ಕೃತಿಯ ಜೀವಂತ ನೆಲೆಗಳು ಅದರ ಎಲ್ಲ ಅಂತಶಕ್ತಿಗಳೊಡನೆ ನಮಗೆ ಸಿಗುತ್ತವೆ. ಹಾಗಾಗಿ ಕಾದಂಬರಿಗಳು ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಮತ್ತೆ ಮತ್ತೆ ಓದಿಸಿಕೊಳ್ಳುತ್ತವೆ. ಆ ಮೂಲಕ ಶೋಷಿತ ವರ್ಗಗಳಲ್ಲಿನ ಆತ್ಮ ವಿಶ್ವಾಸವನ್ನು, ಪರ್ಯಾಯ ಹುಡುಕಾಟದ ತುರ್ತುಗಳನ್ನು ಮನಸ್ಸಿಗೆ ತಂದುಕೊಡುತ್ತವೆ. ಅಧ್ಯಯನ ಮಾಡಲು ಪ್ರೇರೇಪಿಸುತ್ತವೆ.

## ವಸ್ತು

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶೋಷಕ ಶೋಷಿತರ ನಡುವೆ ಅನೇಕ ಸಂಘರ್ಷಗಳು ನಡೆದಿವೆ. ಆದರೆ ಇಂದಿನ ಬಂಡವಾಳ, ಆಧುನಿಕ ಸಂದರ್ಭದಲ್ಲಿ ಅದು ನಿಶ್ಚಿತ ರೂಪದಲ್ಲಿ ವ್ಯಕ್ತವಾಗುತ್ತಿದೆ. ಹೀಗಾಗಿ ಇಲ್ಲಿವರೆಗೂ ನಡೆದ ಸಂಘರ್ಷ ಸಮಾಜದ ಮೇಲ್ ರಚನೆಯ ಒಳಸಂಘರ್ಷವಾಗಿದೆ.

ಆದರೆ ಈಗಿನ ಬಂಡವಾಳಶಾಹಿ ಸಂದರ್ಭದ ಸಂಘರ್ಷ ನೇರವಾಗಿ ದಾಳಿಯಿಡುವುದು ವ್ಯವಸ್ಥೆಯ ಮೂಲ ಆರ್ಥಿಕ ಸಂಬಂಧದ ಮೇಲೆ. ಆ ಕಾರಣದಿಂದ ಅದರ ಸಂಬಂಧಿಯಾದ ಸಾಹಿತ್ಯದಲ್ಲಿ ನಡೆಯುವ ಮುಖಾಮುಖಿ ಕೂಡ ಈ ಮೂಲ ಸಂರಚನೆಯ ಮೇಲೆಯೆ. ಇಲ್ಲಿಯವರೆಗೆ ಧರ್ಮ-ಜಾತಿಯ ಒಳಸುತ್ತಿನಲ್ಲೇ ಪ್ರಕಟವಾಗಬೇಕಾದ ಸಂಘರ್ಷದ ನೆಲೆ ಈಗ ನೇರ ಆರ್ಥಿಕ ಸಂರಚನೆಯ ಮೇಲೆ ನಡೆಯುತ್ತಿದೆ. ಆರ್ಥಿಕ ಸಂರಚನೆಯು ದುರ್ಬಲ ವರ್ಗಗಳಲ್ಲಿ ಸಮಾನವಾಗಿ, ಸಮರ್ಪಕವಾಗಿ ಹಂಚಿಕೆಯಾಗಬೇಕೆಂಬುದೇ ದಲಿತ-ಬಂಡಾಯದ ಆಶಯ.

ಆರ್ಥಿಕ ಅಸಮತೋಲನೆಯಿಂದ ಕೆಳವರ್ಗಗಳ ಬದುಕು ಶೋಷಣೆಗೊಳಗಾಗಲು ಕಾರಣವಾಗುತ್ತದೆ. ಈ ಅಸಮಾನತೆಯ ನೆಪದಲ್ಲಿ ನಡೆಸುವ ಶೋಷಕನ ವಿರುದ್ಧ ಪ್ರತಿಭಟನೆಯ ಧ್ವನಿಯಾಗಿ ಬಂಡಾಯ ಸಾಹಿತ್ಯ ರೂಪಗೊಂಡಿದೆ. ಜಿ.ಎಸ್ .ಶಿವರುದ್ರಪ್ಪನವರು ಅಭಿಪ್ರಾಯ ಪಡುವ ಹಾಗೆ "ಬಂಡಾಯವೆಂದರೆ ಅದೊಂದು ಮನೋಧರ್ಮ. ಸಾಮಾಜಿಕ ಅಸಮಾನತೆ ಹಾಗೂ ಅನ್ಯಾಯಗಳನ್ನು ಒಟ್ಟಾರೆಯಾಗಿ ವಸ್ತು ಸ್ಥಿತಿಯನ್ನು ಪ್ರಶ್ನಿಸುವ ಒಂದು ಪ್ರವೃತ್ತಿ"[೩೫] ಅದು ವರ್ತಮಾನದ ಸಂಕಷ್ಟಗಳನ್ನು ಒಳಗೊಳ್ಳುತ್ತಲೇ ಅದರ ಕಾರಣಗಳನ್ನು ಹುಡುಕುತ್ತದೆ. ಬಂಡಾಯ ಕಾರಣವನ್ನಷ್ಟೇ ಹುಡುಕುವುದಿಲ್ಲ. ಅದನ್ನು ಬದಲಿಸಬೇಕೆನ್ನುತ್ತದೆ. ಕಾರಣ ಅದು ತನ್ನ ಹುಡುಕಾಟದಲ್ಲಿ ವಾಸ್ತವದ ವಿಶ್ಲೇಷಣೆಯಲ್ಲಿ ತನ್ನ ಆಶಯವನ್ನು ವ್ಯಕ್ತಪಡಿಸುತ್ತದೆ.

ಈ ಎಲ್ಲ ಕಾರಣಗಳಿಂದ ದಲಿತ-ಬಂಡಾಯದ ವಸ್ತು ವಾಸ್ತವದ ಮೂಲಕ ವಾಸ್ತವದ ಒಳನೆಲೆಗಳನ್ನು ಸೆರೆಹಿಡಿಯುವಂತಹದು ಆಗಿದೆ. ಇದರಿಂದಾಗಿ ಇದರ ವಸ್ತು ನಗರ ಕೇಂದ್ರಿತವಾಗಿರದೇ ಗ್ರಾಮೀಣ ಕೇಂದ್ರಿತವಾದುದು. ಇದಕ್ಕೆ ಕಾರಣಕೊಡುವುದಾದರೆ, ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಜೀವಂತವಾಗೇ ಇರುವ ಊಳಿಗಮಾನ್ಯ ವ್ಯವಸ್ಥೆ ಮತ್ತು ಈ ವ್ಯವಸ್ಥೆ ಪೋಷಿಸಿಕೊಂಡು ಬಂದಂಥ ಧರ್ಮ-ಜಾತಿಯ ಸಂರಚನೆ, ಅತ್ಯಾಚಾರ, ದೌರ್ಜನ್ಯ ಇನ್ನೂ ಜೀವಂತವಾಗಿ ಉಳಿದಿವೆ.

ದಲಿತ ಬಂಡಾಯದ ಎಲ್ಲಾ ಕಾದಂಬರಿಕಾರರು ಗ್ರಾಮೀಣ ಪರಿಸರವನ್ನೇ ಮೂಲ ವಸ್ತುವನ್ನಾಗಿ ಮಾಡಿಕೊಂಡರೂ, ಆ ಸಮಾಜದ ವಿವಿಧ ಅನುಭವಗಳನ್ನು ಕಥೆಯಾಗಿ ಚಿತ್ರಿಸುತ್ತಾರೆ. ಆದ್ದರಿಂದ ಕಥೆಯಾಗಿ ಮಾರ್ಪಾಡುಗೊಳ್ಳುವ ಕಥೆಗಳು ವಿಭಿನ್ನ ಸ್ವರೂಪದಲ್ಲಿ ಆಕೃತಿಗೊಳ್ಳುತ್ತವೆ.

ಕಾದಂಬರಿಯು ಒಂದು ಮುಖ್ಯ ಘಟನೆಯನ್ನು ಎತ್ತಿಕೊಂಡು ಆ ಕಥೆಗೆ ಪೋಷಕವಾಗುವಂತೆ ವಿವಿಧ ಘಟನೆಗಳನ್ನು ವಸ್ತುವಾಗಿ ರೂಪಿಸಿಕೊಂಡಿರುತ್ತಾನೆ. ಆದ್ದರಿಂದ ದಲಿತ-ಬಂಡಾಯ ಕಾದಂಬರಿಗಳು ಹಸಿವು. ಬಡತನ, ನಿರುದ್ಯೋಗ, ಜಾತಿ ಸಮಸ್ಯೆ, ಆರ್ಥಿಕ ಸಮಸ್ಯೆ, ಉಳ್ಳವರ ದೌರ್ಜನ್ಯ ಕೆಳವರ್ಗಗಳ ಅಸಹಾಯಕತೆ ಮುಂತಾದ ವಸ್ತುಗಳನ್ನೊಳಗೊಂಡಿವೆ. ಈ ಕಾದಂಬರಿಗಳು ಬರೀ ಕಥೆಯನ್ನು

ಹೇಳುವುದಿಲ್ಲ. ಬದಲಾಗಿ ಮೇಲೆ ಹೇಳಿದ ಅಂಶಗಳ ಬದಲಾವಣೆಗಾಗಿ ಕೆಳವರ್ಗಗಳ ಬದುಕನ್ನು ತೆರೆದ ಮನಸ್ಸಿನಿಂದ ಪ್ರಕಟಿಸುತ್ತವೆ.

ಕೃಷ್ಣಮೂರ್ತಿ ಪುರಾಣಿಕ ಅವರು ಅಭಿಪ್ರಾಯ ಪಡುವಂತೆ "ನೋಡದ ಕಣ್ಣು ಕಥೆ ಬರೆಯುತ್ತದೆ; ನೋಡುವ ಕಣ್ಣು ಅನುಭವಿಸುತ್ತದೆ. ದರ್ಶನದ ದೃಷ್ಟಿಯನ್ನು ಪಡೆದ ಕಣ್ಣು ಸಮಾಜದ ಜೀವನಾಡಿಗಳನ್ನು ಸ್ಪಂದನ ಮಾಡುತ್ತದೆ. ಈ ಮೂರು ಕಣ್ಣುಗಳಲ್ಲಿ ಮುಪ್ಪುರಿಗೊಂಡ ಲೇಖಕನಿಗೆ ಮುಕ್ಕಣ್ಣನ ಕೃಪೆಯಾದಾಗ ಮೂರನೇ ಕಣ್ಣು ತೆರೆಯುತ್ತದೆ. ಜಗತ್ತಿಗೆ ಈ ಕಣ್ಣ ಬೆಳಕೇ ಕಲ್ಯಾಣ."[೨೭]

ಇದರಿಂದಾಗಿ ದಲಿತ ಬಂಡಾಯ ಕಾದಂಬರಿಕಾರರು ಕೆಳವರ್ಗದ ಅಸ್ತಿತ್ವದ ವಿಚಾರಗಳನ್ನು ಭೂತ-ವರ್ತಮಾನ-ಭವಿಷತ್ ಕಾಲಗಳನ್ನೊಳಗೊಂಡಂತೆ ಸಾಮಾಜಿಕ, ಆರ್ಥಿಕ, ರಾಜಕೀಯ, ಬೌದ್ಧಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ದಲಿತರ ಹಾಗೂ ಕೆಳವರ್ಗಗಳ ಮೇಲೆ ಹೇರಿರುವ ಮತ್ತು ಶೋಷಿಸುವ ವಸ್ತು ನೆಲೆಯ ಬಗೆಗೆ ಮೂಡಿಸುವ ಅರಿವು ಮತ್ತು ಆ ವಸ್ತು ಸ್ಥಿತಿಯಿಂದ ವಿಮೋಚನೆ ಹೊಂದಲು ಮಾಡುತ್ತಿರುವ ಪ್ರಯತ್ನ ಗಮನಾರ್ಹವಾಗಿ ಕಾಣುತ್ತದೆ.

ಈ ಮೊದಲೇ ಹೇಳಿದಂತೆ ದಲಿತ-ಬಂಡಾಯ ಕಾದಂಬರಿಗಳು ಒಂದು ಕಥೆಯನ್ನೇ ವಸ್ತುವಾಗಿಸಿಕೊಳ್ಳುತ್ತವೆಂದು. ಆದರೆ ಈ ಕಥೆಯ ಜೊತೆಗೆ ಹಲವಾರು ಸನ್ನಿವೇಶಗಳು, ಪಾತ್ರಗಳು, ವಿವರಗಳು ವಸ್ತುವಾಗಿ ರೂಪ ಪಡೆಯುತ್ತವೆ.

ದಲಿತ ಬಂಡಾಯ ಕಾದಂಬರಿಗಳು ಸಾಂಪ್ರದಾಯಿಕ ಕಾದಂಬರಿಗಳಿಂದ ಭಿನ್ನವಾಗಿ ರಚಿನೆಗೊಂಡಿದ್ದರಿಂದ ಇದರ ವಸ್ತು ವಿನ್ಯಾಸವೂ ಭಿನ್ನವಾಗಿದೆ. ಸ್ವಾತಂತ್ರ್ಯದ ನಂತರ ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಮುಳ್ಳೂರು ನಾಗರಾಜ ಮುಂತಾದವರು ವಾಸ್ತವ ಬದುಕಿನ, ವಸ್ತುವನ್ನು ಆಯ್ದುಕೊಂಡು ಹೊಸ ಬದಲಾವಣೆಗಾಗಿ ಕಾದಂಬರಿ ಪ್ರಕಾರವನ್ನು ರಚಿಸಿ, ಹೊಸಕ್ರಾಂತಿಗೆ ಪ್ರೇರಣೆ ನೀಡಿದರು.

ದೇವನೂರು ಮಹಾದೇವರ 'ಕುಸುಮ ಬಾಲೆ', ಕಾದಂಬರಿಯ ವಸ್ತು ಸ್ವರೂಪವನ್ನು ಈಗ ನೋಡಬಹುದು. 'ಕುಸುಮ ಬಾಲೆ' ಕಾದಂಬರಿಯ ಶೀರ್ಷಿಕೆಯಾಗಿದೆ. ಅದರಲ್ಲಿ ಕುಸುಮ ಬಾಲೆ' ಎಂಬ ಶೋಷಿತ ಹೆಣ್ಣಿನ ಪಾತ್ರದ ಚಿತ್ರಣವಿದೆ. "ಕುಸುಮ ಬಾಲೆ' ಕಾದಂಬರಿಯ ಪ್ರಮುಖ ವಸ್ತುವಾಗಿದ್ದರೂ ಆ ಪಾತ್ರ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವುದು ಎರಡು ಬಾರಿ. ಅವಳು ಮಾತನಾಡುವುದು ಒಂದು ಬಾರಿ! ಹಾಗಾದರೆ, ಈ ಕಾದಂಬರಿಯ ಕೇಂದ್ರ ವಸ್ತುವೆಂದು ಕುಸುಮಳನ್ನು ಕರೆಯಲಾದೀತೆ ಎಂಬುದು ಪ್ರಶ್ನೆಯಾಗುತ್ತದೆ. ದೇವನೂರು ಅವರ ಕಲಾ ಕುಸುರಿ ಇರುವುದೇ ಇಲ್ಲಿ.

ಏಕೆಂದರೆ, ಆ ಪಾತ್ರದ ಸನ್ನೀವೇಶದಂತೆ ಸಮಾಜದಲ್ಲಿ ಉಳಿದ ನೊಂದ ಮಹಿಳೆಯರಿದ್ದಾರೆ. ಎಲ್ಲಾ ಮಹಿಳೆಯರ ನೋವುಗಳನ್ನು ಹೇಳುತ್ತಲೇ ಕುಸುಮಳ ಪಾತ್ರವನ್ನು ಸೃಷ್ಟೀಕರಣ ಮಾಡುತ್ತಾರೆ. ಅಂದರೆ, ಕಾದಂಬರಿಯಲ್ಲಿ ದೇವನೂರರು ವ್ಯಕ್ತಿಕೇಂದ್ರಿತವಾಗುವುದಿಲ್ಲ. ಬದಲಾಗಿ ಸಮಾಜ ಕೇಂದ್ರಿತ ಸಮಾನತೆಗಾಗಿ ಹಂಬಲಿಸುತ್ತಾರೆ. ಪ್ರತಿಯೊಂದು ಪಾತ್ರವೂ ವಸ್ತುವಾಗಿ, ಮಾರ್ಪಟಾಗುತ್ತವೆ. "ದಲಿತರ ನೋವು-ನಲಿವು, ಬದುಕು ಬವಣೆ, ನಂಬಿಕೆ-ನಡವಳಿಕೆ ಶೋಷಣೆ, ಬಡತನ ಒಟ್ಟಾರೆ ದಲಿತರ ಎಲ್ಲ ಒಳ-ಹೊರಗನ್ನು ಮೊದಲ ಬಾರಿಗೆ ಗದ್ಯದಲ್ಲಿ ಬಿಚ್ಚಿಟ್ಟ ಯಶಸ್ಸು ಮಹಾದೇವ ಅವರದು. ಪೂರ್ವಗ್ರಹಕ್ಕೆ ಒಳಗಾಗದೆ, ಆಕ್ರೋಶಕ್ಕೆ ಅವಕಾಶ ಕೊಡದೆ, ಸಂಯಮದಿಂದ ವಸ್ತುಸ್ಥಿತಿಯನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಮಹಾದೇವ ಅವರ ಹೆಚ್ಚುಗಾರಿಕೆಯಿದೆ."[೬೭] ಎನ್ನುವಲ್ಲಿ ಶೋಷಿತ ಹೆಣ್ಣು ಪಾತ್ರಗಳ, ಗಾರೆಸಿದ್ಧ್ಮಾನ ಪ್ರಸಂಗ, ಅಮಾಸನ ವೃತ್ತಿಯ ಪ್ರಸಂಗ ಮದ್ವಾಚಾರ್ಯರ ಪ್ರಸಂಗ, ಮುಂತಾದವಲ್ಲಿ ಪಾತ್ರಗಳ ವಸ್ತು ವಿಶ್ಲೇಷಣೆಯು ಗಮನಾರ್ಹವಾಗಿದೆ.

ಬರಗೂರರ 'ಸೂರ್ಯ' ಕಾದಂಬರಿಯ ವಸ್ತು, ಜಮೀನ್ದಾರ ಹಾಗೂ ಕೆಳವರ್ಗದ ದಲಿತನೊಬ್ಬನ ನಡುವಿನ ಕಥೆಯಾಗಿದೆ. ಆದರೆ ಇದೇ ಪ್ರಮುಖ ವಸ್ತುವಲ್ಲ. ಬರಗೂರರು ಊಳಿಗಮಾನ್ಯ ವ್ಯವಸ್ಥೆ ನಿರ್ವೀರ್ಯಗೊಳ್ಳುತ್ತಿರುವ ಸಂದರ್ಭವನ್ನು ವಸ್ತುವಾಗಿ ಆರಿಸಿಕೊಂಡಿದ್ದಾರೆ. ಆ ಮೂಲಕ ವರ್ಗರಹಿತ, ವರ್ಣರಹಿತ ಸಮಾಜ ಸ್ಥಾಪಿಸುವುದಕ್ಕಾಗಿ ಗೌಡತಿ ಸೀತಕ್ಕನೊಂದಿಗೆ ದಲಿತ ವರ್ಗದ ಪುರುಷ ಕರಿಯನನ್ನು ಸಂಬಂಧವೇರ್ಪಡುವಂತೆ ಚಿತ್ರಿಸಿದ್ದಾರೆ, ಆ ಮೂಲಕ ವರ್ಗ ಸಂಕರ, ವರ್ಗ ಸಂಕರಕ್ಕಾಗಿ ಪ್ರಯತ್ನಿಸಿದ್ದಾರೆ. ಈ ಕಾದಂಬರಿಯ ಪ್ರಧಾನ ವಸ್ತುವೇ ವರ್ಗ, ವರ್ಣಸಂಕರವಾಗಿದೆ. ಕಾಳೇಗೌಡ ನಾಗವಾರ ಅಭಿಪ್ರಾಯ ಪಡುವಂತೆ, "ಸಾಮಾಜಿಕ ವಾಸ್ತವ ಗ್ರಹಿಕೆಗಳ ಆಧಾರದ ಮೇಲೆ ನಿಂತ ಈ ಕಿರು ಕಾದಂಬರಿಯ ಮೂಲಕ ಲೇಖಕರು ನಮ್ಮ ಪರಿಸರದಲ್ಲಿನ ಅಸಮಾನತೆಯ ವಿವಿಧ ರೂಪ ಮತ್ತು ಬಣ್ಣಗಳನ್ನು ಸೂಕ್ಷ್ಮವಾಗಿ ಬಯಲಿಗೆಳೆಯುವ ಪ್ರಾಮಾಣಿಕ ಪ್ರಯತ್ನವನ್ನು ನಡೆಸಿದ್ದಾರೆ."[೬೮]

ಬರಗೂರರು 'ಸೂರ್ಯ' ಕಾದಂಬರಿಯನ್ನು ಸೂರ್ಯನ ಪ್ರತಿಮೆಯ ಮೂಲಕ ಕಲಾಕೃತಿಯಾಗಿ ರಚಿಸಿರುವುದುಂಟು. 'ಸೂರ್ಯ'ನಿಗೆ ಬೇಧ-ಭಾವ ಇಲ್ಲ. ಹಾಗಾಗಿ ಕರಿಯನ ಸಂಬಂಧದಿಂದ ಗರ್ಭಧರಿಸಿಕೊಂಡ ಸೀತಕ್ಕ ಹೀಗೆ ಹೇಳುತ್ತಾಳೆ. "ಸೂರ್ಯನ್ ತರಹ ಮಗು ಹುಟ್ ಬಂದಾಗ ಎಲ್ಲಾ ಕಡೆಗೆ ಬೆಳಕ್ ಬೀಳ್ತೈತೆ"[೬೯] ಎಂಬುವಲ್ಲಿ ಸಮಾನ ಸಮಾಜದ ಆಶಯವನ್ನು ಹೊಂದಿದ್ದಾರೆ.

ಅರವಿಂದ ಮಾಲಗತ್ತಿಯವರ 'ಕಾರ್ಯ', ಮನಜ ಅವರ 'ಮಾಗಿ' ಕಾದಂಬರಿಗಳು ದೇವನೂರರ ಹಾಗೂ ಬರಗೂರರ ಕಾದಂಬರಿಗಳಂತೆ, ಕಾದಂಬರಿಯ ಶೀರೋನಾಮೆಯೇ ಪ್ರಮುಖ ವಸ್ತುಗಳಾಗಿವೆ.

ಆದರೆ, ಆ ಮೂಲಕ ಕೆಳಸಮುದಾಯಗಳ ಬದುಕಿನ ವಿವರಗಳನ್ನು ದಾಖಲಿಸುತ್ತವೆ. ಆ ವಿವರದ ಘಟನೆಗಳೇ ಒಂದೊಂದು ವಸ್ತುವಾಗಿ ರೂಪಪಡೆಯುತ್ತವೆ.

ಡಾ.ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿ ದಲಿತ ಹೆಣ್ಣು ಬಂಗಾರವ್ವನ ಹೆಣದ ಕಾರ್ಯವನ್ನು ಕೇಂದ್ರ ವಸ್ತುವನ್ನಾಗಿಟ್ಟುಕೊಂಡು ಅದರ ಮೂಲಕ ಆ ಸಮಾಜದ ಸ್ಥಿತಿಯನ್ನು ವಿವರಿಸುವ ಪ್ರಯತ್ನವನ್ನು ಮಾಡಿದೆ. "ಈ ಕಾದಂಬರಿಯ ವಸ್ತು ಒಂದು ಊರನ್ನು ಒಂದು ಜನಾಂಗವನ್ನು ಒಂದು ಆಚರಣೆಯನ್ನು ಒಳಗೊಂಡು ಬೆಳೆಯುತ್ತದೆ. ಆದರೆ ಲೇಖಕರು ಆಚರಣೆಯ ಪರ ನಿಲ್ಲದೆ, ಆಚರಣೆಯ ಭೇದವನ್ನು ಧ್ವನಿಸುತ್ತಾರೆ. ಕೃತಿಯ ಉದ್ದಕ್ಕೂ ಚಿತ್ರಿತವಾಗಿರುವ ಶೀತಲ ಪ್ರತಿಭಟನೆಯು ಕೃತಿಗೆ ಅನನ್ಯತೆಯನ್ನು ಕೊಟ್ಟಿದೆ."[೪೦] ಮತ್ತೊಂದು ರೀತಿಯಿಂದ ಈ ಕಾದಂಬರಿ ಕುತೂಹಲವನ್ನು ಹುಟ್ಟಿಸುತ್ತದೆ. ಬಂಗಾರವ್ವನ ಕಾರ್ಯ ನಡೆಯುತ್ತಿರುವಂತೆ, ಸಂಪ್ರದಾಯದ ಪ್ರಕಾರ ಕುಳ್ಳಗ್ಗಿ ನೆಲಕ್ಕೆ ಬೀಳಿಸಬಾರದು, ಆದರೆ ಘಟೇಗಾರ ಮಲ್ಲಪ್ಪ ಕುಳ್ಳಗ್ಗಿಯನ್ನು ನೆಲಕ್ಕೆ ಬೀಳಿಸುತ್ತಾನೆ. ಮಚಗಾರ ಜನಾಂಗ ಇದರ ನ್ಯಾಯಪಂಚಾಯ್ತಿಗೆ ತೊಡಗುತ್ತಾರೆ; ಕೊನೆಗೆ ಮಲ್ಲಪ್ಪ ಪದ್ಮಾವತಿ ಕೂಡಿಕೊಂಡು ಓಡಿಹೋಗುವುದು ಇನ್ನಷ್ಟು ಕುತೂಹಲ ಕೆರಳಿಸುತ್ತದೆ. ಅಂತಿಮವಾಗಿ ರುದ್ರಗೌಡರು ಮತ್ತು ವರಗ ದಶರಥ ಕೆರೆಗೆ ಬಿದ್ದು ಸಾಯುವುದು, ಶಾಂತಗೌಡನ ಕ್ರೌರ್ಯದ ಪರಮಾವಧಿಯೆಂಬಂತೆ ನಾಲ್ಕು ದಿನಗಳಿಂದ ಕುಣಿಯಲ್ಲಿದ್ದ ಹೆಣ ಐದನೆಯ ದಿನಕ್ಕೆ ಹೊರಗೆ ಎಸೆಯಲ್ಪಟ್ಟು ಅದರ ಮೇಲೆ ಕಾಗೆಗಳು, ಹದ್ದುಗಳು ಹಾರಾಡುತ್ತಿರುವುದು. ಹೀಗೆ ಇವೆಲ್ಲಾ ಕುತೂಹಲಗಳನ್ನು ಕಾಪಾಡಿಕೊಂಡು, ನೈಜತೆಯನ್ನು ಉಳಿಸಿಕೊಂಡು ಎಲ್ಲಿಯೂ ಘೋಷಣೆ, ಸಂದೇಶಗಳನ್ನು ತರದೆ ಹೇಳಬೇಕಾದುದನ್ನು ತುಂಬಾ ಪರಿಣಾಮಕಾರಿಯಾಗಿ ಹೇಳಿದ್ದಾರೆ. ಹೀಗೆ ಈ ಕಾದಂಬರಿಯಲ್ಲಿ ವಸ್ತು ಹಾಗೂ ಪಾತ್ರಗಳು ಪರಸ್ಪರ ಕಥೆಯ ರೂಪ ಪಡೆಯುತ್ತವೆ. "ವಸ್ತು ಪ್ರಧಾನ ಕಾದಂಬರಿಯಲ್ಲಿ ಪಾತ್ರಗಳು ಕಥೆಯ ಬೆಳವಣಿಗೆಯ ಸಾಧನಗಳು ಅವುಗಳಿಗೆ ವ್ಯಕ್ತಿತ್ವವಾಗಲೀ ವೈಶಿಷ್ಟ್ಯವಾಗಲೀ ಇಲ್ಲ. ಪಾತ್ರ ಪ್ರಧಾನವಾದ ಕಾದಂಬರಿಯಲ್ಲಿ ವಸ್ತುವಿಗೆ ಪ್ರಾಮುಖ್ಯತೆ ಇಲ್ಲ. ಕೇಂದ್ರ ವ್ಯಕ್ತಿಯ ಸ್ವಭಾವದ ಮೇಲೆ ಬೆಳಕು ಚೆಲ್ಲಲು ಕಥೆಗಾರ ಸೃಷ್ಟಿಸಿದ ಘಟನೆಗಳ ಸರಪಳಿ ವಸ್ತು. ಅಷ್ಟೆ."[೪೧] ಹಾಗಾಗಿ ಕಾರ್ಯ ಕಾದಂಬರಿಯ ಬರುವ "ಗೌಡರ ಮತ್ತು ದಲಿತರ ನಡುವಿನ ಸಂಘರ್ಷ ಈ ಕಾದಂಬರಿಯ ಉದ್ದೇಶವಲ್ಲ. ಹಾಗೆಯೇ ಪುರೋಹಿತ ಶಾಹಿಯ ವಿರುದ್ಧ ದಲಿತರು ಬಂಡಾಯ ಹೂಡುವ ವಸ್ತುವುಳ್ಳದ್ದು ಅಲ್ಲ."[೪೨] ಎನ್ನುವಲ್ಲಿ ಕಾದಂಬರಿಯಲ್ಲಿ ಬರುವ ಈ ಪಾತ್ರಗಳ ಪಾತ್ರವೇನು ಎಂಬುದು ಪ್ರಶ್ನೆಯಾಗುತ್ತದೆ. ಅಂದರೆ ಕಾದಂಬರಿಕಾರ ದಲಿತರ ಬದುಕು ವ್ಯವಸ್ಥೆಯೊಂದರಲ್ಲಿ ಶೋಷಣೆಗೊಳಗಾಗುವ ಹಲವು ಮಜಲುಗಳನ್ನು ತೋರಿಸುವುದು ಪ್ರಮುಖವಾಗಿದೆ.

ಈ ನಿಟ್ಟಿನಲ್ಲಿ ಮನಜರ ಕಾದಂಬರಿಯ ವಸ್ತು ಕಾರ್ಯ ಕಾದಂಬರಿಗೆ ಹೋಲುತ್ತದೆ. 'ಕಾರ್ಯ'ದಲ್ಲಿ ಬಂಗಾರೆವ್ವನ ಕಾರ್ಯದ ಮೂಲಕ ದಲಿತರ ಬದುಕಿನ ವಿವರ ಗ್ರಹಿಕೆಗೆ ಬಂದರೆ, 'ಮಾಗಿ'ಯ ಮಾಗವ್ವಳ ಮೂಲಕ ದಲಿತ ಬದುಕಿನ ಘಟನೆಗಳ ವಿವರಗಳು ಗ್ರಹಿಕೆಗೆ ಬರುತ್ತದೆ. ದಲಿತ ಸಂವೇದನೆ ಮತ್ತು ಹೆಣ್ಣಿನ ಸಂವೇದನೆಗಳು ಜೊತೆಗೂಡಿ ಕಾದಂಬರಿಯೊಂದರ ವಿನ್ಯಾಸವನ್ನು ರೂಪಿಸಿದ ವಿಶಿಷ್ಟತೆ ಈ ಕೃತಿಯಲ್ಲಿದೆ. 'ಮಾಗವ್ವ' ಈ ಕಾದಂಬರಿಯ ಪ್ರಮುಖ ವಸ್ತುವಾದರೂ ಈ ವಸ್ತುವಿಗೆ ಬೆಳಕು ಚೆಲ್ಲಲು ಕಾದಂಬರಿಯಲ್ಲಿಯ ಇತರ ಶೋಷಕ ಪಾತ್ರಗಳು ವಸ್ತುವಾಗಿವೆ. ಸ್ಥೂಲವಾಗಿ ನೋಡಿದರೆ, ಒಂದು ಕುಟುಂಬದ ಚಿತ್ರವೇ ವಸ್ತುವಾಗಿದೆ. ಹಾಗಾಗಿ ಕಾದಂಬರಿಕಾರರು ದಲಿತ ಸಮಾಜ ಒಂದರೊಳಗೆ ಇರುವ ಹೆಣ್ಣೊಬ್ಬಳು ಆ ಸಮಾಜದ ಒಳಗಿನ ಇತರ ಗಂಡು ಮತ್ತು ಹೆಣ್ಣುಗಳ ಜೊತೆಗೆ ಮತ್ತು ಇತರ ಸಮಾಜಗಳ ವ್ಯಕ್ತಿಗಳ ಜತೆಗೆ ವ್ಯವಹರಿಸುವ ಭಿನ್ನ ಸಂದರ್ಭಗಳ ಚಿತ್ರಣದ ವಸ್ತುವಾಗಿ ಚಿತ್ರಿಸಿದ್ದಾರೆ. ಇಂಥದ್ದೇ ಪ್ರಸಂಗವು ಬಿ.ಟಿ.ಲಲಿತಾನಾಯ್ಕರವರು 'ಗತಿ' ಕಾದಂಬರಿಯಲ್ಲಿ ಕಟ್ಟಿಕೊಡುತ್ತಾರೆ. ಅವರು 'ಸೋನಿ' ಪಾತ್ರವನ್ನು ವಸ್ತುವಾಗಿಸಿಕೊಂಡು ಸ್ತ್ರೀ ಸಂವೇದನೆಯಾಗಿ ಕಥೆಯನ್ನು ಕಟ್ಟಿಕೊಡುತ್ತಾರೆ. ಕಾದಂಬರಿಯಲ್ಲಿ ಈ ಪಾತ್ರ ಪ್ರಮುಖವಾದರೂ ಆ ಮೂಲಕ ಬಿ.ಟಿ.ಲಲಿತಾನಾಯ್ಕರ ಬಹುಮುಖ್ಯ ಕಥಾವಸ್ತು ಮನುಷ್ಯನ 'ಸಣ್ಣತನ'. ಈ ಸಣ್ಣತನ ವಿವಿಧ ವಿಧಾನಗಳಲ್ಲಿ ಹೊರಹೊಮ್ಮುತ್ತದೆ. ಇದು ಕೆಲವೊಮ್ಮೆ ಶೋಷಕ ಮನಸ್ಥಿತಿಯಾಗಿ, ಕೆಲವೊಮ್ಮೆ ಆಸೆ ಬುರುಕತನವಾಗಿ ವಂಚನೆಯಾಗಿ ಕಾಣುತ್ತದೆ.

ಕುಂಬಾರ ವೀರಭದ್ರಪ್ಪನವರು 'ಕಪ್ಪು' ಕಾದಂಬರಿಯಲ್ಲಿ 'ಗೌರಿ'ಯ ಪಾತ್ರವನ್ನು ಮುಖ್ಯ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ಪ್ರತಿಷ್ಠಿತ ವರ್ಗದ ಹಿಡಿತದಲ್ಲಿರುವ ಸಮಾಜದಲ್ಲಿ, ಆರ್ಥಿಕವಾಗಿ ದುರ್ಬಲವಾದ ಹೆಣ್ಣನ್ನು ಆ ವರ್ಗ ಹೇಗೆ ದುರಂತಕ್ಕೀಡು ಮಾಡುತ್ತದೆಂದು ಕಾದಂಬರಿಯ ವಿವಿಧ ಸನ್ನಿವೇಶಗಳಲ್ಲಿ ಚಿತ್ರಿಸುತ್ತಾರೆ. ಲೇಖಕರು ಒಂದು ಕಡೆ ವಸ್ತುವಿನ ಅಂತಃಕರಣಕ್ಕೆ ಒಳಗಾದರೆ, ಮತ್ತೊಂದೆಡೆ ಸಮಾಜದಲ್ಲಿ ಇನ್ನೂ ಬೇರುಬಿಟ್ಟಿರುವ ಊಳಿಗಮಾನ್ಯ ಪದ್ಧತಿಯನ್ನು ನಿರ್ವೀರ್ಯಗೊಳಿಸುವ ಯತ್ನ ಮಾಡುತ್ತಾರೆ. ಹಾಗಾಗಿಯೇ ಹಳೆಯ ದ್ವೇಷದ ಮೂಲಕ ಎರಡು ಫ್ಯೂಡಲಿಸ್ಟ್‌ಗಳಾದ ಕರೀಗೌಡ ಹಾಗೂ ಸಣ್ರುದ್ರರ ನಡುವೆ ವೈಷಮ್ಯ ಬೆಳೆದು ನಾಶ ಹೊಂದುತ್ತಾರೆ. ಈ ವಸ್ತು ತುಂಬಾ ಪರಿಣಾಮಕಾರಿಯಾಗಿ ಪ್ರಕಟವಾಗಿದೆ. ಈ ಅರಿವಿನೊಂದಿಗೆ 'ಗೌರಿ'ಯ ಬದುಕನ್ನು ಹಸನುಗೊಳಿಸುವ ಸಾಹಸಕ್ಕೆ ಕೈ ಹಾಕುತ್ತಾರೆ. ಆದರೆ, ನಾಶಹೊಂದಿದ ಫ್ಯೂಡಲಿಸ್ಟ್‌ಗಳ ಪ್ರಭುತ್ವ ಸಮಾಜದ ಇತರ ಪುರುಷರಲ್ಲಿ ಹಂಚಿಕೆಯಾಗಿರುತ್ತದೆ. ಹಾಗಾಗಿಯೇ ವ್ಯವಸ್ಥೆ ಗೌರಿಯನ್ನು ಮನುಷ್ಯಳನ್ನಾಗಿ ಬದುಕಲು ಬಿಡದೇ ದುರಂತಕ್ಕೀಡಾಗುವಂತೆ ಮಾಡುತ್ತದೆ. ಒಂದು ಹೆಣ್ಣನ್ನು ವಂಚಿಸಲು ಪುರುಷ ಪ್ರಧಾನ

ಸಮಾಜ ಏನೆಲ್ಲಾ ಹೊಂಚುಹಾಕುತ್ತಿರುತ್ತಾರೆ. ಕುಂ.ವೀ.ಯವರು ಮಾರಮ್ಮಳ ಹೆಸರಿಗೆ ಕನ್ಯೆಯನ್ನು ಬಸವಿಗೆ ಬಿಡುವ ಸಂಪ್ರದಾಯವನ್ನು ವಸ್ತುವಾಗಿಸಿಕೊಂಡಿದ್ದಾರೆ. ಸಂಪ್ರದಾಯ ಎಷ್ಟು ಕ್ರೂರವಾಗಬಹುದೆಂದು ಕಾದಂಬರಿಯ ವಿವಿಧ ಸನ್ನಿವೇಶಗಳಲ್ಲಿ ಬಯಲುಗೊಳಿಸುತ್ತಾರೆ.

ಒಂದು ಶೋಷಿತ ಸಮಾಜದ ಪ್ರಜ್ಞಾವಂತ ಯುವಕನ ಮೂಲಕ ಅಂಥ ಸಮಾಜದಲ್ಲಿ ಹೇಗೆ ಬದಲಾಗಬಹುದೆಂಬ ಆಶಯದಿಂದ ಮುಳ್ಳೂರು ನಾಗರಾಜರು 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಬರುವ ಬಸುವರಾಜನನ್ನು ಕೇಂದ್ರ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ಮುಳ್ಳೂರರೇ ಹೇಳಿಕೊಂಡಿರುವಂತೆ ಕಾದಂಬರಿಯ ವಸ್ತು "ಅನೇಕ ಕಾಲಗಳ, ಮಾನವನ ಬದುಕು, ಅದೂ ಕೂಡ ಭೂಮಿಯ ಮೇಲಿನ ಮರಣದ ಸೆರೆಮನೆಯಾದ ಬದುಕಿನ ಕೇವಲ ಒಂದು ಕ್ಷಣ."[೪೩] ಈ ಹಿನ್ನೆಲೆಯಲ್ಲಿ ಕಾದಂಬರಿ, ಭೂತ, ವರ್ತಮಾನ, ಮತ್ತು ಭವಿಷತ್‌ಗಳ ಸಮೀಕರಣದೊಂದಿಗೆ ಜೀವಂತವಾಗುತ್ತದೆ. 'ಕಾಡೂರು' ಕಾದಂಬರಿಕಾರರ ಕಲ್ಪನೆಯ ಒಂದು ಊರಿನ ಹೆಸರಾದರೂ ಭಾರತದ ಯಾವುದೇ ಹಳ್ಳಿಯ ದರ್ಶನಕ್ಕೂ ಸಂಕೇತವಾಗುತ್ತದೆ. ಆ ಹೆಸರೇ ಮನುಷ್ಯನ ಕಾಡಿನ ಬದುಕನ್ನು, ಆಧುನಿಕತೆ ಬಂದರೂ ಯಾವ ಹಂತದ ಬದಲಾವಣೆಯೂ ಕಾಣದ ವ್ಯವಸ್ಥೆಯ ಕ್ರೂರತೆಯನ್ನು ಹೇಳುತ್ತದೆ. ಈ ಅರ್ಥದಲ್ಲಿ ಕಾದಂಬರಿ ಜಾತಿ ಆಧಾರಿತ ಸಮಾಜದ ಹಾಗೂ ಆ ವ್ಯವಸ್ಥೆಯಲ್ಲಿ ಸಿಕ್ಕು ನರಳುತ್ತಿರುವ ದಲಿತರ ಬದುಕಿನ ಸಂಕೀರ್ಣತೆಯಾಗಿದೆ. ಪ್ರಮುಖವಾಗಿ ಜಾತಿಯಾಧಾರಿತ ಸಮಾಜ ಈ ಕಾದಂಬರಿಯ ವಸ್ತುವಾಗಿದೆ. ಇಂತಹ ವ್ಯವಸ್ಥೆಗೆ ಪ್ರತಿಭಟನೆಯ ಧೋರಣೆಯಾಗಿ ಬಸುರಾಜುವಿನ ಪಾತ್ರ ಕಾಣಿಸಿಕೊಳ್ಳುತ್ತದೆ. ಉಳಿದಂತೆ ರಂಗ-ರಂಗಿಯ ಸಮಸ್ಯೆಯಲ್ಲಿ ಸ್ತ್ರೀ ಸಂವೇದನೆಯನ್ನು ಪ್ರಮುಖ ವಸ್ತುವನ್ನಾಗಿ ಪರಿಗಣಿಸುತ್ತಾರೆ.

ಹೀಗೆ ಇಡೀ ದಲಿತ ಬಂಡಾಯ ಕಾದಂಬರಿಗಳ ವಸ್ತು ಗ್ರಾಮ ಸಮಾಜ ಮತ್ತು ಅಲ್ಲಿನ ವೈರುಧ್ಯತೆ ವೈವಿಧ್ಯಗಳೇ ಆಗಿದೆ. ಆ ಮೂಲಕ ಕೆಳವರ್ಗಗಳ ಶೋಷಣೆ, ಪ್ರತಿಭಟನೆ, ಅಸಮಾನತೆ ಹಾಗೂ ಶ್ರಮಿಕ ಮತ್ತು ಶೋಷಕನ ನಡುವಿನ ಮುಖಾಮುಖಿಯು ಸ್ತ್ರೀಶೋಷಣೆಯ ವಿನ್ಯಾಸಗಳನ್ನು ಪ್ರಖರವಾಗಿ ಕಟ್ಟಿಕೊಡುತ್ತವೆ. ಒಟ್ಟಾರೆ ದಲಿತ ಬಂಡಾಯ ಕಾದಂಬರಿಕಾರರು ಸ್ತ್ರೀ ಸಂವೇದನೆಯನ್ನು ವಸ್ತುವಾಗಿಸಿಕೊಂಡರೂ ಅದನ್ನು ನಿರೂಪಿಸುವ ಚಿತ್ರಿಸುವ ಸಂದರ್ಭದಲ್ಲಿ ಭಿನ್ನಮಾದರಿಗಳನ್ನು ಅಳವಡಿಸಿಕೊಂಡಿರುವುದು ಗಮನಾರ್ಹ. ಪುರುಷ ಪಾತ್ರಗಳು ಅಂದರೆ, ಪ್ರತಿಷ್ಠಿತ ವರ್ಗದ ಗಂಡು ಪಾತ್ರಗಳು ಕ್ರೌರ್ಯದ ವಸ್ತುವಾಗಿ, ಕೆಳವರ್ಗದ ಪುರುಷರು ವ್ಯವಸ್ಥೆಯ ಅಡಿಯಾಳಾಗಿ, ಕಾಣಿಸಿಕೊಳ್ಳುತ್ತಾರೆ. ಒಂದು ಅರ್ಥದಲ್ಲಿ ಮಾತು ಅರಿಯದವರ ಒಳಗಿನ ನೋವು, ಮಾತು ಅರಿತರೂ ನಾಲಿಗೆಯೇಳದ ಅಸಹಾಯಕತೆ ಇವು ಸಾಮಾನ್ಯವಾಗಿ ಇಲ್ಲಿಯ ಎಲ್ಲಾ ಕಾದಂಬರಿಯ ಜೀವಾಳವಾಗಿವೆ.

## ಭಾಷೆ

ದಲಿತ-ಬಂಡಾಯ ಕಾದಂಬರಿಗಳಲ್ಲಿಯ ಭಾಷೆ ಗ್ರಾಮ್ಯ ಭಾಷೆ. ದಲಿತ ಭಾಷೆ, ಜಾನಪದ ಭಾಷೆ ರಚನೆಗೊಂಡಿದ್ದರೂ, ವಿವಿಧ ಪ್ರಾದೇಶಿಕ ಮತ್ತು ಜನಾಂಗಿಕ ಶೈಲಿಗಳು ಕಂಡುಬರುತ್ತದೆ. ಕಾದಂಬರಿಕಾರರು ತಮ್ಮ ಸುತ್ತ-ಮುತ್ತಲಿನ ಪ್ರಾದೇಶಿಕ ಭಾಷೆಯನ್ನು ಬಳಸಿಕೊಂಡಿರುವುದು ಆಯಾ ಕಾದಂಬರಿಕಾರರ ಕಾದಂಬರಿಗಳಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಗೋಚರವಾಗುತ್ತದೆ. ಜಂಬಣ್ಣ ಅಮರ ಚಿಂತ, ಬಿ.ಟಿ.ಲಲಿತನಾಯ್ಕ, ಕುಂಬಾರ ವೀರಭದ್ರಪ್ಪ ಮುಂತಾದವರು ಕಾದಂಬರಿಗಳಲ್ಲಿ ಗ್ರಾಮೀಣ ಸೊಗಡಿನ ಭಾಷೆಯನ್ನು ಜೊತೆಗೆ ಕನ್ನಡ ಗ್ರಂಥಸ್ಥ ಭಾಷೆಯು ಮಿಳಿತಗೊಂಡಿದೆ. ಗ್ರಾಮ್ಯ ಭಾಷೆ ಹಾಗೂ ಗ್ರಂಥಸ್ಥ ಭಾಷೆಗಳ ಮೂಲಕ ರಚನೆಗೊಂಡಿವೆ. ದಲಿತೀಯ ಕಾದಂಬರಿಗಳು ಮೂಲತಃ ಆಡುಭಾಷೆಯನ್ನೇ ಬಳಸಿಕೊಂಡಿದೆ. ಅರ್ಥಾತ್ ದಲಿತ ಭಾಷೆಯನ್ನೇ ಕೇಂದ್ರವಾಗಿಸಿಕೊಂಡು ಸಾಹಿತ್ಯ ಭಾಷೆಯನ್ನಾಗಿ ಪ್ರಯೋಗಿಸಿದ್ದಾರೆ. ಈ ಸ್ವರೂಪದ ಆರಂಭದ ಪ್ರದೇಶ ಭಾಷೆಯೊಂದಿಗೆ ದಲಿತ ಸಂಸ್ಕೃತಿಯೇ ಎದ್ದುಬರುವ ಅಥವಾ ಮೂಡಿ ಬರುವ ರೀತಿಯನ್ನು ಕಂಡಾಗ ಇದನ್ನೇ ವೈವಿಧ್ಯತೆಯ ಬಳಕೆಗೆ ತರಲು ಕಾದಂಬರಿಕಾರರು ಪ್ರಯತ್ನಿಸಿರುವುದು ಕಂಡುಬರುತ್ತದೆ. ದೇವನೂರು ಮಹಾದೇವರು ಚಾಮರಾಜನಗರ ಮತ್ತು ಅದರ ಸುತ್ತಮುತ್ತಲಿನ ಭಾಷೆಯನ್ನು ಬಳಸಿಕೊಂಡಿದ್ದರೆ, ಇವರ ಸಾಲಿನಲ್ಲಿ ಮುಳ್ಳೂರುನಾಗರಾಜ ಅರವಿಂದಮಾಲಗತ್ತಿ, ಮನಜರವರು ಮೈಸೂರು ಪ್ರಾಂತದ ಭಾಷೆಯನ್ನು ತಮ್ಮ ಕಾದಂಬರಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಈ ಕಾದಂಬರಿಗಳ ಒಟ್ಟು ಭಾಷೆ ಗ್ರಾಮೀಣ ಭಾಷೆಯಾದರೂ ಶೈಲಿಯ ದೃಷ್ಟಿಯಿಂದ ಭಿನ್ನವಾಗಿದೆ.

ದೇವನೂರುಮಹಾದೇವರು ಕುಸುಮಬಾಲೆಯಲ್ಲಿ ಅಳವಡಿಸಿಕೊಂಡಿರುವ ಭಾಷೆ ಗ್ರಾಮ್ಯ ಭಾಷೆಯಾದರೂ ಭಾಷೆಯ ಶೈಲಿಯೂ ವೈವಿಧ್ಯಮಯವಾಗಿ ಗ್ರಹಿಕೆಗೆ ಬರುತ್ತದೆ. ಉದಾಹರಣೆಗೆ ಹರಿಕಥೆಯ ಶೈಲಿ, ಮಕ್ಕಳಿಗೆ ಕಥೆ ಹೇಳುವ ಶೈಲಿ, ಮಂಚದ ಹರಾಜಿನ ಸಮಯದಲ್ಲಿ ಜಮಾದಾರ ಬಳಸುವ ಹಾವಾಡಿಗನ ಮೋಡಿಯ ಅರೆ ಪದ್ಯ ಅರೆ ಗದ್ಯದ ಶೈಲಿ, ಬಸಪ್ಪ ಸೋಮಿಗಳು ಬಳಸುವ ಯಕ್ಷಗಾನದ ನಾಟಕೀಯ ಶೈಲಿ, ಗುರು ಮಧ್ವಾಚಾರ್ಯರು ಮಾತನಾಡುವ ಸಂಸ್ಕೃತ ಅಣಕದ ಕನ್ನಡ ಶೈಲಿ, ಹಳೇ ಬಾಕಿಯ ಸಾಬರು ಬಳಸುವ ದಖನಿ ಉರ್ದು ಶೈಲಿಯ ಕನ್ನಡ ಹಾಗೂ ವಿದ್ಯಾವಂತ ಕನ್ನಡಿಗರು ಬಳಸುವ ಭಾಷೆಯೂ ಈ ಕಾದಂಬರಿಯಲ್ಲಿದೆ. ನಿದರ್ಶನಕ್ಕಾಗಿ ಹಳೇ ಬಾಕಿಯ ಸಾಬರು ಬಳಸುವ ದಖನಿ ಉರ್ದು ಶೈಲಿಯ ಕನ್ನಡ ಭಾಷೆಯನ್ನು ಕೃತಿಯಲ್ಲಿ ಕೆಳಗಿನಂತೆ ನಿರೂಪಿತವಾಗಿದೆ.

"ಆದರೆ ಅಮ್ಮಾಸ ಎಲ್ಲಿ ಹೋಗಿದ್ದೊ ಮಾದರ್‌ಜೋತ್. ನಿನ್ದು ಮಾಲು ಯಾಕ್ಲ ಈಗೀಗ ಕಾಣ್ತೆಲ್ಲಾ ಬೋಸುಡಿಕೆ. ಬ್ಯಾರೆಯವರ್ಗೆ ಬಿಕರಿ ಮಾಡ್ತ ನಮಾಕ್ ಹರಾಮ್ ಗಿರಿ ಮಾಡ್ತಿದ್ದಿಯೇನ್ನೇ

ನಿನೌನ ಬೋಸುಡಿಕೇಯ ನಮ್ಮಕೆ ಗೊತ್ತಾಗಲ್ಲ ಅಂದ್ಕಡಿದ್ದಿಯೇನ್ಲೆ ನಿನ್ನಕ್ಕನ್ ? ಈಗ ಅಡ್ವಾನ್ಸ್ ದುಡ್ನ ಮಡ್ಗು ಬುಟ್ಟು ಮುಂದ್ಕ ಇಸ್ಟೆಫ್ ಇಡು"

"ಥತ್ ತೇರಿ ನಿಂಗ ಹೇಳೋದ ಮರ್ತಿದ್ದೆ ನೋಡು. ನಾನು ಬೊಂಬಾಯಿಗೆ ಹೋಗಿದ್ದು ನಿಂಗ್ ಗೊತ್ತಲ್ಲಾ! ಅಲ್ಲಿ ನಿಮ್ದು ಚೊಕ್ರ ಚನ್ನಂಗೆ ನೋಡ್ದೆ ಕಣ್ಲೇ. ಏನ್ ಅಂಡ್ಕಂಡಿದ್ದೀಯ ಈಗ ನಿಮ್ದು ಚನ್ನನ್ನ ಅಲ್ಲಿ! ಇಡೀ ಬೊಂಬಾಯ್ ಮೇಲೇನೆ ಅವ್ನು ಏವನ್ ದಿಲಾದಾರ್ ಅವ್ನೆ ಅವ್ನು"[೪೪] ಇಂಥ ಭಾಷೆಯ ಶೈಲಿಯನ್ನು ಅರವಿಂದಮಾಲಗತ್ತಿಯವರು 'ಕಾರ್ಯ' ಕಾದಂಬರಿಯಲ್ಲಿ ಬಳಸಿಕೊಂಡಿದ್ದಾರೆ.

ಒಟ್ಟು ದಲಿತೀಯ ಕಾದಂಬರಿಗಳಲ್ಲಿ ಬಳಕೆಗೊಂಡ ಭಾಷಾ ಶೈಲಿಯು ಇಡೀ ದಲಿತ ಬದುಕಿನ ಸಾಂಸ್ಕೃತಿಕ ಮಗ್ಗಲುಗಳನ್ನು ಪರಿಚಯಿಸಲು ಸಹಾಯಕವಾಗುತ್ತದೆ. ಕಾದಂಬರಿಕಾರರು ಕಾದಂಬರಿಗಳಲ್ಲಿ ಮುಸ್ಲಿಂ ಪಾತ್ರಗಳು ಒಂದು ಪ್ರಸಂಗದಲ್ಲಿ ಬಂದು ಮರೆಯಾಗುವಂತೆ ಮಾಡಿದ್ದಾರೆ. ಯಾಕೆಂದರೆ, ದಲಿತರು ಹಾಗೂ ಮುಸ್ಲಿಂರು ಮೇಲುಜಾತಿಗಳ ಅಡಿಯಲ್ಲಿ ಅಸ್ಪೃಶ್ಯರಾಗಿದ್ದಾರೆ. ಹೀಗಾಗಿ ಈ ದಲಿತರ ಹಾಗೂ ಮುಸ್ಲಿಂರ ಸಾಮರಸ್ಯ ಬಾಂಧವ್ಯವನ್ನು ಗಟ್ಟಿಗೊಳಿಸಲು ಪ್ರಯತ್ನಿಸಿರಬೇಕು. ದಲಿತರು ಮಾನವ ಸಮಾನತೆಗಾಗಿ ಹಂಬಲಿಸುವುದರ ಸಂಕೇತವಾಗಿಯೂ, ಇಂಥ ಪಾತ್ರಗಳು ಕಾಣಿಸಿಕೊಳ್ಳುತ್ತವೆ.

ದಲಿತ ಬಂಡಾಯ ಕಾದಂಬರಿಗಳಲ್ಲಿ ಕಾದಂಬರಿಕಾರರು ವಸ್ತುವಿನ ದೃಷ್ಟಿಯಿಂದ ಓದುಗರಿಗೆ ಹೆಚ್ಚು ಪರಿಣಾಮವನ್ನುಂಟು ಮಾಡಲು ತಾವೇ ನಿರೂಪಕರಾಗಿ ಕಥೆಯನ್ನು ವಿವರಿಸುವ ಸಂದರ್ಭದಲ್ಲಿ ಅಲ್ಲಲ್ಲಿ ಇಂಗ್ಲೀಷ್ ಸಂಸ್ಕೃತ ಪದಗಳನ್ನು ಬಳಸಿದ್ದಾರೆ. ಈ ಪದಗಳ ಬಳಕೆ ಹೆಚ್ಚಾಗಿ ದೇವನೂರು ಮಹದೇವರ 'ಕುಸುಮ ಬಾಲೆ', ಮಾಲಗತ್ತಿಯವರ 'ಕಾರ್ಯ,' ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ' ಬರಗೂರು ರಾಮಚಂದ್ರಪ್ಪನ 'ಸೂರ್ಯ' ಕಾದಂಬರಿಗಳಲ್ಲಿ ಕಂಡಬರುತ್ತವೆ.

"ಈ ಕುಂತ ಯಮ್ಮಗಳ ಸಾಲುಗ ಆ ಒಂದು ಚಂದದ ರನ್ನಿಂಗು ಕಂಡು ಬಂದೂ..."

"ನಮ್ ರೇಟು ಮೂರ್ ಸಾವರಕಣಯ್ಯ"[೪೫]

"ಆಮ್ಯಾಕ ಅಲ್ಲಿ ಆ ಜನ್ನೊ ಪೋಜು ನೋಡಕ್ಕಿಂತ ಹೆಚ್ಗ ನಿಂತಿರೋದು"[೪೬]

"ಪೆಟ್ರೋಲ್ ಜೊಲ್ಲ ಸುರಸ್ತಾ ಇಸ್ಟಾರ್ಟ್ ಆದನು"[೪೭]

ದಿಲ್ದಾರನಾದ ಕಿಟ್ಟಯ್ಯನು ಸೈಕಲ್ಲ ಥಳಗುಟುಸ್ತ ಕೇರಿ ತುದಿ ತಲುಪಿ, ಕೇರ್ಗ ಕಾಲಿಟ್ಯಾಗ ಮೊದುಲ್ಗ ಸಿಕ್ಕೋ ಜೋಪ್ಡಿ ಮುಂದಾಗ ರೈಟ್ ಎಬೌಟರ್ನಾದನು"[೪೮]

"ಮಗನೆ ಅದು ನೀರ ದಾಹವಲ್ಲ; ನೆತ್ತರು ಹೀರುವ ದಾಹ; ಧರೆಯ ಮೇಗಲ ಅರಸು ಕೋಟೆಗಳ ಎದೆಯಾದ ನೆತ್ತರು ಹೀರುವ ದಾಹ"[೫೦]

"ಆ ರೀತಿಯಾಗಿ ಅದನು ಬರುವುದು ಕಂಡು ಬೆಡ್ ರೂಂ ಬಾಗುಲಗ ಅಡ್ಡವಾಗಿ ನಿಂತಿದ್ದ ಅರಸಪ್ಪ ರಾಜನ ಬಾಡಿಗಾಡ್ ಭೂಪಯ್ಯನಿಗೆ ಕಿಂಚಿತ್ತು ಜೀವ ಅಳ್ಳಾಡಿತು."[೫೧]

"ಹೋಗುವಾಗ್ಲೂ ಸಾವು ಅವನ ಫಾಲೋ ಮಾಡ್ದಂತಾಗಿ ತಾನಿಯ ಮರೆಸಲು ಯತ್ನಿಸೂತ...."[೫೨]

"ಮಂಗಿ ಮಂಗಿ ಮಂಚಕೆಸ್ಪು ಪಾದವು ಅಂದ್ರ ಆ ಚಿನಾಲಿಯ ಮೂರು ಮತ್ತೊಂದು ಕನ್ನಿಕ ಅತ್ತಮ್ಮ ಅಂದ್ಲಂತ"[೫೩]

"ಆ ಪೋಸ್ಟಿನ ಮುರುಮಗನು ಒಂದು ಲೆಟರನು ತಂದು ಕೊಟ್ಟನು"[೫೪]

"ಪಸ್ಟ್ ಕ್ಲಾಸು ಕಣೆಯಯ್ಯ"[೫೫]

"ಬಂದೂಕದ ಬಗ್ಗೆ ಯಾವ ಅನುಭವವೂ ಕಾಡಗೆ ಇರಲಿಲ್ಲವಾದ್ದರಿಂದ ಅವುಗಳನ್ನು ಕಿಲೀನಾಗಿಡುವಂತೆ ತೊದಲನಿಗೆ ಹೇಳಿದ"[೫೬]

ಮೊದಲು ಜಾತ್ರೇ ಬರುವ ಯಾತ್ರಾರ್ಥಿಗಳು ಈ ರೂಲನ್ನು ನಿಯತ್ತಿನಿಂದ ಪಾಲಿಡಬೇಕು"[೫೭]

ದಲಿತ ಕಾದಂಬರಿಗಳಲ್ಲಿ ಈ ವೈವಿದ್ಯತೆಯ ಇಂಗ್ಲೀಷ್ ಸಂಸ್ಕೃತ ಭಾಷೆಯನ್ನು ಒಳಗೊಂಡಿದ್ದರೆ, ಬಂಡಾಯ ಕಾದಂಬರಿಗಳು ತಾವು ನೆಲಸಿದ ಆಯಾ ಪ್ರಾದೇಶಿಕ ಭಾಷೆಯು ಅವರ ಕಾದಂಬರಿಯಲ್ಲಿ ಅವರಿಗೆ ಗೊತ್ತಿಲ್ಲದಂತೆಯೇ ಮಿಳಿತಗೊಂಡುಬಿಡುತ್ತದೆ. ಕುಂ.ವೀರಭದ್ರಪ್ಪನವರು 'ಕಪ್ಪು' ಕಾದಂಬರಿಯಲ್ಲಿ ಬಳ್ಳಾರಿ ಪ್ರಾಂತ್ಯದ ಸುತ್ತಮುತ್ತಲಿನ ಪ್ರಾದೇಶಿಕ ಭಾಷೆ ಮೈಗೂಡಿಸಿಕೊಂಡಿದ್ದರೂ, ನೆರೆ ರಾಜ್ಯವಾದ ಆಂಧ್ರದ ಭಾಷೆಯೂ ಕಾದಂಬರಿಯಲ್ಲಿ ಬಳಕೆಗೊಂಡಿದೆ. ಜಂಬಣ್ಣ ಅಮರ ಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ'ಯಲ್ಲಿ ಹಾಗೂ ಬಿ.ಟಿ.ಲಲಿತಾನಾಯ್ಕರ 'ಗತಿ' ಕಾದಂಬರಿಯೂ ರಾಯಚೂರು ಪ್ರಾಂತ್ಯದ ಭಾಷೆ ಪ್ರಮುಖವಾಗಿ ಬಳಕೆಗೊಂಡಿದ್ದರೂ ಅಲ್ಲಲ್ಲಿ ಆಂಧ್ರ ಶೈಲಿಯ ಪದಗಳು ಬಳಕೆಗೊಂಡಿವೆ. ಹಾಗಾಗಿ ಇಂತಹ ಪದಗಳ ಬಳಕೆಯಿಂದ ಆ ಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿಯ ಪ್ರಭಾವಗಳೂ ಕಾದಂಬರಿಗಳ ಮೂಲಕ ಗೋಚರವಾಗುತ್ತದೆ. ನಿದರ್ಶನಕ್ಕಾಗಿ ಇಂಥ ಪದಗಳಿಂದ ಮಿಶ್ರಣಗೊಂಡ ವಾಕ್ಯಗಳು ಹೀಗಿವೆ.

"...ಹೊಲೇರ ಮಂದ್ಯಾಗ ಬೇಡಿ ಕುಕ್ಕ ಕೆಲ್ಸ ಯಾಕ ಮಾಡಿದಿ..."[೫೮]

"ಘುಂಡುಸಾಗಿದ್ರೆ ಉಲಿ ಘುಡ್ಡದ ಥಾಂಡಥಾಕ ಭಾರೋ ಘೋಡ"[೫೯]

"ಗೌಡನು ಸರ್ಟಾ ಬಿಂದಿಗೆಯನ್ನು ರವ್ವಸ್ಟು ರವ್ವಸ್ಟು ಖಾಲಿ ಮಾಡುತ್ತ ಕುರ್ಚಿಮ್ಯಾಲೆ ಕುಂತಿದ್ದಾಗ ಹೆಣದ ವಾಸನೆ ಹೊತ್ತ ಹೊಗೆ ಅಲೆ ಅಲೆಯಾಗಿ ಮಾಳಿಗೆ ಮ್ಯಾಲೆ ತೇಲಿ ಹೋಗತೊಡಗಿ."[೬೦]

"ಅರೆರೆ ಅಮ್ಮಾಸ ಎಲ್ಲಿ ಹೋಗಿದ್ದೊ ಮಾದರ್ ಜೋತ್, ನಿನ್ದು ಮಾಲು ಯಾಕ್ಲ ಈಗೀಗ ಕಾಣ್ತಿಲ್ಲಾ ಬೋಸುಡಿಕೆ. ಬಾರೆಯವರ್ಗೆ ಬಿಕರಿ ಮಾಡ್ತ ನಮಕ್ ಹರಾಮ್‌ಗಿರಿ ಮಾಡ್ತಿದ್ದಿಯೇನ್ಲೆ ನಿನೌನ ಬೋಸುಡಿಕೇಯ. ನಮ್ಮಕೆ ಗೊತ್ತಾಗಲ್ಲ ಅಂದ್ಕಡಿದ್ದಿಯೇನ್ಲೆ ನಿನ್ನಕ್ಕನ್ ? ಈಗ ಅಡ್ವಾನ್ಸ್ ದುಡ್ನ ಮಡ್ಗು ಬುಟ್ಕ ಮುಂದ್ಕ ಇಸ್ಪೈಫ್ ಇಡು"[೬೧]

ದಲಿತ ಬಂಡಾಯ ಕಾದಂಬರಿಕಾರರು ಕಥೆಯ ನಿರೂಪಣೆಯಲ್ಲಿ ಭಾಷೆಯನ್ನು ಜಾನಪದ ಭಾಷೆಯಲ್ಲಿ ಗದ್ಯವನ್ನು ಕಾವ್ಯಮಯವಾಗಿ ಬರೆಯುತ್ತಾರೆ.

"ನಿನ್ನ ಮರ್ಯಾದೆಲ್ಲಾ ದೈವದ ಮರ್ಯಾದಿ
ಈಗ ನಿನ್ನ ಕೆಲ್ಸ ಅಲ್ಲಿದು, ದೈವದ ಕೆಲ್ಸ
ಮಾತ ಆಗ್ಯೆದ ಅಂದ ಮ್ಯಾಲಿ ಅದ್ಹಂಗ ನಡಿಬೇಕು"[೬೨]

ಇಲ್ಲಿ ಅರವಿಂದ ಮಾಲಗತ್ತಿಯವರು ಜಾನಪದ ಧಾಟಿಯ ತ್ರಿಪದಿಯಂತೆ ಭಾಸವಾಗುತ್ತದೆ. ಇಂಥ ನಿದರ್ಶನಗಳು ಕಾದಂಬರಿಯ ಉದ್ದಕ್ಕೂ ಬಳಕೆಗೊಂಡಿದೆ. ಉತ್ತರ ಕರ್ನಾಟಕದ ದಲಿತರ ಭಾಷೆಯ ಬಳಕೆಯಿಂದಾಗಿ ಕೃತಿಯ ಗಾಂಭೀರ್ಯ ಇನ್ನಿಲ್ಲದಂತೆ ಹೆಚ್ಚಿದೆ. ದೇವನೂರರ ಕುಸುಮ ಬಾಲೆಯಲ್ಲಿ ಕತೆಯನ್ನು ಪದ್ಯರೂಪದಲ್ಲಿ ಹೇಳುತ್ತಾರೆ.

"ಯಾಡನ ತಲ್ಪಭೂಮಿಕ-ಮ್ಯಾಲ ಇಟ್ಟವಳಾಗಿ
ಎದ್ದು ಅಕ್ಕಮಾದೇವಮ್ಮಾನು ನಡೆದವಳಾಗಿ ಬಂದಳು
ಆ ಕಣ್ಣೀರಾ ತುಂಬಿದ ಕೆರೆಯ ಕರೆಗ, ಸರಣು
ಆ ಕೆರೆಗೆ ಮೂರು ಸಲ ಮಾಡಿದಳು, ಕಣ್ಣುಗ
ಆ ಕೆರೆಯ ನೀರ ಮೂರು ಸಲ ಒತ್ತಿಕೊಂಡಳು, ಪ್ರಾತಿಸುತ
ಆ ಮೂರು ಬೇಗಳ ನೀರಾ ಕೂಡ್ವಾಳು
ಆ ಸೆರಗಿನ ತುದಿಯಾ ನೀರಿಗದ್ದಿದಳೂ
ಆ ನೀರೂ ಕುಡುದಾ ಸೆರುಗಾ ತುದಿಯೂ ತನ್ನೇಡೂ ಕೈಲೂ ಹಿಡಿದು

ಆ ಯಾಡನಾ ಬಾಯಾ ಆ ಹಕ್ಕಿಯಾ ಬಾಯ ತಂದೂ ಬಿಡಿಸೂತ ಕುಂತೂ

ಆ ನೀರು ಕುಡುದಾ ತುದೀ ಸೆರುಗಾ ನೀರ ತೊಟ್ಟಿಕ್ಕಿಸುತ್ತಿರಲೂ....”[೬೩]

ಇಂಥ ಕಾವ್ಯಮಯ ಭಾಷೆಯನ್ನು ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿಯೂ ಬಳಕೆಗೊಂಡಿದೆ. ಮುಳ್ಳೂರು ಅವರು ಹೊಲಾರ ಸಂಗಯ್ಯ ಹಾಗೂ ಅಗಸರ ಕೋಮಿಗೆ ಸೇರಿದ ಮಾಳುಗಮ್ಮರ ಪ್ರೇಮ ಆ ರಾಕ್ಷಸಿಯ ದುರಾಸೆಯಿಂದ ನಾಶಹೊಂದಿ, ರಾಕ್ಷಸಿಯು ಸಂಗಯ್ಯನನ್ನು ನೆನೆಯುವ ಸಂದರ್ಭವನ್ನು ಕಾವ್ಯದ ಲಯದಲ್ಲಿ ನಿರೂಪಿಸಿದ್ದಾರೆ.

“ಆ ರಕುತವು ಗಂಗಾಜಲವಾಗಿ ಹರಿಯಿತಲ್ಲಾ!

ಆ ರಕುತವು ಸಾಗರವಾಗಿ ಹಬ್ಬಿತಲ್ಲಾ!

ಆ ರಕುತವು ಪ್ರೀತಿಯ ಬರಾವ ಬರೆಯಿತಲ್ಲಾ!

ಆ ರಕುತವು ಭೂಲೋಕದ ಸಂಪತ್ತಾಗಿ

ಆ ರಕುತವು ಜೀವಗಂಗೆಯಾಗಿ

ಆ ರಕುತವು ದೇವಮಾನವರ

ಕ್ರೌರ್ಯದ ಪತಾಕೆಯಾಯಿತಲ್ಲಾ

ಆ ರಕುತವು ವಸಂತ ಋತುವಿನ

ಲಾವಣ್ಯಕ್ಕೆ ಜೀವರಸವ ತುಂಬಿತಲ್ಲಾ”[೬೪]

ಇಂಥ ಕಾವ್ಯಮಯವಾಗಿರುವ ಭಾಷೆ ಕಾದಂಬರಿಯುದ್ದಕ್ಕೂ ಉಲ್ಲೇಖಿತಗೊಂಡಿವೆ. 'ಆ ಪೂರ್ವಿಕರ ಪೂರ್ವಕಾಲದಿಂದಲೂ ನಡೆದು ಬಂದಿರಾ ಈ ಜೀವನ ಕ್ರಮದಲ್ಲಿ ಜಾತ್ರಾ ಹಿಂದಲ ಆ ಪುರಾತನ ಕತಾವು ಈ ನೆಲದ ಬದುಕಿನ ಜೊತಲಿ ಕರುಳಕ ಬಳ್ಳಿ ಸಂಬಂಧಗಳ ಇರಿಸಿಕೊಂಡಿದೆ. ಆ ಪುರಾತನ ಕತಾವು ಈ ಇಲ್ಲುನ ಪೂರ್ವಿಕರ ತಲೆಯಲ್ಲಿ ಹುಟ್ಟಿ, ಈ ನೆಲಕು ನೆಲವಾಗಿರುತ, ಆಕಾಶದಗಲಕ್ಕೂ ತುಂಬಿ ಹಬ್ಬುತ್ತ...' ಈ ತರಹದ ಭಾಷೆ ಅತ್ತ ಪೂರ್ತಿ ಜಾನಪದವೂ ಅಲ್ಲ, ಇತ್ತ ಪೂರ್ತಿ ಶಿಷ್ಟವೂ ಅಲ್ಲ. ಏನಿದ್ದರೂ ಈ ಮೂಲಕ ದಲಿತರು ತಮ್ಮದೇ ಆದಂಥ ಒಂದು ಹೊಸ ಭಾಷೆ-ತಂತ್ರಗಳಿಗಾಗಿ ತಡಕಾಟ ನಡೆಸಿದ್ದಂತೂ ನಿಜ. ಈ ಕಾದಂಬರಿಯಲ್ಲಿ ಗದ್ಯ-ಪದ್ಯಗಳೆರಡನ್ನು ಬಳಸುವ ಹೊಸ ಪ್ರಯೋಗ ಮಾಡಿದ್ದಾರೆ. ಲಾವಣಿಯ ಧಾಟಿಯಲ್ಲಿ ಸಾಗುವ ಹಾಡುಗಳು ಕಥೆಯನ್ನು ಆಕರ್ಷಕವಾಗಿಸುವುದು ಮಾತ್ರವಲ್ಲದೆ, ಗಂಭೀರವಾಗಿಸುವುದೂ ಉಂಟು. ಕಥೆಯ ಭಾವೋತ್ಕಟ ಸಂದರ್ಭದಲ್ಲಿ

ಹಾಡು ಬಳಕೆಯಾದಾಗ ವಸ್ತು ಅದ್ಭುತವಾದ ರೀತಿಯಲ್ಲಿ ಬಿಚ್ಚಿಕೊಳ್ಳುವುದೂ ಉಂಟು. ಮಿದುಳನ್ನು ರಾಜನಿಗೆ ದಾನ ಮಾಡುವ ಕ್ರಿಯೆಯು ಮಿದುಳನ್ನು ಒತ್ತೆ ಇಡುವ ಆಧುನಿಕರನ್ನು ಸೊಗಸಾಗಿ ವಿಡಂಬಿಸುತ್ತದೆ.

ಮೊಳ್ಳೂರು ನಾಗರಾಜರ ಈ ಕಾದಂಬರಿಯಲ್ಲಿ ಗಮನ ಸೆಳೆಯುವುದೆಂದರೆ, ವಾಕ್ಯಗಳ ರಚನೆ. ಓದುಗನಿಗೆ ಈ ವಾಕ್ಯಗಳು ಕೊನೆಗೊಂಡಂತೆ ಭಾಸವಾಗುವುದಿಲ್ಲ. ವಾಕ್ಯದ ಇಂಥ ಸ್ವರೂಪವು ಕಾದಂಬರಿಯುದ್ದಕ್ಕೂ ಬಳಕೆಗೊಂಡಿವೆ. ನಿದರ್ಶನಕ್ಕಾಗಿ ವರುಸವು ಒಂದಾಯ್ತು, ಎರಡಾಯ್ತು, ಮೂರಾಯ್ತು, ಕಾಲಕ್ರಮದಲ್ಲಿ ಜನರು ರಾಜಗತಪುತ ಒತ್ತಿದ್ರು; ಕೈ ಮುಗೀತಿದ್ರು; ಅಡ್ಡ ಬೀಳತಿದ್ರು, ಕೊನೆಗಾಲಕ ತಲೆಯ ಕಟುಕರಿಗೊಪ್ಪಿ ಈ ಲೋಕದ ಬದುಕಿಗೆ ವಿದಾಯವ ಹೇಳುತಿದ್ರು. ಕಾಲವೂ ಚಲಿಸಿತು; ನರಮೇಧವೂ ಬೆಳಿತು. ಬೆಳೆಯುವ ಕಾಲದ ಜೊತೆಲಿ ರಾಕಾಸವ್ವನ ಸಾಕು ಮಗನಾದ ಸಿಂಗಾರುವೂ ಬೆಳೆದನು"[೬೫]

"ಆ ಬಸುರಾಜು ತಲಾವಳ್ಗ ಬಿಸಿಲುಗುದುರದ ಚಾಲೂಚಲಾಕು ಮುಗ್ದು ಆ ಮೆದುಳು ಗಿರಿಗಿರಾ ಸುತ್ತುತ್ತಾ ಅದೇ ಒಂದು ಲೋಕ್ವ ಉಂಟು ಮಾಡ್ತಲ್ಲಾ"[೬೬]

"ಕೊನ್ಗೂ ಅಕ್ಸರ ಬಲ್ಲ ಒಂದು ಗುಂಪು ಅವನ ಕಣ್ಣಕಾಣ್ಸಿ ಅದು ಸಂತೋಷ್ವಾಗಿ ಅವನು ಗಣೇಶ ಬೀಡಿ ಹಚ್ಚಿ, ಗಾಳೀಲಿ ಉಸುರು ಬುಟ್ಟು ಹಗುರಾದನು. ಆ ಅಕ್ಸರವಂತರು ತಮ್ಮ ತಲನೀಗ ಕೆಡುಸ್ಕೊಂಡು ತಾವು ಕಲುತ ಆಕ್ಸರದ ಜೊತಲ್ಲಿ ಸರ್ಕಸ್ ಮಾಡಿ ಕಂಪ್ಲೇಂಟು ನೀಗ ತಯಾರಿಸಿದರು."[೬೭]

ದೇವನೂರು ಮಹಾದೇವ ಅವರ ವಾಕ್ಯ ರಚನೆ, ಪ್ಯಾರಾರಚನೆಗಳು ನಮಗೆ ಆಶ್ಚರ್ಯಕರ ರೀತಿಯಲ್ಲಿ ನಮ್ಮ ಗಮನ ಸೆಳೆಯುತ್ತವೆ. ಇವು ಕನ್ನಡ ಭಾಷೆಯಲ್ಲಿ ನಮಗೆ ಪರಿಚಯವಿರುವಂತೆ ಕೊನೆಯಾಗುವುದಿಲ್ಲ ಅಥವಾ ನಾವು ನಿರೀಕ್ಷೆ ಮಾಡದ ರೀತಿಯಲ್ಲಿ ಕೊನೆಯಾಗಿ ವಾಕ್ಯಗಳು ಮತ್ತು ಪ್ಯಾರಾಗಳು ಅರ್ಧಕ್ಕೆ ನಿಂತಿವೆ ಎನಿಸುತ್ತದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೊಸತೆನಿಸಿರುವ ಈ ಭಾಷೆಯನ್ನು ಕಾದಂಬರಿಕಾರರು ಅತ್ಯಂತ ಸೃಜನಾತ್ಮಕವಾಗಿ ಬಳಸಿಕೊಂಡಿದ್ದಾರೆ.

"......ಹೀಗೆ ಮಾಗಳು ಮೊಕ್ವ ಮುಚ್ಕಾಂಡು ಸೊರಗುಟ್ತ ಅವ್ವ ಹಿಡುತ ಬುಡದಿರಲು ಹೀಗೆ"[೬೮]

"ತುಂಬಾಗಲು ಅಲ್ಲುಗ ಉರಿಯೊ ಕಯ್ಯೆಣ್ಣೆ ಸೊಳ್ಳೆನು ಅದುನ ತನ್ನೇಡೂ ಕಯ್ಯಲೂ ಹಿಡಿದೂ ಒಂದೇ ದುಡದಲ್ಲಿ ಅದನು ಆ ತಾಂಬಟ್ಟಲು ತುಂಬಿದ್ದ ಆಹಾರದ ಮ್ಯಾಲ ಎಲೆ ಅಡಕಾವ ಇಟ್ಟೂ ಮ್ಯಾಲ ಈ ಉರಿಯೋ ಸೊಳ್ಳನು ಇಟ್ಟೊ...."[೬೯]

ಆಗಲೀಗ, ಅಕ್ಕಮಾದೇವಮ್ಮಗ, ಮದೂಗ ಬಂದಂಥ ತನ್ನ ಮಗನೀಗ ತನ್ನ ಹಾಳಾದ ಕಯ್ಗಳಿಂದಾ ಕಣ್ಣುಗ್ಗಾಣದ ಹೊಡದುದುಕಾಗಿ ದುಕ್ಕಾವು ಉಕ್ತಾ ಅಯ್ಯಯ್ಯೋ ನನಕಂದಾ... ನಿಂಗ ಮೊಕಮೋರ ಮಯ್ಯಿ ಅಂತ ನೋಡ್ದೀಯಾ ಹೊಡೀತಲ್ಲಪ್ಪಾ ಈ ಹಾಳದ ಕೈಯ್ಗಳೂ.... ಇವು ಎಂದಪ್ಪಾ ಸೇದೋಗದೂ .... ಇವೂ..." ಅಂತಳೂತ.[೨೦]

ಕರಿಯಯ್ಯ ಮಾತನಾಡುವ ಒಂದು ಉದ್ದನೆಯ ಪ್ಯಾರ ಹೀಗೆ ಕೊನೆಯಾಗುತ್ತದೆ;

ನಮ್ ಜಾತಿ ಬುಡ್ನತ್ತವ್ಕ ಬೇಕಾಗಿದ್ದೂ ಆದೀಯ, ಆ ಉತ್ತಮರು ಕಾಲಲ್ಲಿ ತೋರ್ಸಿದ್ದ ಇವ್ರು ಕೈಲಿ ಮಾಡ್ಕಳರು. ಇರಾರು..."[೨೧]

ಇನ್ನೊಂದು ಪ್ಯಾರಾ ಮಧ್ಯದಲ್ಲಿ ಬರುವ ವಾಕ್ಯ ಹೀಗಿದೆ;

".....ನಾನು ಹೇಳ್ತಾ ಇದ್ದುದು ಏನಪ್ಪ ಆಂದ್ರೆ... ಅಂದಂಥ ಡಾಕ್ಟರುಗ..... ಉಚ್ಚಾರ ಮಾಡ್ದಾವಗ ಹೊರಳುದ ನಾಲುಗ ತುದಿ ಕತ್ತರ್ಸಿ ರಕ್ತ ಚಿಲುಗುಟ್ಟಾ ನರಳ್ತಾ...."[೨೨]

ಹೀಗೆ ಕಾದಂಬರಿಯ ತುಂಬಾ ಹಲವಾರು ಉದಾಹರಣೆಗಳು ಸಿಕ್ಕುತ್ತವೆ. ಈ ರೀತಿಯ ವಿಶಿಷ್ಟ ವಾಕ್ಯ ರಚನೆ ಮತ್ತು ಭಾಷೆಯ ಸತ್ವ ಎಲ್ಲವನ್ನೂ ಸಮರ್ಪಕವಾಗಿ ಜಾನಪದದ ಧಾಟಿಗೆ ಅಳವಡಿಸಿಕೊಂಡು ದುಡಿಸಿಕೊಂಡಿರುವ ರೀತಿಯೂ ಭಾಷೆ ಅರ್ಥಗರ್ಭಿತವಾಗಿ ತಾನೇ ಕಾವ್ಯಮಯವಾಗಿದೆ. ಭಾಷೆಯ ಈ ಹೊಸ ಪ್ರಯೋಗ ದಲಿತ ಸಮುದಾಯದ ಹೊಸ ಸಂವೇದನೆಯನ್ನು ಸೂಚಿಸುತ್ತಾ ಅವರ ಧ್ವನಿಯನ್ನು ನಿರ್ಧರಿಸುತ್ತದೆ.

ದಲಿತ-ಬಂಡಾಯ ಕಾದಂಬರಿಕಾರರು ವಿಭಿನ್ನ ಗ್ರಾಮೀಣ ಪರಿಸರದಿಂದ ಬಂದವರಾಗಿದ್ದರಿಂದ, ಅವರ ಕಾದಂಬರಿಗಳಲ್ಲಿ ಭಾಷೆಯ ಬಳಕೆ ಭಿನ್ನವೆನಿಸುತ್ತವೆ. ಹೀಗೆ ಭಾಷೆಯ ಬಳಕೆಯಾದಾಗ ಕೆಲವು ಕಾದಂಬರಿಗಳಲ್ಲಿ ಅಲಂಕಾರಿಕ ಭಾಷೆ ಪ್ರಯೋಗಗೊಂಡಿವೆ. ಇಂಥ ಭಾಷೆಯು ವಸ್ತುವಿನ, ಘಟನೆಯನ್ನು ವಿವರಿಸುವಾಗ ಹೆಚ್ಚು ಅರ್ಥವನ್ನು ಕಟ್ಟಿಕೊಡುತ್ತದೆ. ಅವುಗಳ ಪ್ರಯೋಗಗಳನ್ನು ಕಾದಂಬರಿಗಳ ಮೂಲಕ ಹೀಗೆ ಉದಾಹರಿಸಬಹುದು.

ಬರಗೂರು ರಾಮಚಂದ್ರಪ್ಪ ಅವರ 'ಸೂರ್ಯ' ಕಾದಂಬರಿಯಲ್ಲಿ

"ಜಮೀನ್ದಾರ ಸೀತಕ್ಕನ ಮುಖಾನ ಸರಿಯಾಗಿ ನೋಡೋಕಾಗದೆ, ತನ್ನ ಮುಖದಲ್ಲಿ ಸುರೀತಿರೋ ಬೆವರನ್ನು ತೋರ್ಸೊಕಾಗದೇ ಸಿಟ್ಟಿನ ಸಿಂಹದಂತೆ ಸೊಳ್ಳೆ ಅರಳಸಿ ಅಸಹಾಯಕತೇಲಿ ಅಲ್ಲಿಂದ ಕಾಲು ಕಿತ್ತ"[೨೩]

"ಬಡತನ ಕಟ್ಟಿದ ಕನಸಿನ ಗೂಡಿಗೆ ಕೆಂಡದ ಬಾಣ ಬಿದ್ದು, ಬದುಕಲಾರದೆ, ಸಾಯಲಾರದೆ, ನೀರಿಗೆ ಬಿದ್ದ ಸುಣ್ಣಕಲ್ಲಂತೆ ಕುದಿಯೊ ಗತಿ ಬಂತಲ್ಲ ಅಂತ ಬತ್ತಿದ ಕಣ್ಣಲ್ಲಿ ಅತ್ತಳು...."[೭೪]

"ಕರಿಯ ರೆಕ್ಕೆ ಕಿತ್ತ ಮೆಟ್ಟಿನ ಸಮೇತ ರೆಕ್ಕೆ ಪುಕ್ಕ ಬಂದೋನಂತೆ ರಪ ರಪ ಹೊರಟ"[೭೫]

"ಚಾಮ ಮಾತ್ರ ತಮ್ಮನ ಪಾಲಿಗೆ ಬರಬೇಕಾದುದನ್ನೆಲ್ಲಾ ಒಪ್ಪಿಸಿ, ಭಂಡ ಧೈರ್ಯದ ರಬಸದಲ್ಲಿ ಹೇಲು ತುಳಿದು, ಆ ಮೇಲೆ ಅನಿವಾರ್ಯವಾಗಿ ಕಾಲು ತೊಳೆದುಕೊಂಡವನಂತೆ ಮನೆಗೆ ನಡೆದ"[೭೬]

"ಸುಮಾರು ಹತ್ತಿಪ್ಪತ್ತು ನಾಯಿಗಳು ತಮಗೇನೋ ಹೊಸ ನೌಕರಿ ದೊರೆತಂತೆ ಭಾವಿಸಿಕೊಂಡು "ಬೌ ಬೌವೋs" ಎಂದು ಅರಚುತ್ತ ತಮ್ಮ ಕೈಲಾದ ಸೇವೆ ಮಾಡ ತೊಡಗಿದ್ದವು."[೭೭]

ಹೀಗೆ ಅನೇಕ ಉದಾಹರಣೆಗಳು ವಿವಿಧ ಕಾದಂಬರಿಗಳಲ್ಲಿ ಸಿಗುತ್ತವೆ. ಯಾವುದೇ ಬರಹಗಾರನಿಗೆ ಭಾಷೆಯು ಒಂದು ಮಾಧ್ಯಮ ಅಷ್ಟೇ. ಭಾವನೆಗಳು ಮುಪ್ಪರಿಗೊಂಡು ಅನುಭವದ ಪರಿಪಾಕದ ಮೂಲಕ ಅಭಿವ್ಯಕ್ತಿಸುವಾಗ ಆಯಾ ಪ್ರಾದೇಶಿಕ ನೆಲೆಯಿಂದ ಬಂದವರು ಸಹಜವಾಗಿ ಆ ಪರಿಸರದ ಭಾಷೆಯನ್ನು ಬಳಸುತ್ತಾರೆ. ಇದು ಸತ್ವಯುತವಾದ ಪ್ರಾದೇಶಿಕ ಸಂಸ್ಕೃತಿಯ ಅನಾವರಣಕ್ಕೆ ಸಿದ್ಧ ರೂಪಿಕೆಯನ್ನು ಒದಗಿಸಿಕೊಡುತ್ತದೆ. ಜೊತೆಗೆ ಭೌಗೋಳಿಕ ಉಪಭಾಷೆಗಳ ಮೂಲಕ ಒಂದೊಮ್ಮೆ ಓದುಗರಿಗೆ ಸಂವಹನದ ತೊಂದರೆಯೂ ಆಗುವ ಸಾಧ್ಯತೆಗಳಿವೆ. ದೇವನೂರು ಮಹಾದೇವರು ಬಳಸಿದ ಚಾಮರಾಜನಗರದ ಉಪಭಾಷೆಯು ಇಡೀ ಕನ್ನಡ ಜನತೆಗೆ ಅರ್ಥವಾಗದಿರಬಹುದು. ಕುಂ.ವೀ.ಯವರು ಬಳಸುವ ಬಳ್ಳಾರಿಯ ಉಪಬಾಷಾ ಮಾದರಿಯು ಕೂಡ ಇಂತಹ ಸಮಸ್ಯೆಯನ್ನೂ ಒಡ್ಡಬಹುದು. ಆದರೆ ಬರೆಯಬಾರದೆಂಬ ಯಾವ ನಿರ್ಬಂಧ ಇದಕ್ಕಿಲ್ಲ. ಬಳಸಿರುವ ಭಾಷೆಯೊಂದಿಗೆ ಸಂಬಂಧಿಸುವ ಹಾಗೆ ಗ್ರಾಂಥಿಕ ಭಾಷೆಯ ಮೂಲಕ ಕಥನವನ್ನೂ ವಿವರಿಸುವ ಮಾದರಿಯಿರುವುದರಿಂದ ಬಹುಶಃ ಸಂವಹನ ಸುಲಭವಾಗುತ್ತದೆ. ದಲಿತ ಬಂಡಾಯ ಲೇಖಕರು ಆರಿಸಿಕೊಂಡ ಭಾಷಾ ನಿರೂಪಣಾ ಮಾದರಿಯು ಬಹುತೇಕ ಗ್ರಾಂಥಿಕ ಭಾಷೆಯನ್ನೊಳಗೊಂಡು, ಅಲ್ಲಲ್ಲಿ ಕೆಲವು ಪ್ರಾದೇಶಿಕ ಉಪಭಾಷೆಗಳ ಅಬ್ಬರವಿದೆ. ಪಾತ್ರಗಳ ಮುಖೇನ ಮಹಾದೇವರಂಥ ಲೇಖಕರು ಸಮಾಜಕ್ಕೆ ಮುಖಾಮುಖಿಯಾಗಿಸುವ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯ ಕ್ಲಿಷ್ಟತೆಯನ್ನು ಮುಂದಿರಿಸುತ್ತಾರೆ. ಅದೇನಿದ್ದರೂ ಸತ್ವಯುತವಾದ ವಸ್ತುವಿನ ಆಯ್ಕೆಯಿಂದ ರಚನೆಯಾದ ಔಚಿತ್ಯಪೂರ್ಣ ಭಾಷಾ ಮಾಧ್ಯಮದ ಯಾವುದೇ ಕಥನಕ್ಕೆ ಮೌಲ್ಯವಿದೆ. ಇಂಥದೇ ಭಾಷೆಯನ್ನು ಬಳಸಬೇಕೆಂಬ ಯಾವ ಬಂಧನವಿರದೇ ಗ್ರಾಂಥಿಕ ಭಾಷೆಯ ಮರ್ಯಾದೆಯನ್ನು ದಾಟಿ ಹೋಗಿ ನಿಂತರೆ ಅಶ್ಚರ್ಯವೇನಿಲ್ಲ. ಈ ದೃಷ್ಟಿಯಿಂದ ದಲಿತ ಬಂಡಾಯ ಕಾದಂಬರಿಗಳು ಭಾಷಾ ದುಡಿಕೆಯಲ್ಲಿ ಔಚಿತ್ಯ ಪ್ರಜ್ಞೆಯಿಂದ ನಡೆದುಕೊಂಡಿವೆ.

## ತಂತ್ರ

ಪ್ರತಿಯೊಂದು ಕಾದಂಬರಿಯೂ ಒಂದು ಕಥೆಯನ್ನು ಹೇಳಲೇಬೇಕು. ಹಾಗೆ ಕಥೆ ಹೇಳುವಾಗ ಓದುಗನ ಮನಸ್ಸಿಗೆ ಪರಿಣಾಮ ಬೀರುವಂತಾಗಬೇಕು. ಓದುಗನ ಆಲೋಚನೆಗೆ ಎಡೆಮಾಡಿಕೊಡಬೇಕಾದರೆ, ಸರಳವಾದ ಕಥೆಯಷ್ಟೇ ಮುಖ್ಯವಾಗುವುದಿಲ್ಲ. ಬದಲಾಗಿ ಕಥೆಯ ವಸ್ತು, ಭಾಷೆ ಮುಖ್ಯವಾಗುತ್ತದೆ. ವಸ್ತು ಮತ್ತು ಭಾಷೆಯನ್ನು ನಿರ್ದಿಷ್ಟ ಅಂಶಗಳೊಂದಿಗೆ ಜೋಡಿಸಬೇಕಾಗುತ್ತದೆ. ಹೀಗೆ ಸಂಘಟಿಸುವಲ್ಲಿ ತಂತ್ರ ಬಹುಮುಖ್ಯವಾಗುತ್ತದೆ. ತಂತ್ರ ಎಂದರೆ ಸಾಮಾನ್ಯವಾಗಿ ಕಾದಂಬರಿಯ ವಸ್ತುವನ್ನು ಸಂಘಟಿಸುವ ವಿಧಾನ, ಕುತೂಹಲ ಕೆರಳುವಂತೆ ಕತೆ ಹೇಳುವ ರೀತಿ, ಪಾತ್ರಗಳ ಪರಸ್ಪರ ಸಂಬಂಧ ಬೆಳವಣಿಗೆ-ಉದ್ದೇಶಗಳನ್ನು ಚಿತ್ರಿಸುವ ಕೌಶಲ್ಯ, ಘಟನೆಗಳನ್ನು ಆಕರ್ಷಕವಾಗಿ ನಿರೂಪಿಸುವ ಬುದ್ಧಿವಂತಿಕೆ, ಮಾರ್ಕ್‌ಶೋರರ್ ಹೇಳುವಂತೆ, ತಂತ್ರವೆಂದರೆ, ''ಲೇಖಕನ ಸಾಮಾಗ್ರಿಯಾದ ಅನುಭವ ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ. ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾರಗೊಳಿಸಲು, ಅದರ ಅರ್ಥವನ್ನು ಸೂಚಿಸಲು, ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆ ಕಟ್ಟಲು ಇರುವ ಏಕಮಾತ್ರ ಸಾಧನ.''[೨೮]

ಇದರಿಂದಾಗಿ ವಸ್ತುವಿಗೆ ತಕ್ಕ ತಾಂತ್ರಿಕ ಅವಕಾಶಗಳು ಇಲ್ಲದಿದ್ದರೆ, ಅದು ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟುಕೊಡುವುದಿಲ್ಲ. ಹಾಗಾಗಿ ಲೇಖಕ ಕಥೆಯನ್ನು ನಿರೂಪಿಸುವಾಗ ತಂತ್ರವನ್ನು ಬೇರೊಂದು ಉದ್ದೇಶ ಸಾಧನೆಗಾಗಿ ಉಪಯೋಗಿಸುತ್ತಾನೆ. ಇದರಿಂದಾಗಿಯೇ ಓದುಗನಿಗೆ ಕಾದಂಬರಿ ಪ್ರಕಾರ ಬಹುಮುಖ ಆಲೋಚನೆಗೆ ತೊಡಗುವಂತೆ ಮಾಡುತ್ತದೆ.

ದಲಿತ ಬಂಡಾಯ ಕಾದಂಬರಿಗಳು ಕನ್ನಡ ಸಾಹಿತ್ಯದ ಸಾಂಪ್ರದಾಯಿಕ ರೂಪವನ್ನು ಬಿಟ್ಟು ಅದಕ್ಕಿಂತ ಭಿನ್ನವಾದ ಸ್ವರೂಪನ್ನು ಪಡೆದಿರುವಂತೆ ತಂತ್ರದಲ್ಲಿಯೂ ಭಿನ್ನವಾಗಿಸಿಕೊಂಡಿದೆ. ''ಪರಿಸರ, ನಿಸರ್ಗದ ದಟ್ಟವಾದ ವರ್ಣನೆ, ಜಾನಪದ ಶೈಲಿಯ ಅಳವಡಿಕೆ, ಗ್ರಾಮ್ಯ ಭಾಷಾ ಪ್ರಯೋಗ ಇವುಗಳು ಇವೊತ್ತಿನ ಕಾದಂಬರಿಗಳಲ್ಲಿ ಹೊಸ-ಚರ್ಚೆಯನ್ನು ತೆರೆಯುವಷ್ಟು ಶಕ್ತವಾದ ಗುಣಾತ್ಮಕ ಸಂಗತಿಗಳಾಗಿವೆ. ಬಂಡಾಯ ಕಾದಂಬರಿಕಾರರ ಜನಪದ ತಂತ್ರ ಮತ್ತು ಕುಸುಮ ಬಾಲೆಯು ಎತ್ತಿ ಹಿಡಿಯಲಾದ ಸಾಂಪ್ರದಾಯಿಕ ತಂತ್ರದ ಪ್ರಾಚುರ್ಯ ಬಂಡಾಯದಲ್ಲಿ ತಂತ್ರದ ಶೋಧವಾಗಿಲ್ಲ ಎಂಬ ಟೀಕೆಗೆ ಉತ್ತರ ರೂಪವಾಗಿ ಬಂದಿರಬಹುದು.''[೨೯] ದಲಿತ ಬಂಡಾಯ ಕಾದಂಬರಿಗಳಲ್ಲಿ ಮನುಷ್ಯನನ್ನು, ಆತನ ಬದುಕನ್ನು ಕೇಂದ್ರಸ್ಥವಾಗಿರಿಸದೇ ನಿಸರ್ಗದ ಮತ್ತು ಜನಪದ ಬದುಕಿನ ವಿವರಗಳ ಸಂಕೀರ್ತನೆ ಮಾಡುವ ಹೊಸ ತಂತ್ರವಾಗಿದೆ.

ಇಲ್ಲಿಯ ದಲಿತ-ಬಂಡಾಯ ಕಾದಂಬರಿಗಳು ಗ್ರಾಮ ಬದುಕಿನ ಅಂಗವಾದ ಗ್ರಾಮ್ಯ ಭಾಷೆಯನ್ನೇ ತಂತ್ರವಾಗಿ ಬಳಸಿಕೊಂಡಿರುವುದನ್ನ ಗಮನಿಸಬಹುದು. ದೇವನೂರು ಮಹಾದೇವರು 'ಕುಸುಮ ಬಾಲೆ' ಕಾದಂಬರಿಯಲ್ಲಿ ಆಡುಮಾತಿನ ಪರಂಪರೆಯ ತಂತ್ರವನ್ನು ಮೊದಲ ಬಾರಿಗೆ ಅಳವಡಿಸಿಕೊಂಡಿದ್ದಾರೆ. ಆ ಮೂಲಕ ಪಾತ್ರಗಳ ಸೀಮಿತ ಪ್ರಜ್ಞೆ ಮತ್ತು ಆಯಾಮಗಳನ್ನು, ಆದರೆ ಸತ್ವಪೂರ್ಣವಾದ ಸಂಗೀತಮಯ ಭಾಷೆಯಲ್ಲಿ ಹಿಡಿದಿಟ್ಟಿದ್ದಾರೆ. ಈ ಭಾಷೆಯನ್ನು ಸೂಕ್ಷ್ಮವಾಗಿ ಗ್ರಹಿಸಿದರೆ, ಲಯದ ಧಾಟಿ ಕಂಡುಬರುತ್ತದೆ. ಇಂತಹ ಆಧಾರಗಳು ಕಾದಂಬರಿಯಲ್ಲಿ ಸಿಕ್ಕುತ್ತದೆ.

"ಈ ಒಂದು ಕುಂತವಳ ನೋಡಲು ಅವನ ತುಟಿ ಮಿಸ್ಗಳು

ತಮ್ಮಟ ಮುಂದ ಐಕಳು ಕುಣೀವಂತೆ ಕುಣೀತೊಡಗಿದವು"

ತಮಟೆಯ ಬಡಿತದಲ್ಲಿ ಲಯದಲ್ಲಿ, ಮುಂದೆ ಯಾಡ ಹಳ್ಳಿಯ ದನಕರಗಳನ್ನು ಜಾತ್ರೆಯಲ್ಲಿ ಮಾರಿ ಹಣ ತೆಗೆದುಕೊಂಡು ಬಂದಾಗ ಮಾತು ಅಡಗಿದವನಂತೆ

"ಅವ್ವೊ ಅವ್ವೊ ಅಪ್ಪೇ ಅಪ್ಪೇ...." ಎಂದು ಬೊಬ್ಬೆ ಹಾಕುತ್ತಾನೆ. ಮಾರಿ ಕುಣಿತದಲ್ಲಿ ತಮಟೆಯನ್ನು ಕಡ್ಡಿಯಲ್ಲಿ ಉಜ್ಜಿದಾಗ ಹೊರಡುವ ಡರ್ರ ಡರ್ರ ಶಬ್ದಕ್ಕೆ ಇದು ಹತ್ತಿರ ಬರುತ್ತದೆ. ನಂತರ ಯಾಡನಿಗೆ ಅವರವ್ವ ಹೊಡೆಯುವ ವಿವರಣೆಯಲ್ಲಿ "ರಪ್ಪ ರಪ್ಪ ಗಟಸ್ತ" ಎನ್ನುವುದು ತಮಟೆಯ ಬಡಿತದ ಶಬ್ದಕ್ಕೆ ಹೊಂದಿಕೊಳ್ಳುತ್ತದೆ. 

ದೇವನೂರು ಅವರು ಕುಸುಮ ಬಾಲೆಯ ಕಥೆಯನ್ನು ಹೇಳುವಾಗ ಕೊನೆಯ ಘಟನೆಯನ್ನು ಆರಂಭದಲ್ಲಿಯೇ ಹೇಳುತ್ತಾರೆ. ಈ ತರಹದ ಘಟನೆಯನ್ನು ಮನಜರ ಮಾಗಿ ಕಾದಂಬರಿಯಲ್ಲಿಯೂ ಬರುವುದನ್ನು ನೆನಪಿಸಬಹುದು. ಕುಸುಮಬಾಲೆಯ ಆರಂಭದಲ್ಲಿ ನಾಲ್ಕು ಜನ ಜೋತಮ್ಮಗಳು ಊರ ಮುಂದಲು" ಜಗುಲಿಕಲ್ಲ ಮ್ಯಾಲ ಕೂತು 'ಕಷ್ಟ ಸುಖ' ಮಾತನಾಡಿಕೊಳ್ಳುತ್ತಿರುತ್ತಾರೆ. ಸಮಯ ಕಗ್ಗತ್ತಲು' ಆಗಿರುತ್ತದೆ. ಕತ್ತಲೆಗೂ ಕೆಡಕಿಗೂ ಹತ್ತಿರದ ಒಡನಾಟವಿದೆ. ಇರುವ ಮಾತನಾಡುತ್ತಿರುವುದು ಕುಸುಮ ಚನ್ನರ ಬಗ್ಗೆ. ಇವರ ದುರಂತದ ಮುನ್ಸೂಚನೆ ಇಲ್ಲಿದೆ. ನಂತರ ಇವರ ಜೊತೆಗೆ ಐದನೇ ಜೋತಮ್ಮ ಸೇರಿಕೊಳ್ಳುತ್ತಾಳೆ. "ಜಗುಲಿ ಕಲ್ಲಮ್ಯಾಲೆ ಉಸ್ಸೋ ಎಂದು ಕುಂತು ನಿಟ್ಟುಸಿರಾದಳು."[೮೦] 'ಮಾಗಿ' ಕಾದಂಬರಿಯಲ್ಲಿ ಮಾಗವ್ವ ಪಾಂಡವಪುರದ ರೈಲ್ವೇ ಸ್ಟೇಷನ್‌ನಲ್ಲಿ 'ಯವ್ವಣ್ಣಿ' ಎಂದು ನಿಟ್ಟುಸಿರು ಹಾಕುತ್ತಾ ದಾರುಣವಾಗಿ ಬಿದ್ದಿದ್ದಳು. ಎಂಬುದು ನಿಟ್ಟುಸುರಿನ ಕಥೆಯಾಗಿದೆ. ಈ ತರಹದ ಹಿನ್ನೋಟದ ಕಥೆಯಲ್ಲಿ ವೃತ್ತಾಂತ ತಂತ್ರವಾಗಿ ಕಾದಂಬರಿಕಾರರು ಬಳಸಿಕೊಂಡಿದ್ದಾರೆ.

"ಕುಸುಮ ಬಾಲೆ ಆರಂಭವಾಗುವುದು ಜಪಾನಿನ ಖ್ಯಾತ ಸಿನಿಮಾ ನಿರ್ದೇಶಕ ಆಕರ ಕುರೋಸನ 'ರೋಸ್‌ಮನ್' ಚಿತ್ರ ಆರಂಭವಾದಂತೆ ಎಂದು ಎನ್.ಎಸ್ ರಘುನಾಥ ಅವರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರದಲ್ಲಿ ವಿಪರೀತ ಮಳೆ ಬೀಳುತ್ತಿರುತ್ತದೆ. ಸೌದೆ ಒಡೆಯುವವನೊಬ್ಬನು ಕೆಲಸಕ್ಕೆ ಹೋಗಲು ಸಾಧ್ಯವಿಲ್ಲದ ಊರ ಹೊರಗಿನ ಗುಡಿಯಲ್ಲಿ ಆಶ್ರಯ ಪಡೆದು, ಮತ್ತೊಬ್ಬನ ಜೊತೆ ಹಳ್ಳಿಯ ನೈತಿಕ ಬದುಕಿನ ಅಧೋಗತಿಯ ಬಗ್ಗೆ ಮಾತನಾಡುತ್ತಿರುತ್ತಾನೆ. ಕರೋಸವ ಅಲ್ಲಿರದ ಹಿನ್ನೋಟದಲ್ಲಿ ಕಥೆ ಹೇಳುತ್ತಾನೆ."[೮೮]

ಕುಸುಮಬಾಲೆ ಕಾದಂಬರಿಯು ಜಾನಪದ ಕಥೆಯ ಪ್ರಭಾವ ಪಡೆದಿದ್ದರೂ ಮಂಚ ಮತ್ತು ಜೀವಾತ್ಮರ ಸಂಭಾಷಣೆಯ ಮೂಲಕ ಪ್ರಜ್ಞಾಪೂರ್ವ(Flash back) ತಂತ್ರದ ಕಲೆಯ ಸಾರ್ಥಕತೆಯಲ್ಲಿ ಹೆಚ್ಚು ಹೊಸತನವಿದೆ. ಮಂಚ ಹೇಳುವ ಕತೆಯ ಮಿತ್ ರೂಪದಲ್ಲಿ ಆಗಿದ್ದರೂ, ಹಿಂದಿನ ಐತಿಹಾಸಿಕ ಚರಿತ್ರೆಯೊಂದಿಗೆ ವಾಸ್ತವದ ಸ್ಥಿತಿಗತಿಗಳ ವಿವರನೀಡುತ್ತದೆ. ಇದು ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ಇತರ ಕಾದಂಬರಿಗಳಲ್ಲಿ ಗ್ರಹಿಕೆಗೆ ಬರುತ್ತದೆ. ಬರಗೂರು ರಾಮಚಂದ್ರಪ್ಪನವರು 'ಸೂರ್ಯ'ದಲ್ಲಿ 'ಅಮೃತಮತಿ ಕಥಾಸಾಗರ'[೮೨] ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯಲ್ಲಿ ಹನುಮಂತ "ಅಮೃತಮತಿಯ ಜಾನಪದ ಕಥೆಯನ್ನು"[೮೩] ಹೇಳುತ್ತಾರೆ.

ಮೇಲೆ ಉಲ್ಲೇಖಿಸಿದಂತೆ ಪುರಾಣದ ಕತೆಯನ್ನು ಹೇಳುವ ಉದ್ದೇಶ ಮೇಲುವರ್ಗದ ಸ್ತ್ರೀಯರು ಕೆಳವರ್ಗದ ಪುರುಷನೊಂದಿಗೆ ಹೊಂದುವ ಲೈಂಗಿಕ ಸಂಬಂಧದ ಕುರಿತು ಹೇಳುತ್ತಾರೆ. ಸೂರ್ಯದಲ್ಲಿ ಗೌಡತಿ ಸೀತಕ್ಕ ತನ್ನ ಮನೆಯ ಆಳಿನೊಂದಿಗೆ, ಹಾಗೂ 'ಕಾರ್ಯ'ದ ಪದ್ಮಾವತಿ ತೋಟದ ಆಳು ಘಟೇಗಾರ ಮಲ್ಲಪ್ಪನೊಂದಿಗೆ ಸಂಬಂಧ ಹೊಂದಿರುತ್ತಾರೆ. ಕಾರಣವಿಷ್ಟೇ ಮೇಲುವರ್ಗದ ಹೆಣ್ಣಿನೊಂದಿಗೆ ಕೆಳವರ್ಗದ ಗಂಡು ಸಂಪರ್ಕ ಹೊಂದುವುದು ಸಾಧ್ಯವಿಲ್ಲದ ಮೂರನ್ನು, ಅಮೃತ ಮತಿ ಶ್ರೀಮಂತಳಾದರೂ ಯಕೋಚಿತ ಮಾವುತ, ಅಷ್ಟವಕ್ರನೆಂಬ ಕುರೂಪಿಯೊಂದಿಗೆ ಲೈಂಗಿಕ ಸಂಪರ್ಕ ಹೊಂದುತ್ತಾಳೆ. ಇತಿಹಾಸದಲ್ಲಿ ನಡೆದ ಘಟನೆಯನ್ನು ಸಮಕಾಲೀನ ಸಂದರ್ಭದಲ್ಲಿ ಮೇಲು ಕೀಳು ಎಂದು ಭಾವಿಸುವವರಿಗೆ ಈ ಕಥೆ ಉದಾಹರಣೆಯಾಗುತ್ತದೆ. ಸೂರ್ಯದಲ್ಲಿ ಈ ಕತೆಯು ದೇವಸ್ಥಾನದಲ್ಲಿ ಹರಿಕಥೆ ಏರ್ಪಡಿಸುವ ಸಂದರ್ಭದಲ್ಲಿ ನಿರೂಪಿತವಾದರೆ, ಕಾರ್ಯದಲ್ಲಿ, ಬಂಗಾರೆವ್ವನ ಕಾರ್ಯ ಮೂರನೇ ದಿನದಿಂದ ಮುಂದೂಡಲ್ಪಟ್ಟಾಗ, ರಾತ್ರಿ ಇಡೀ ಕಾಡಿನ ಮಧ್ಯೆ, ಉಳಿದುಕೊಳ್ಳುವ ಸಂದರ್ಭದಲ್ಲಿ ಹನುಮಂತ, ಮಲ್ಲಪ್ಪ ಹಾಗೂ ಪದ್ಮಾವತಿಯ ಸಂಬಂಧವನ್ನು ದಶರಥನಿಗೆ ಕಥೆಯಾಗಿ ಹೇಳುತ್ತಾ ಆ ರಾತ್ರಿಯನ್ನು ಕಳೆಯುವರು. ಇದು ಮುಂದೆ ನಡೆಯಬಹುದಾದ ಅನೈತಿಕ ಸಂಬಂಧಗಳ ಕುರಿತು ಹೇಳುವ ತಂತ್ರವಾಗಿದೆ.

'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ವರ್ಣಸಂಕರತೆಗಾಗಿ ಹೊಲೆಯರ ಸಂಗಯ್ಯ ಹಾಗೂ ಅಗಸರ ಕೋಮಿಗೆ ಸೇರಿದ ಮಾಳುಗಮ್ಮರ ಪ್ರೇಮಪ್ರಕರಣವು ಜಾನಪದ ಶೈಲಿಯಲ್ಲಿ ಪುರಾಣದ ಕತೆಯನ್ನು ಚಿತ್ರಿಸುತ್ತದೆ.

ಈ ಇಬ್ಬರ ಸಂಬಂಧದಿಂದ ಹುಟ್ಟಿದ ಮಗು ಬೆಳೆದು ಭಕ್ಷಕರಾದ ಶೋಷಿತ ವರ್ಗಗಳಿಗೆ ಮಾಡುವ ವಂಚನೆಯ ವಿರುದ್ಧ ಹೋರಾಡುತ್ತಾನೆ. ಇವನ ಪ್ರತಿರೂಪವೇ ಕಾದಂಬರಿಯ ಎರಡನೇ ಭಾಗದಲ್ಲಿ ಬಸುರಾಜ ಪ್ರತಿನಿಧಿಸುತ್ತಾನೆ. ವಾಸ್ತವದಲ್ಲಿ ವ್ಯವಸ್ಥೆಯ ಅಸಮಾನತೆಯ ವಿರುದ್ಧ ಹೋರಾಡುತ್ತಾನೆ.

ಆರ್ಥಿಕವಾಗಿ ದುರ್ಬಲರಾದ ಕೆಳವರ್ಗಗಳು ಮೇಲುವರ್ಗಗಳನ್ನೇ ನಂಬಿಕೊಂಡು ಬದುಕು ಸಾಗಿಸುತ್ತಿರುತ್ತವೆ. ಹಾಗಾಗಿ ಪ್ರತಿಷ್ಠಿತ ವರ್ಗಗಳ ನುಡಿಯನ್ನು ಅಕ್ಷರಶಃ ತಪ್ಪದೇ ಪಾಲಿಸಬೇಕಾಗುತ್ತದೆ. 'ಕಪ್ಪು' ಕಾದಂಬರಿಯಲ್ಲಿ ಕರೀಗೌಡ ಭರಮಜ್ಜನನ್ನು ತನ್ನ ಮನೆಗೆ ಆಹ್ವಾನ ನೀಡಿರುತ್ತಾನೆ. ಇದಕ್ಕೆ ಭರಮಜ್ಜ, "ರವ್ವಸ್ಟು ನೀರ್ಕೊಡು ಕುಡುಕೊಂಡು ಒಗ್ತೀನಿ"[೬೪] ಎಂಬುದು ಮುಂದೆ ಗೌಡನಿಂದಾಗುವ ದುರಂತದ ಬಗ್ಗೆ ಕಾದಂಬರಿಕಾರರು ಚಿತ್ರಿಸುತ್ತಾರೆ. ಏಕೆಂದರೆ, ಗೌಡನಂಥ ಫ್ಯೂಡಲಿಸ್ಟ್ ಹತ್ತಿರ ಹೋಗೋದು ಒಂದೇ, ನರಕದಲ್ಲಿ ಹೋಗೋದು ಒಂದೇ, ಇಂತ ಕರೆಯು ಕುರುಮಯ್ಯ ಮತ್ತು ಅಂಕುಶದೊಡ್ಡಿ ಕಾದಂಬರಿಯ ಕೊರವರ ಕುರುಮಯ್ಯನನ್ನು ಆಹ್ವಾನಿಸುವುದು ನೆನಪಿಸುತ್ತದೆ. ಇಲ್ಲಿ 'ಒಗ್ತೀನಿ' ಎಂಬುದು ಮರಳಿ ಬರುವ ನಂಬಿಕೆ ಇಲ್ಲ. 'ಹೋಗಿ ಬರ್ತೀನಿ' ಎಂಬ ಧ್ವನಿಯಲ್ಲಿ ಬದುಕುಳಿಯುವ ಆಸೆ ಇರುವುದನ್ನು ಗಮನಿಸಬೇಕು." ಎಷ್ಟು ಹೊತ್ತಾಯಿತೇನೋ... ಹೋಗಿ ಬರ್ತೀನಿ ಮುದ್ಕಿ..... ಹೋಗಿ ಬರ್ತೀನಿ ಗೋರವ್ವಾ"[೬೫] ಎಂಬ ಎರಡು ಧ್ವನಿಯನ್ನು ಕಾದಂಬರಿಕಾರರು ಭರಮಜ್ಜನ ಕುಟುಂಬ ನಾಶವಾಗುವ ದುರಂತತೆಯನ್ನು ಮೇಲಿನ ತಂತ್ರದ ಮೂಲಕ ಪ್ರಕಟಿಸುತ್ತಾರೆ. ಇದು ಕಥೆಯ ನಿರೂಪಣೆಯ ತಂತ್ರವಾದರೆ, ಕಥೆಯ ಪಾತ್ರಗಳಲ್ಲಿ ಪತ್ತೇದಾರಿ ತಂತ್ರವನ್ನು ಬಳಸಿಕೊಂಡಿದ್ದಾರೆ.

ಭರಮಜ್ಜನ ಕುಟುಂಬ ಗೌರಿಯನ್ನು ರಕ್ಷಿಸುವ ಸಂಬಂಧದಲ್ಲಿ ಮಾಸೂರನ್ನೇ ಬಿಟ್ಟು ಬಾಸೂರಿನಲ್ಲಿ ನೆಲೆಸಿರುತ್ತಾರೆ. ಇಂಥ ಸಂದರ್ಭದಲ್ಲಿ ಕರೀಗೌಡ ಗೌರಿಯ ಪತ್ತೆಗಾಗಿ ಕೆಳವರ್ಗದ ಪುರುಷ್ನನ್ನು ವೇಷಧರಿಸಿ ಕಳಿಸುತ್ತಾನೆ. ನಂತರ ಆಳುಗಳ ಮೂಲಕ ಶೋಧನೆಗೆ ಕಳಿಸುತ್ತಾನೆ. ಅವರು ಪಾರಿವಾಳದ ಮೂಲಕ 'ಖ್ಯಾತಿಗಳು ಬಾಸೂರಿನಲ್ಲಿ' ಎಂಬ ಪತ್ರವನ್ನು ರವಾನಿಸುತ್ತಾರೆ. ಪಾರಿವಾಳದ ಮೂಲಕ ನಡೆಯುವ ತಂತ್ರವು ಹಿಂದಿನ ಕಾಲದಲ್ಲಿ ರಾಜರುಗಳು ಸಂದೇಶಗಳನ್ನು ತಲುಪಿಸುತ್ತಿದ್ದುದು ಇಲ್ಲಿ ನೆನಪಿಸಬಹುದು. ಕಾದಂಬರಿಕಾರರು ಗೌರಿಯ ಶೋಧನೆಯನ್ನು ಪಾರಿವಾಳದ ಮೂಲಕ ಪತ್ತೇದಾರಿ ತಂತ್ರವಾಗಿ ಬಳಸಿಕೊಂಡಿದ್ದಾರೆ. ದೇವನೂರು ಮಹಾದೇವ ಅವರು ತಮಟೆಯ ತಂತ್ರವನ್ನು

ಅಳವಡಿಸಿಕೊಂಡಂತೆ, ಕುಂ.ವೀ.ಯವರೂ ಆ ತಂತ್ರವನ್ನು ಅಳವಡಿಸಿಕೊಂಡಿದ್ದಾರೆ. ಗೌರಿಯನ್ನು ಬಸವಿಮಾಡುವ ಸಂದರ್ಭದಲ್ಲಿ ಹೊಲೆಯರು ಬಾರಿಸುವ ತಪ್ಪಟೆಯ ಧ್ವನಿಯನ್ನು ಗಮನಿಸಬಹುದು. ಈ ನಡುವೆ ಗೌರಿ ಕರೀಗೌಡನ ಬಂಧನದಿಂದ ತಪ್ಪಿಸಿಕೊಳ್ಳಬೇಕು ಇಲ್ಲವೇ ಸಾಯಬೇಕೆಂದು ನಿಶ್ಚಯಿಸಿಕೊಂಡಿರುತ್ತಾಳೆ. ನಿರೂಪಣೆಯಲ್ಲಿ ಹೀಗಿದೆ :-

''ಕಿಡಿಕಿಯಿಂದ ಹಲಗೆ ಬಡಿಯುವ ಶಬುದಗಳು ತೂರಿ ಬರುತ್ತಿದ್ದವು. ಹಲಗೆ ತಾಳದಲ್ಲಿ ಬಡಿಯುತ್ತಿದ್ದರೆ ಗೌರಿ ಮೂರು ತಾಳದ ಡಡ್ಡಣ ಮೂಕಣ್ಣ ಅಂತ ಬಡಿಯುವುದು ಯಾರಾದರೂ ಸತ್ತಾಗ ಮಾತ್ರ. ತನ್ನನ್ನು ಇಷ್ಟಿಷ್ಟೆ. ಸಾಯಿಸುವುದಕ್ಕೆ ಈ ಏರ್ಪಾಡು ಅಂದುಕೊಂಡಳು.''[೮೬]

ಎನ್ನುವಲ್ಲಿ ಕಾದಂಬರಿಕಾರರು ಗೌರಿಯ ಬದುಕಿನ ಅಳಿವಿನ ಮುನ್ಸೂಚನೆಯಾಗಿ ಈ ತಂತ್ರವನ್ನು ಅಳವಡಿಸಿಕೊಂಡಿದ್ದಾರೆ. ಯಾವುದೇ ಒಂದು ಕಾದಂಬರಿಯು ಪ್ರತಿಮೆಯ ಮೂಲಕ ಅನನ್ಯತೆಯನ್ನು ಕಂಡುಕೊಳ್ಳುತ್ತದೆ. ಪ್ರತಿಮೆ ಅಥವಾ ತಂತ್ರಗಾರಿಕೆ ಇಲ್ಲದೇ ಹೋದರೆ, ಬರೀ ಘೋಷಣೆಯಾಗಿ ಬಿಡುವ ಅಪಾಯವಿದೆ. ಹಾಗಾಗಿ ಕಾದಂಬರಿಗೆ ವಸ್ತು, ಭಾಷೆ, ಎಷ್ಟು ಮುಖ್ಯವೋ ತಂತ್ರ ಕೂಡ ಅಷ್ಟೇ ಮುಖ್ಯವಾಗುತ್ತದೆ.

ಈ ಕಾದಂಬರಿಗಳಲ್ಲಿ ಬಹುಮುಖ್ಯ ತಂತ್ರವೆಂದರೆ, ಪಾತ್ರವನ್ನು ಕೇಂದ್ರ ಪ್ರಜ್ಞೆಯಾಗಿ ಅಳವಡಿಸಿಕೊಳ್ಳುವುದು. ಈ ತಂತ್ರವನ್ನು ''ಹೆನ್ರಿ ಜೇಮ್ಸ್ Central lntelligence ಎಂದು ಕರೆಯುತ್ತಾರೆ.''[೮೭] ಲೇಖಕ ಕೇಂದ್ರ ಪ್ರಜ್ಞೆಯ ಪಾತ್ರ ದೃಷ್ಟಿಯನ್ನು, ಅದಕ್ಕೆ ತನ್ನ ಸ್ವಂತದ ದೃಷ್ಟಿಯನ್ನು ಜೋಡಿಸುವ ಮೂಲಕ, ಆ ಪಾತ್ರವನ್ನು ಇನ್ನಷ್ಟು ಬಲಪಡಿಸುವುದು. ಅಂದರೆ, ಕತೆ ಆರಂಭವಾಗುವುದು ಕೇಂದ್ರ ಪಾತ್ರದ ಕೊನೆಯ ಘಟನೆಯಿಂದ; ಇನ್ನುಳಿದುದೆಲ್ಲ ಒತ್ತಾಯಪೂರ್ವಕವಾಗಿ ಮಾಡಿಕೊಂಡ ನೆನಪುಗಳ ತಂತ್ರವಾಗಿದೆ. ಇದಕ್ಕೆ ನಿದರ್ಶನವೆಂದರೆ, 'ಮಾಗಿ' ಕಾದಂಬರಿ ಈ ಕಾದಂಬರಿಯ ಕೇಂದ್ರ ಪ್ರಜ್ಞೆಯ ಪಾತ್ರ ಮಾಗವ್ವ. ಹಾಗಾಗಿ ಕಾದಂಬರಿಕಾರ ಅವಳ ಆದರ್ಶವನ್ನು ಎತ್ತಿ ತೋರಿಸುವುದಕ್ಕಾಗಿ ಅವಳ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತಾರೆ. ಆದರ್ಶಕ್ಕೆ ಬೆಳಕು ಚೆಲ್ಲಲೆಂದೇ ದುರಾಚಾರ ವ್ಯಕ್ತಿಗಳ ಚಿತ್ರಣವನ್ನು ಕೊಡುತ್ತಾರೆ. ಇದರಿಂದಾಗಿ ಮಾಗಿಗೆ ಶಿಕ್ಷಿಸುವ ಪಾತ್ರಗಳೆಲ್ಲಾ ನಿರ್ದಿಷ್ಟ ಒಂದೇ ಹೆಸರಿನವರಾಗಿದ್ದಾರೆ. ಚಾಮ, ಕುಳ್ಳ ಚಾಮ, ಚಿಕ್ಕ ಚಾಮ, ಚಾಮಿ, ಸಣ್ಣಿ, ಕೆಂಪಿ, ಮುಂತಾದ ಹೆಸರುಳ್ಳ ಪಾತ್ರಗಳು ಒಂದೇ ಧಾಟಿಯಲ್ಲಿ ಬಂದಿವೆ. ಈ ಹೆಸರುಗಳ ಮೂಲಕವೇ ಅವರ ವ್ಯಕ್ತಿತ್ವವನ್ನು ನಿರ್ಧರಿಸಬಹುದಾಗಿದೆ. ಒಂದು ರೀತಿಯಲ್ಲಿ ಮಾಗಿಯ ಆದರ್ಶವನ್ನು ಹೆಚ್ಚಿಸುವ ಖಳನಾಯಕ-ನಾಯಕಿಯರ ಪಾತ್ರ ಪ್ರಕಟಣೆಗೊಂಡಿದೆ. ಗತಿ ಕಾದಂಬರಿಯಲ್ಲಿಯೂ ಈ ತರಹದ

ತಂತ್ರ ಗ್ರಹಿಕೆಗೆ ಬರುತ್ತದೆ. ಪವರ್ ಮಾನ್ ಸಿಂಗ್, ಹರಿಸಿಂಗ್ ಪಾತ್ರಗಳು ಲಕ್ಷ್ಮಿ, ಸೋನಿಯಂತಹ ಅಮಾಯಕ ಸ್ತ್ರೀಯರನ್ನು ದೌರ್ಜನ್ಯವೆಸಗುವ ಖಳನಾಯಕರು ಈ ತರದ ಪಾತ್ರಗಳು ದಲಿತೇತರ ಬಂಡಾಯ ಕಾದಂಬರಿಯಲ್ಲಿ ಹೆಚ್ಚು ಪುನಾರಾವರ್ತನೆಯಾಗುತ್ತವೆ.

ನಾಟಕೀಯ ತಂತ್ರ ಕೂಡ ಈ ಕಾದಂಬರಿಗಳಲ್ಲಿ ಬಳಕೆಗೊಂಡಿವೆ. ಕುಸುಮಬಾಲೆಯಲ್ಲಿ ಬಸಪ್ಪಸೋಮಿ ಮಾತನಾಡುವ ಶೈಲಿ ಯಕ್ಷಗಾನ ನಾಟಕದ ತಂತ್ರವಾಗಿದೆ. ಅಲ್ಲದೇ ಕೆಳವರ್ಗಗಳು ಬದುಕುವ ಉಪಾಯವನ್ನು ತಿಳಿಸುವ ಸಂದರ್ಭದಲ್ಲಿ ಈ ತಂತ್ರ ಪ್ರಕಟವಾಗಿದೆ. ಗಾರೆಸಿದ್ಧಾಮನ ಎಳೆನೀರು ತೆಂಗಿನ ಕಾಯಿ ಕಳ್ಳತನದ ಪ್ರಸಂಗ, ಅಮಾಸನ, ಸ್ತ್ರೀಯರ ಮುಟ್ಟಿನ ಶ್ಯಾಲೆ ಮಾರುವ ದಂಧೆಗಳನ್ನು ಹೆಸರಿಸಬಹುದು.

## ಸಮಕಾಲೀನ ಸಂದರ್ಭದ ಆಸೆ-ನಿರಾಸೆ; ನೋವು-ನಲಿವು

ಪರಂಪರೆಯಿಂದಲೂ ಪ್ರತಿಷ್ಠಿತ ಸಂಸ್ಕೃತಿಗಳು ಕೆಳವರ್ಗದ ಸಂಸ್ಕೃತಿಗಳನ್ನು ಕೇಡಿನ ಸಂಗತಿಗಳನ್ನಾಗಿ ಪರಿಗ್ರಹಿಸಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಇದು ಸಾಮಾಜಿಕ ಸಂದರ್ಭದಲ್ಲಿ ಒಂದು ರೀತಿಯದ್ದಾಗಿದ್ದರೆ ರಾಜ್ಯ ಸಾಮ್ರಾಜ್ಯಗಳ ಸಂದರ್ಭದಲ್ಲಿ ಮತ್ತೊಂದು ರೀತಿಯದಾಗಿತ್ತು. ಭಾಷಿಕ ಸಮುದಾಯಗಳಲ್ಲಿ ಇನ್ನೊಂದು ರೀತಿಯಿತ್ತು. ಉತ್ತರ ಭಾರತದವರಿಗೆ ದಕ್ಷಿಣ ಭಾರತದವರು ಕೇಡಿನ ಸೂಚಕಗಳಾದರೆ ಹಿಂದೂಗಳಿಗೆ ಮುಸ್ಲಿಮರು ಕೇಡಿಗಳಾಗಿ ದೇಶದ್ರೋಹಿಗಳಾಗಿ ಕಂಡಿದ್ದು ಹೊಸದೇನಲ್ಲ. ಹಾಗೆ ೧೮೫೭ರ ದಂಗೆಯನ್ನು ಬ್ರಿಟಿಶ್ ಅಧಿಕಾರಿಗಳು ಮುಸಲ್ಮಾನರ ಪಿತೂರಿಗಳೆಂದು ಉಲ್ಲೇಖಿಸಿದೆ. ಹೀಗೆ ರಾಜಕೀಯಾಧಿಕಾರ ಅಧಿಕಾರ ಅಂತಸ್ತು ಹೊಂದಿದ್ದ ಸಾವಿರಾರು ಗುಂಪುಗಳು ತಮಗಿಂತ ದುರ್ಬಲರಾದವರನ್ನು ಶೋಷಿಸುತ್ತ ಬಂದಿವೆ. ಅಲ್ಲದೆ ಶ್ರೇಣೀಕೃತ ವ್ಯವಸ್ಥೆಯಲ್ಲಿ ತಮ್ಮ ಸ್ಥಾನಮಾನಗಳನ್ನು ಸ್ಥಿರಪಡಿಸಿಕೊಳ್ಳುತ್ತ ಬಂದಿವೆ. ಹಾಗೆ ತನ್ನೆಲ್ಲ ಶಕ್ತಿ ಕಳೆದುಕೊಂಡು ವಿನಾಶಗೊಂಡಿದ್ದು ಇದೆ. ಹೀಗೆ ಮುಸ್ಲಿಂ, ಮರಾಠ, ಮೊಗಲ್ ಸಾಮ್ರಾಜ್ಯಗಳ ಪ್ರಭಾವಕ್ಕೆ ಕರ್ನಾಟಕದ ಸಮಾಜ ಒಳಗಾಗಿದ್ದರೂ ಬ್ರಿಟಿಶ್ ಸಾಮ್ರಾಜ್ಯ(ಗುಣಾತ್ಮಕ-ಧನಾತ್ಮಕ) ನೀಡಿದ ಪ್ರೇರಣೆಗಳು ಗಮನಿಸುವಂಥವು.

ಬ್ರಿಟಿಶ್ ಸಾಮ್ರಾಜ್ಯಶಾಹಿ ಧೋರಣೆ, ಜಾತಿ ಜಾತಿಗಳನ್ನು ಜಾತಿವಾರು ಸಂಘ ಸಂಸ್ಥೆಗಳು ಶೈಕ್ಷಣಿಕ ಸಂಸ್ಥೆಗಳು ಸುಧಾರಣಾ ಚಳವಳಿಗಳು ಇಲ್ಲಿ ಹುಟ್ಟಿದವು. ಸುಶಿಕ್ಷಿತ ಮಧ್ಯಮ ವರ್ಗದ ಉದಯವಾಯಿತು. ಬಹುತೇಕ ಬರಹಗಾರರು ಇಲ್ಲಿಂದಲೇ ಬಂದವರು. ಇವರು ಜಾತಿ ಮತೀಯ ಪ್ರಾದೇಶಿಕ ಚಳುವಳಿಗಳ ನೇತಾರರೂ ಆದರು. ಭಾಷಾ ಸಂಬಂಧಿ ಉಪರಾಷ್ಟ್ರೀಯತೆಗಳ ಅಸ್ತಿತ್ವಕ್ಕೂ ಹೋರಾಡಿದರು. ತತ್ಫಲವಾಗಿ ಭಾಷಾವಾರು ಪ್ರಾಂತ್ಯರಚನೆಯಾಯಿತು. ಇದು ಕೆಳಸಮುದಾಯಗಳಿಗೆ ರಾಜಕೀಯ ಜಾಗೃತಿಯನ್ನು ಸಾಮಾಜಿಕ ಜಾಗೃತಿಯನ್ನು ತಂದುಕೊಟ್ಟಿತು. ಅವರವರ ಸಮಾಜಗಳಲ್ಲಿ ಅಡಗಿದ್ದ

ಅಮಾನವೀಯ ಆಚರಣೆಗಳನ್ನು ಕಿತ್ತೊಗೆದು ಶೈಕ್ಷಣಿಕವಾಗಿ ಮುಂದುವರಿಯಬೇಕು ಆರ್ಥಿಕ ಬಲ ಪಡೆಯಬೇಕು, ಹೆಂಗಸರ ಸ್ಥಿತಿಗತಿಗಳನ್ನು ಉತ್ತಮಗೊಳಿಸಿಕೊಳ್ಳಬೇಕು ಎನ್ನುವ ಎಚ್ಚರವನ್ನು ಮೂಡಿಸಿತು.

ಇಂಡಿಯಾದಲ್ಲಿ ಒಂದೇ ರೀತಿಯ ಶೋಷಣೆಯಿರಲಿಲ್ಲ. ಕಾರ್ಮಿಕನಿಗೆ ಬಂಡವಾಳಿಗ, ರೈತನಿಗೆ ದುಡಿವ ವರ್ಗಗಳಿಗೆ ಕೃಷಿಕಾರ್ಮಿಕರಿಗೆ ಜಮೀನ್ದಾರರು, ಹೆಂಗಸರಿಗೆ ಗಂಡಸರು ಹೀಗೆ ಅನೇಕ ಬಗೆಯ ಶೋಷಣೆ ಕಂಡುಬರುತ್ತದೆ. ಈ ಕಾರಣಗಳು ರೈತ ಮತ್ತು ಕಾರ್ಮಿಕರನ್ನು ಸ್ಥಳೀಯ ಶೋಷಕರು ಹಾಗೂ ಬ್ರಿಟಿಶ್ ಸರ್ಕಾರದ ವಿರುದ್ಧ ಸಮರ ಸಾರಲು ಪ್ರೇರೇಪಿಸಿದವು. ಕೆಳವರ್ಗದ ಚಳುವಳಿಗಳು ಇದರಿಂದ ಪ್ರೇರಿತವಾದವು. ಸಮಾಜ ಸುಧಾರಣೆಯ ವಿವಿಧ ಹಂತಗಳು ಇಂಗ್ಲಿಶ್ ಶಿಕ್ಷಣ ಸಮಾಜದಲ್ಲಿ ಒಂದು ಬಗೆಯ ವೈಚಾರಿಕತೆಯನ್ನು, ಆಲೋಚನಾ ಕ್ರಮಗಳನ್ನು ಹರಿಯಬಿಟ್ಟರೂ ಪ್ರಾದೇಶಿಕವಾದ ವರ್ಗ, ವರ್ಣ ಜಾತಿಗಳಿಂದ ಬದ್ಧವಾಗಿದ್ದ ಕಾರಣ ಮತ್ತೆ ಜಾತಿ ಭಾವನೆಗಳು ಬೇರೆ ರೀತಿಯಲ್ಲಿ ಬೆಳೆಯಲು ಕಾರಣವಾಯಿತು. ಬರವಣಿಗೆ, ಮುದ್ರಣ ಮತ ಪ್ರಚಾರದಂತಹ ಕ್ರಮಗಳು ಗದ್ಯದ ಬೆಳವಣಿಗೆಯನ್ನು ಇಮ್ಮಡಿಸಿದವು. ಇದರಿಂದ ಪಾರಂಪರಿಕವಾದ ಭಾರತೀಯ ಸಮಾಜದ ಆಲೋಚನೆ, ಬರವಣಿಗೆ, ವರ್ಣ-ಜಾತಿ-ವಿನ್ಯಾಸಗಳು ಬೇರೊಂದು ರೀತಿಯ ಸಾಂಸ್ಕೃತಿಕ ಚಿಂತನೆಯನ್ನು ನೆಲೆಗೊಳಿಸಿಕೊಂಡವು. ಶೈಕ್ಷಣಿಕ ಅವಕಾಶವನ್ನು ಪಡೆದುಕೊಂಡ ಬ್ರಾಹ್ಮಣರು ಬದುಕಿನ ಮಟ್ಟದಲ್ಲಿ ಸಂಪ್ರದಾಯವನ್ನು ಬಿಡದ ಆಲೋಚನಾ ಮಟ್ಟದಲ್ಲಿ ಬ್ರಿಟಿಶ್ ಶಿಕ್ಷಣವನ್ನು ಸ್ವೀಕರಿಸುವ ಸಂದಿಗ್ಧತೆಯಲ್ಲಿ ಸಿಕ್ಕಿಹಾಕಿಕೊಂಡರು.

ಯುರೋಪಿನ ವಿದ್ವಾಂಸರು ತಮ್ಮ ಹಿತಾಸಕ್ತಿಗಳಿಗಾಗಿ ಹಾಕಿಕೊಂಡ ಅಧ್ಯಯನ ವಿಧಾನಗಳನ್ನು ಇವರು ಹಿಡಿದುಕೊಂಡರು. ಹೀಗಾಗಿ ಕೇಂದ್ರೀಕೃತವಾದಿ ಸಂಸ್ಕೃತಿಯ ಪರಿಕಲ್ಪನೆಯನ್ನು ಹುಟ್ಟುಹಾಕಿದರು. ಇದಕ್ಕೆ ಭಾಷಿಕ ದಾಖಲೆಗಳನ್ನು ಮುಖ್ಯ ಆಕರಗಳನ್ನಾಗಿಸಿಕೊಂಡರು. ಬಹುರೂಪಿ ಸಂಸ್ಕೃತಿಗಳಿಗೆ ಇಂಥ ಭಾಷಿಕ ದಾಖಲೆಗಳಿರಲಿಲ್ಲ. ಅವುಗಳ ದೈನಂದಿನ ಬದುಕಿನೊಳಗೆ ಅವು ಅಡಗಿದ್ದವು. ಅಲ್ಲದೇ ಇಡೀ ಭಾರತ ಮತ್ತು ಕರ್ನಾಟಕಗಳಲ್ಲೂ ಬ್ರಿಟಿಶ್ ವಿರುದ್ಧದ ರಾಜಕೀಯ ದಂಗೆಗಳು, ಸಾಮಾಜಿಕ ಚಳುವಳಿಗಳು ಭಾಷಿಕ ಚಳವಳಿಗಳು, ಸಾಂಸ್ಕೃತಿಕ ಚಳುವಳಿಗಳು ಬಿರುಸಾಗಿ ನಡೆದವು. ಸ್ವಾತಂತ್ರ್ಯ ಚಳುವಳಿಯಂತಹ ಸಂಗತಿಗಳು ನಿರ್ದಿಷ್ಟ ಭಾರತೀಯ ಸಂಸ್ಕೃತಿ ಕಲ್ಪನೆಯನ್ನು ಹರಿಯ ಬಿಟ್ಟವು.

ಒಟ್ಟು ಚರಿತ್ರೆಯನ್ನು ಅವಲೋಕಿಸಿದಾಗ ಸಂಸ್ಕೃತಿ ಮತ್ತು ಪರ್ಯಾಯ ಸಂಸ್ಕೃತಿ ಕುರಿತ ಚಿಂತನೆಗಳು ಏಕಮುಖವಾಗಿರದೆ ಸಾಮಾಜಿಕ ಚಲನಶೀಲತೆಯ ಬೇರೆ ಬೇರೆ ಆಯಾಮಗಳು ವಿಭಿನ್ನ ಪರಿಣಾಮಗಳು ಮತ್ತಿತರೆ ಕಾರಣಗಳೂ ಸೇರಿದಂತೆ ಅದು ಬೇರೆ ಬೇರೆ ನೆಲೆಗಳಲ್ಲೂ ರೂಪ ಪಡೆದಿದೆ.

ಅಖಂಡ ಸಂಸ್ಕೃತಿ ಕುರಿತ ಚಿಂತನೆ, ನಿರ್ದಿಷ್ಟ ಆಕರ ಸಾಮಗ್ರಿಗಳು ಜೊತೆಯಲ್ಲೇ ಇದ್ದ ಬಹುರೂಪಿ ಸಂಸ್ಕೃತಿಗಳ ಜೀವನ ಕ್ರಮಗಳನ್ನು ಮರೆಗೆ ಸರಿಸಿದವು. ಇಂಥ ಮಾದರಿಗೆ ಪರ್ಯಾಯವಾದ ಚಿಂತನ ಕ್ರಮ ಇಂದು ಬೆಳೆದು ಬರುತ್ತಿದೆ. ಇವನ್ನು ಆಯಾ ಚಿಂತನೆಗಳ ಹಿಂದಿರುವ ಧೋರಣೆ, ಹಿತಾಸಕ್ತಿಗಳನ್ನು ಗಮನದಲ್ಲಿರಿಸಿ ಗ್ರಹಿಸುವುದು ಒಳಿತು. ಇಲ್ಲವಾದರೆ ಮತ್ತೊಂದು ಅಪಾಯಕ್ಕೆ ನಾವು ಸಿಗಿಬಿದ್ದಂತಾಗುತ್ತದೆ.

ಇಂದು ನಾವು ತುಂಬಾ ಸಂಕೀರ್ಣವಾದ ಸಾಂಸ್ಕೃತಿಕ ಸಂದರ್ಭದಲ್ಲಿದ್ದೇವೆ. ಬಂಡವಾಳಶಾಹಿಗಳ ಕರಾರುಬದ್ಧ ಲೂಟಿ, ಅದಕ್ಕೆ ಕುಮ್ಮಕ್ಕು ನೀಡುವ ದಲ್ಲಾಳಿ ರಾಜಕಾರಣ, ಈ ರಾಜಕಾರಣದೊಂದಿಗೆ ಬಂಡವಾಳಿಗರೊಂದಿಗೆ ಅನೈತಿಕ ಸಂಬಂಧ ಹೊಂದಿರುವ ಊಳಿಗಮಾನ್ಯ ವ್ಯವಸ್ಥೆ ಇದರ ಲಾಭದಾಯಕತೆಯನ್ನೇ ಪ್ರಧಾನ ಸಮಸ್ಯೆಗಳೆಂದು ಹೌಹಾರಿಸುವ ಬುದ್ಧಿ ಜೀವಿಗಳು, ಮಧ್ಯಮವರ್ಗ, ಮಾಧ್ಯಮಗಳು, ಅತಂತ್ರ ಸ್ಥಿತಿಯಲ್ಲಿ ವಾಲಾಡುತ್ತಿರುವ ದುಡಿವ ವರ್ಗ ಈ ಎಲ್ಲ ಎಚ್ಚರದ ಹಿನ್ನೆಲೆಯಲ್ಲಿ ದಲಿತ ಬಂಡಾಯ ಕಾದಂಬರಿಗಳು ಕೆಳಸಂಸ್ಕೃತಿಗಳ ಸಮಕಾಲೀನ ಸಂದರ್ಭದ ಆಸೆ ನಿರಾಸೆ, ನೋವು ನಲಿವುಗಳನ್ನು ಕಟ್ಟಿಕೊಡುತ್ತದೆ.

ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವಂತೆ ಶ್ರಮಿಕವರ್ಗ ಬಡತನದಿಂದಾಗಿ ತೀವ್ರ ಹತಾಶೆಗೊಂಡಿದ್ದರೆ, ಬಂಡವಾಳಶಾಹಿ, ಜಾಗತೀಕರಣದಂತಹ ದೈತ್ಯ ಶಕ್ತಿಗಳು ಮತ್ತಷ್ಟು ಬಡವವನ್ನಾಗಿ, ಶ್ರೀಮಂತರನ್ನು ಶ್ರೀಮಂತರನ್ನಾಗಿ ರೂಪಿಸುತ್ತಿದೆ. ಇದರಿಂದಾಗಿ ಸಮಾಜದಲ್ಲಿ ಮೇಲುವರ್ಗ ಕೆಳವರ್ಗಗಳೆಂದು ರಚನೆಗೊಳ್ಳುತ್ತಿವೆ. ಇದರ ಪರಿಣಾಮವಾಗಿ ಕೆಳವರ್ಗ ಕೆಳಜಾತಿ ಸಮುದಾಯಗಳು ಮೇಲು ಸ್ತರದ ವರ್ಗ ಜಾತಿಗಳನ್ನು ಅವಲಂಬಿಸಬೇಕಾಗುತ್ತದೆ. ಹೀಗೆ ಅವಲಂಬನೆಯಾಗುವುದರೊಂದಿಗೆ ಶೋಷಣೆಯ ನೋವನ್ನು ಅನುಭವಿಸಿ, ಹತಾಶೆಗೊಂಡಿದೆ. ಇದರಿಂದಾಗಿ ದೈಹಿಕವಾಗಿ ಸದೃಢಗೊಂಡ ಈ ವರ್ಗ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದೆ. ಗ್ರಾಮೀಣ ಸಮಾಜದಲ್ಲಿ ನವವಸಾಹತುಶಾಹಿಗಳ ಪ್ರಭುತ್ವ ಇನ್ನೂ ಜೀವಂತವಾಗಿರುವ ಚಿತ್ರಣವನ್ನು ಕಾದಂಬರಿಗಳು ಕಟ್ಟಿಕೊಡುತ್ತವೆ. ಅಕ್ಷರ ಸಂಸ್ಕೃತಿಯಿಂದ ಎಚ್ಚರಗೊಳ್ಳುತ್ತಿರುವ ಕೆಳಸಮುದಾಯ ಜಮಿನ್ದಾರಿಕೆಯ ವಿರುದ್ಧ ಪ್ರತಿಭಟನೆ ಧೋರಣೆ ತಾಳುತ್ತಿರುವ ಈ ಹೊತ್ತಿನಲ್ಲಿ ಯಜಮಾನ ಸಂಸ್ಕೃತಿ ಸಡಿಲಗೊಳ್ಳುತ್ತಿದೆ. ಹೀಗೆ ಸಡಿಲಗೊಳ್ಳುತ್ತಲೇ ಶೋಷಣೆಯ ವಿಭಿನ್ನ ರೂಪಗಳನ್ನು ಪಡೆದುಕೊಳ್ಳುತ್ತಿವೆ. ಆರ್ಥಿಕ ನೆಲೆಯ ಮೇಲೆ ನಿಂತ ಯಜಮಾನ ಸಂಸ್ಕೃತಿ ವಾಸ್ತವದಲ್ಲಿ ರಾಜಕೀಯ, ಸಾಮಾಜಿಕ ನೆಲೆಗಳಲ್ಲಿ ಪ್ರಭುತ್ವ ಸಾಧಿಸುತ್ತಿರುವುದು ತಿಳಿಯುತ್ತದೆ. ವಾಸ್ತವದಲ್ಲಿ ಕೆಳವರ್ಗ ರಾಜಕೀಯವಾಗಿ ಅಧಿಕಾರ ಪಡೆಯಲು ಹಂಬಲಿಸುತ್ತಿರುವುದು ಸಮಾನತೆಗಾಗಿ ಆ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಿದೆ. ಆದರೆ, ಮೇಲುವರ್ಗಗಳ ಕರಾರು ಬದ್ಧ

ಪ್ರಭುತ್ವದಡಿಯಲ್ಲಿ ಸಿಕ್ಕು ಮತ್ತೆ ಶೋಷಣೆಗೊಳಗಾಗುತ್ತಿವೆ. ಹೀಗೆ ಕೆಳವರ್ಗ ಶೋಷಣೆಗೆ ಒಳಗಾಗಲು ಮೇಲುಜಾತಿ ಮೇಲುವರ್ಗಗಳಷ್ಟೇ ಕಾರಣವಾಗುತ್ತಿಲ್ಲ. ತಮ್ಮ ಸಮುದಾಯಗಳ ಒಳಗಿನಿಂದಲೂ ಶೋಷಣೆಗೊಳಗಾಗುತ್ತಿವೆ. ಕೆಳವರ್ಗದ ಒಬ್ಬ ಪ್ರಜ್ಞಾವಂತ ರಾಜಕೀಯವಾಗಿ ಮುಂದು ಬಂದರೆ, ಅಧಿಕಾರಸ್ಥ ಮೇಲುವರ್ಗಗಳ ಅಡಿಯಲ್ಲಿ ಸಿಕ್ಕು ಅವರಂತೆಯೇ ಆಗಿ ಬಿಡುತ್ತಿದ್ದಾನೆ. ಹೀಗಾಗಿ ತನ್ನ ವರ್ಗದವರಲ್ಲಿಯೂ, ಮೇಲುವರ್ಗಗಳವರಲ್ಲಿಯೂ ಸೇರದೇ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿದ್ದಾನೆ. ಹೀಗೆ ಕೆಳವರ್ಗಗಳಿಗೆ ಒಂದು ಕಡೆ ಅಧಿಕಾರ ಪಡೆಯುವ ಹಂಬಲ ಒಂದೆಡೆಯಾದರೆ ತಮ್ಮ ವರ್ಗದ ನಾಯಕ(ರಾಜಕಾರಣಿ)ತಮ್ಮನ್ನೇ ವಂಚಿಸುತ್ತಿರುವುದು ಮತ್ತೊಂದಾಗಿದೆ. ಕೆಳವರ್ಗ ಈ ದ್ವಂದ್ವ ಕ್ರಿಯೆಯೊಳಗೆ ತನ್ನ ಆಸೆಗಳನ್ನು ಈಡೇರಿಸಿಕೊಳ್ಳಲಾಗದೇ ನೋವನ್ನು ಅನುಭವಿಸುವಂತಾಗಿದೆ. ದಲಿತ ಬಂಡಾಯ ಕಾದಂಬರಿಗಳು ಇಂಥ ಘಟನೆಗಳನ್ನು ಚಿತ್ರಿಸುತ್ತವೆ. ಕುಸುಮ ಬಾಲೆಯ ಯಾಡೇಗೌಡ, ಕಾರ್ಯದಲ್ಲಿಯ ಚಂದಪ್ಪ, ಕುರುಮಯ್ಯ ಮತ್ತು ಅಂಕುಶದೊಡ್ಡಿಯ ಗ್ಯಾನಪ್ಪ ಮುಂತಾದ ಪಾತ್ರಗಳು ಈ ಬಗೆಯ ಅಂಶಗಳನ್ನು ಎತ್ತಿ ಹೇಳುತ್ತವೆ. ಈ ರೀತಿ ಮೇಲುವರ್ಗಗಳ ಅಧಿಕಾರದಡಿಯಲ್ಲಿ ಸಿಕ್ಕು ನರಳುತ್ತಿರುವ ಕೆಳಸಮುದಾಯಗಳು ಸಾಮಾಜಿಕವಾಗಿ ಅಸ್ಪೃಶ್ಯತೆಯಂತಹ ಸಮಸ್ಯೆಯಿಂದ ತೀವ್ರವಾಗಿ ನೋವನ್ನನುಭವಿಸುತ್ತಿವೆ. ಅಸ್ಪೃಶ್ಯತೆ ಮಾನವ ಬದುಕಿಗೆ ಅಂಟಿಕೊಂಡು ಬಂದಿರುವ ಶಾಪವಾಗಿದೆ. ಆರ್ಥಿಕ ಅಸಮಾನತೆ ಹೆಚ್ಚಿದಂತೆ, ಅಸ್ಪೃಶ್ಯತೆ ಆಚರಣೆ ಹೆಚ್ಚುತ್ತದೆ.

ವಾಸ್ತವವಾಗಿ ಇಂಥ ಅಮಾನವೀಯ ಕೃತ್ಯಕ್ಕೆ ಬಲಿಯಾಗುತ್ತಿರುವ ಚಿತ್ರಣಗಳನ್ನು ಈ ಕಾದಂಬರಿಗಳು ಕಟ್ಟಿಕೊಡುತ್ತವೆ. ಪರಂಪರಾಗತವಾದ ಇಂಥ ಆಚರಣೆಗಳು ಧಾರ್ಮಿಕತೆಯು ಕವಚ ಬಿಚ್ಚಿ ಆರ್ಥಿಕ ರಚನೆಯ ಮೇಲೆ ನಡೆಯುತ್ತಿವೆ. ಆರ್ಥಿಕವಾಗಿ ದುರ್ಬಲವಾದ ಕೆಳವರ್ಗ ಮತ್ತಷ್ಟು ನೋವನ್ನು ಅನುಭವಿಸುತ್ತಿರುವ ಸನ್ನಿವೇಶಗಳು ಕಾದಂಬರಿಗಳಲ್ಲಿ ವ್ಯಕ್ತಗೊಂಡಿವೆ. ಅಸ್ಪೃಶ್ಯತೆಯ ಅಮಾನವೀಯ ಕೃತ್ಯ ಒಂದೇ ಕೋಮಿನ ಜಾತಿಗಳ ಮಧ್ಯೆ ನಡೆಯುತ್ತಿರುವುದರಿಂದ ತೀವ್ರ ನೋವನ್ನನುಭವಿಸುತ್ತಿವೆ. ಇದರಿಂದಾಗಿ ಒಂದೇ ಕೋಮಿನ ಸಂಘಟನೆ ಛಿದ್ರಗೊಳ್ಳುತ್ತಿದೆ. ಆ ಮೂಲಕ ದ್ವೇಷ ಭಾವನೆಗಳುಂಟಾಗುತ್ತಾ ಅನಾಥ ಪ್ರಜ್ಞೆಯನ್ನು ಅನುಭವಿಸುತ್ತಿವೆ.

ಹೀಗೆ ಈ ಕಾದಂಬರಿಗಳು ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ದಾಖಲಿಸುತ್ತಲೇ ಕೆಳಸಂಸ್ಕೃತಿಯ ನೋವು ನಲಿವುಗಳನ್ನು ವ್ಯಕ್ತಪಡಿಸುತ್ತವೆ. ಕೆಳಸಂಸ್ಕೃತಿಯು ಇಂಥ ನೋವುಗಳಿಂದ ಸಮಾಜದ ಒಳಗಿನ ಹಾಗೂ ಹೊರಗಿನ ಒತ್ತಡಗಳಿಂದ ಹತಾಶೆಗೊಂಡಿದೆ. ದಲಿತ ಬಂಡಾಯ ಸಾಹಿತ್ಯ ಚಳವಳಿಯು ಎರಡೂ ಅಂಶಗಳ ವಿರುದ್ಧ ಪ್ರತಿಭಟನೆಯ ಧೋರಣೆಯನ್ನು ತಾಳಿದೆ. ಬರಗೂರು ರಾಮಚಂದ್ರಪ್ಪ ಅವರು ಹೇಳುವಂತೆ "ಪುನರಾವಲೋಕನ ಪ್ರಕ್ರಿಯೆ ಮತ್ತು

ಸಮಕಾಲೀನ ಸ್ಫೋಟ ಎರಡನ್ನು ಒಳಗೊಂಡು ಉರಿಯುವ ಸ್ಫೋಟ''೮೮ ಎಂಬಲ್ಲಿ ಅಂತಹ ಮನೋಭಾವನೆಯು ಖಚಿತವಾಗುತ್ತದೆ. ಪುನರಾವ ಲೋಕನ ಪ್ರಕ್ರಿಯೆ ಮತ್ತು ಸಮಕಾಲೀನ ಸ್ಫೋಟ ಶ್ರಮಸಂಸ್ಕೃತಿಯ ಎಚ್ಚರ ಹಾಗೂ ಪರ್ಯಾಯಗಳ ಹುಡುಕಾಟವಾಗಿದೆ. ಆ ಮೂಲಕ ಕೆಳವರ್ಗ ಮಾನವೀಕರಣಗೊಳ್ಳುತ್ತಾ, ಬದುಕಿನ ಅನನ್ಯತೆಯ ಮಾರ್ಗಗಳನ್ನು ನಿರ್ಮಿಸಿಕೊಳ್ಳಲು ಹಂಬಲಿಸುತ್ತಿವೆ.

## ಜನಮುಖಿ ಹೋರಾಟಕ್ಕೆ ಒತ್ತಾಯ

'ಜನಮುಖಿ' ಅಥವಾ 'ಜನಪರ' ಎಂಬ ಪರಿಕಲ್ಪನೆ ೭೦ರ ದಶಕದ ದಲಿತ-ಬಂಡಾಯ ಲೇಖಕ-ವಿಮರ್ಶಕರಿಂದ ಉಪಯೋಗಿಸಲ್ಪಡುತ್ತಿದೆ. ಯಾವುದೇ ಸಾಹಿತ್ಯ ಸೃಜನತೆಯು ಜನಮುಖಿಯಾಗಿಯೇ ರಚಿತಗೊಂಡಿರುತ್ತದೆ. ಬದಲಾಗಿ ಲೇಖಕ ಜನವಿರೋಧಿಯಾಗಿರಲು ಸಾಧ್ಯವೇ ಇಲ್ಲ ಹಾಗಾಗಿ ಒಟ್ಟು ಕನ್ನಡ ಸಾಹಿತ್ಯ ಸೃಜನಶೀಲತೆ ಒಂದಲ್ಲ ಒಂದು ವರ್ಗದ ಪರವಾಗಿಯೇ ರಚಿತಗೊಂಡಿರುತ್ತದೆ. ಅಂಥ ಸಾಹಿತ್ಯ ಧಾರ್ಮಿಕ ಒಲವುಳ್ಳವರಿಗೆ, ಅವರ ಪರ ರಚನೆಗೊಂಡಿದೆ. ಮನರಂಜನೆ ಪಡೆಯುವವರಿಗೆ ಮನ ತಣಿಸುವಂತಹ ವಸ್ತುಗಳನ್ನನಿಟ್ಟು ಸಾಹಿತ್ಯ ರಚನೆಯಾಗಿರಬಹುದು. ಇವೆಲ್ಲವೂ ಜನಪರವೇ ಆಗಿದೆ. ಸಿ.ಎನ್ .ರಾಮಚಂದ್ರನ್ ವಾದದಂತೆ, "ಜನಪರ ಕಲ್ಪನೆಗಳು ಮೂಲತಃ ಸಾಹಿತ್ಯವಲ್ಲ. ಅವು ರಾಜಕೀಯ, ಸಾಮಾಜಿಕ ಪರಿಕಲ್ಪನೆಗಳು ಯಾವುದೇ ವರ್ಗಾಧಾರಿತ ಅಥವಾ ಜಾತಿಯನ್ನಾಧರಿಸಿದ ಸಮಾಜದಲ್ಲೂ ಆಸ್ತಿಯ ಒಡೆತನದ ಆಧಾರದ ಮೇಲೆ ಶ್ರಮಿಕ-ಉತ್ಪಾದಕ ಮತ್ತು ಅನುತ್ಪಾದಕ-ಉಪಭೋಕ್ತ ಎಂದು ಎರಡು ವರ್ಗಗಳನ್ನು ನಾವು ಗುರುತಿಸಬಹುದು. ಉಪಭೋಕ್ತನು ಅನುತ್ಪಾದಕನಾದ್ದರಿಂದ, ಇತರರ ದುಡಿಮೆಯ ಲಾಭವನ್ನು ತಾನು ಅನುಭವಿಸುವುದರಿಂದ, ಅವನು ಶೋಷಕ. ತನ್ನ ದುಡಿಮೆಯ ಫಲವನ್ನು ತಾನು ಭೋಗಿಸಲಾರದ ಶ್ರಮಿಕ ಶೋಷಿತ. ಅಂತಹ ಶ್ರಮಿಕರ, ಶೋಷಿತರ, ದುರ್ಬಲರ ಆಸೆ-ಆಕಾಂಕ್ಷೆಗಳನ್ನು ಸೆರೆ ಹಿಡಿದು, ಆ ಮೂಲಕ ಬಹುಸಂಖ್ಯಾತ ಜನರಿಗೆ ತಮ್ಮ ಮೇಲಾಗುತ್ತಿರುವ ಶೋಷಣೆಯ ಅರಿವನ್ನುಂಟುಮಾಡಿ, ಅವರನ್ನೆಚ್ಚರಿಸಿ, ಒಂದು ನೂತನ ವರ್ಗರಹಿತ ಸಮಾಜದ ಸಾಧ್ಯತೆಯನ್ನು ತೋರಿಸುವ ಹಾಗೂ ಅಂತಹ ಸಮಾಜದ ಬುನಾದಿಯನ್ನು ಸ್ಥಾಪಿಸುವ ಸಾಹಿತ್ಯ ಜನಪರ ಸಾಹಿತ್ಯ"೮೯ವಾಗುತ್ತದೆ. ಜನಮುಖಿ ಅಥವಾ ಜನಪರ ಎನ್ನುವುದು ನೊಂದವರ ಮನಸ್ಸಿಗೆ ಸಮುದಾಯಕ್ಕೆ ಸ್ಪಂದಿಸುವುದು. ಬರೀ ಸ್ಪಂದಿಸುವುದಷ್ಟೇ ಸಾಹಿತ್ಯದ ಕೆಲಸವಲ್ಲ ಅದು ಶೋಷಕನ ವಿರುದ್ಧ ಹೋರಾಡುವಂತೆ ಪ್ರೇರೇಪಿಸುವುದಾಗಿದೆ. ಏಕೆಂದರೆ, ಯಾವುದೇ ಒಂದು ವ್ಯವಸ್ಥೆ ಏಕಮುಖಿ ಚಲನೆ ಹೊಂದಿರುತ್ತದೆ. ಆದರೆ ಸಾಹಿತ್ಯದ ಅನನ್ಯತೆಯೇ ಬಹುಮುಖೀ ಅರಿವಿನಿಂದ ರೂಪಗೊಳ್ಳುತ್ತಿರುತ್ತದೆ. ಹಾಗಾಗಿ ಯಾವುದೇ ವಿಚಾರಕ್ಕೆ, ಅನುಭವಕ್ಕೆ, ಅನೇಕ ಮಗ್ಗಲು ಇರುವುದರಿಂದ ಸಾಹಿತ್ಯದ ಮೂಲಕ ಈ ಅಂಶಗಳು ಬಹುಮುಖವಾಗಿ

ಕ್ರಿಯಾಶೀಲವಾಗಿರುತ್ತವೆ. ಆದ್ದರಿಂದ ದಲಿತ ಬಂಡಾಯ ಸಾಹಿತಿ ವ್ಯವಸ್ಥೆಯ ವಿರುದ್ಧ ಬಂಡಾಯ ಹೂಡಲೇ ಬೇಕಾಗುತ್ತದೆ. ಮತ್ತು ವ್ಯವಸ್ಥೆಯ ಆಳದಲ್ಲಿ ಬೇರುಬಿಟ್ಟಿರುವ ಅಮಾನವೀಯ ಕ್ರೌರ್ಯ, ಹಿಂಸೆ, ಶೋಷಣೆಗಳನ್ನು ವಿರೋಧಿಸುವ ಅಂತಹ ಸಾಹಿತ್ಯ ಜನಪರ ಸಾಹಿತ್ಯವಾಗುತ್ತದೆ.

ಮೂಲತಃ ದಲಿತ-ಬಂಡಾಯ ಸಾಹಿತ್ಯ ಜನಮುಖಿಯಾಗಿದೆ. ವ್ಯವಸ್ಥೆಯ ಮೂಲಕ ದೀನ ದುರ್ಬಲರ ಬದುಕಿನಲ್ಲಿ ತಲ್ಲಣಗೊಂಡದ್ದನ್ನು ಸೌಂದರ್ಯ ಸ್ಥಾಪಿಸಲು ಹೊರಟಿದೆ. ಇದು ಬಂಡಾಯ ಚಳುವಳಿಯ ಸಿದ್ಧಾಂತದ ಹಿನ್ನಲೆಯಲ್ಲಿಯೇ ಕ್ರಿಯಾಶೀಲಗೊಳ್ಳುತ್ತಿದೆ. ಯಾಕೆಂದರೆ ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು ಇದಾಗಿದೆ.

ಚಂದ್ರಶೇಖರ ಪಾಟೀಲ್ ಹೇಳುವಂತೆ "ಬಂಡಾಯವೆಂಬುದು ಒಂದು ಮನೋಧರ್ಮ, ವ್ಯಕ್ತಿಯ ಅಂತೆಯೇ ಇಡೀ ಸಮಾಜದ ಕ್ರಿಯಾಶೀಲತೆಯನ್ನೇ ಕಮರಿಸುತ್ತಿರುವ 'ವ್ಯವಸ್ಥೆ' ಇರುವವರೆಗೆ ಬಂಡಾಯ ಎಂಬುದು ಸೃಷ್ಟಿಶೀಲ ಬರಹಗಾರನ ಅನಿವಾರ್ಯ ಮನೋಧರ್ಮವಾಗಿರುತ್ತದೆ. ಇಂದು ಮನೋವಿಜ್ಞಾನಿಯೂ ಸಮಾಜವಿಜ್ಞಾನಿಯೂ ಆಗಬೇಕಾಗಿರುವ ಬರಹಗಾರನ ಜವಾಬ್ದಾರಿ, 'ವೈಯಕ್ತಿಕ'ವನ್ನೊಳಗೊಂಡ 'ಸಾಮಾಜಿಕ ಜವಾಬ್ದಾರಿ'ಯೇ ಆಗಿರುತ್ತದೆ. ಶೋಷಣೆಯ ಮೂಲಗಳನ್ನು ಗುರುತಿಸಿ, ಅಸಮಾನತೆಯ ಬಗ್ಗೆ ಜನರನ್ನು ಎಚ್ಚರಿಸಿ, ಜನಪರ ಹೋರಾಟಗಳಿಗೆ ಪೂರಕವಾಗಿ ಕೆಲಸ ಮಾಡುವುದು."[೯೦] ಹೀಗೆ ಜನಪರ ಹೋರಾಟಗಳಿಗೆ ಅಣಿಯಾಗುವಾಗ ಸಾಮೂಹಿಕವಾಗಿ ಭಾಗವಹಿಸುತ್ತಿರುವುದು ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ವಿಶಿಷ್ಟವಾಗಿದೆ. ಏಕೆಂದರೆ, "ಈ ಚಳುವಳಿಯ ಬೆಳಕಿನಲ್ಲಿ ವೈಚಾರಿಕತೆಯ ಪಂಜುಗಳನ್ನು ಹಿಡಿದು ಇಂದು ಅನೇಕ ಯುವ ಮನಸ್ಸುಗಳು ಹೋರಾಟದ ಹಾದಿಯನ್ನು ತುಳಿಯುತ್ತಿದ್ದಾರೆ. ಸಮೂಹ ಮಾಧ್ಯಮಗಳ ಮೂಲಕ ಅವರು ಹಳ್ಳಿಗರನ್ನು ಸಾಮಾನ್ಯ ಜನತೆಯನ್ನು ತಲುಪುತ್ತಿದ್ದಾರೆ. ಇಂತಹ ಜನಪರ ನಿಲುವುಗಳನ್ನು ಬೆಳೆಸುತ್ತಿರುವ ದಲಿತ ಬಂಡಾಯ ಚಳವಳಿಗಳ ಕೊಡುಗೆ ಚರಿತ್ರೆಯಲ್ಲಿ ಇಂದು ದಾಖಲಾಗಿದೆ."[೯೧] ಹಾಗಾಗಿ ದಲಿತ ಬಂಡಾಯ ಸಾಹಿತ್ಯ ಚಳವಳಿ ಸಾಮೂಹಿಕ ಹೋರಾಟದ ಮೂಲಕ ಹುಟ್ಟಿಕೊಂಡ ಜನಸಮುದಾಯದ ಸಮಾನತೆಗಾಗಿ ಹಾತೊರೆಯುವ ಹೊಸ ಆಶಯಗಳನ್ನು ಹೊಂದಿವೆ. ಆದ್ದರಿಂದ 'ನಿಜವಾದ ಜನಪರವೆಂದರೆ ಯಾವುದು ಬಡವರ ಪರವಾಗಿ, ದಲಿತರ ಪರವಾಗಿ, ಪ್ರಗತಿಪರವಾಗಿ ಇರುತ್ತದೆಯೋ ಅದನ್ನು ಮಾತ್ರ ಈ ಹೆಸರಿನಲ್ಲಿ ಕರೆಯಬಹುದಾಗಿದೆ."[೯೨]

ಈ ಹಿನ್ನೆಲೆಯಾಗಿ ದಲಿತ-ಬಂಡಾಯ ಕಾದಂಬರಿಗಳಲ್ಲಿ ಜನಮುಖಿ ಹೋರಾಟದ ಪರಿಕಲ್ಪನೆಯನ್ನು ನೋಡಬಹುದು. ಒಂದು ವಿಚಾರ ಹೇಳಬೇಕೆಂದರೆ, ದಲಿತ-ಬಂಡಾಯ ಸಾಹಿತ್ಯ ಚಳವಳಿಯ ಮೂಲ

ಆಶಯವೇ ಜನಪರವಾದದ್ದು. ಹಾಗಾಗಿ ಈ ಕಾದಂಬರಿಗಳು ಸಹ ಜನಪರವಾದವುಗಳಾಗಿವೆ. ಹಾಗೂ ಜನಮುಖಿ ಹೋರಾಟಕ್ಕೆ ಒತ್ತಾಯಿಸುತ್ತವೆ. ಹಾಗಾಗಿ ಕೆಲವು ಕಾದಂಬರಿಗಳು ಬಂಡಾಯದ ಹೊರನೋಟವನ್ನು ತೋರಿಸಿದರೆ, ಕೆಲವು ಕಾದಂಬರಿಗಳು ಬಂಡಾಯದ ಒಳನೋಟಗಳನ್ನು ತಿಳಿಸುತ್ತ ಜನಪರವಾಗುತ್ತವೆ. ದೇವನೂರು ಮಹಾದೇವರ 'ಕುಸುಮ ಬಾಲೆ' ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ' ಅರವಿಂದ ಮೂಲಗತ್ತಿಯವರ 'ಕಾರ್ಯ' ಮನಜರ 'ಮಾಗಿ' ಕಾದಂಬರಿಗಳು ಬಂಡಾಯದ ಒಳನೋಟಗಳನ್ನು ತಿಳಿಸುತ್ತವೆ. ಈ ಕಾದಂಬರಿಗಳು ಕೆಳವರ್ಗಗಳ ಶ್ರಮ ಬದುಕಿನ ವಿವಿಧ ಆಯಾಮಗಳನ್ನು ವಿವರಿಸುತ್ತವೆ. ಆ ಮೂಲಕ ತಮ್ಮ ಸಮುದಾಯದ ಸಂಸ್ಕೃತಿಯಲ್ಲಿ ಅಡಗಿರುವ ಸಂಪ್ರದಾಯ, ಮೌಢ್ಯತೆ, ಅಜ್ಞಾನ, ಮುಂತಾದ ಘಟನೆಗಳನ್ನು ತೆರೆದು ಬಯಲುಗೊಳಿಸುತ್ತಲೇ ಅವುಗಳ ವಿರುದ್ಧ ಮೌನವಾಗಿ ಪ್ರತಿಭಟಿಸುತ್ತಾ ಜನಮುಖಿಯಾಗುತ್ತದೆ.

ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯು ಬಂಗಾರೆವ್ವನ ಸಾವಿನ ಆ ನಂತರದ ಕಾರ್ಯಗಳೇ ಇಲ್ಲಿ ಪ್ರಧಾನ ವಸ್ತು. ಸಾಂಪ್ರದಾಯಿಕ ನಿಯಮಗಳಡಿಯಲ್ಲಿ ಕಟ್ಟುಬದ್ಧವಾಗಿ ನೆರವೇರಿಸಬೇಕಾಗುತ್ತದೆ. ಲೇಖಕರು ಸಮಾಜ ಉಂಟುಮಾಡಿದ ಅರ್ಥಹೀನ ಆಚರಣೆಯನ್ನು ವಿವರಿಸುತ್ತಾರೆ. ಹಾಗೆ ಆಚರಣೆಯನ್ನು ವಿವರಿಸುತ್ತಲೇ ವಿರೋಧ ವ್ಯಕ್ತಪಡಿಸುತ್ತಾರೆ. ಹಾಗಾಗಿ ಇವರಿಗೆ ಬಂಗಾರವ್ವನ ಸಾವು ಮುಖ್ಯವಾಗುವುದಿಲ್ಲ, ಬದಲಾಗಿ ಎಮ್ಮೆಯನ್ನು ಹುಡುಕುವ ಅಕ್ಕವ್ವ ಮುಖ್ಯವಾಗುತ್ತಾಳೆ. ಮಲ್ಲಪ್ಪನ ಕೈಯಿಂದ ಕುಳ್ಳಗ್ಗಿ ಜಾರುತ್ತದೆ; ಎಲ್ಲಕ್ಕಿಂತ ಮಿಗಿಲಾಗಿ ಕುಣಿಯಿಂದ ಹೆಣವೇ ಹೊರಕ್ಕೆ ಬಿದ್ದಿರುತ್ತದೆ. ಈ ನಿಟ್ಟಿನಲ್ಲಿ ಲೇಖಕರು ಒಂದು ಜನಾಂಗದ ಆಚರಣೆಯನ್ನು ಛಿದ್ರಗೊಳಿಸುತ್ತಾರೆ. ಈ ಕಾದಂಬರಿಯಲ್ಲಿ ಬರುವ ಮಿದುಳು ತಿನ್ನುವ ಕೃತ್ಯವು ಮುಳ್ಳೂರರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲೂ ಬರುತ್ತದೆ. ಈ ಘಟನೆಯು ಮುಳ್ಳೂರು ಅವರ ಕಾದಂಬರಿಯ ಮೊದಲ ಭಾಗದಲ್ಲಿ ಭೂತ ಕಾಲದ ಕಥೆಯಾಗಿ ಮೈಪಡೆದಿದೆ. ಇಲ್ಲಿ ಮಿದುಳು ಭಕ್ಷಕ ರಾಜ ತನ್ನ ಹಿತಾಸಕ್ತಿಗಾಗಿ ಅಸಂಖ್ಯಾತ ಬಡವರ ಮಿದುಳನ್ನು ಬಲಿತೆಗೆದುಕೊಳ್ಳುತ್ತಿರುತ್ತಾನೆ. ರಾಕ್ಷಸಿಯ ಸಾಕು ಮಗ ಇದನ್ನು ವಿರೋಧಿಸುತ್ತಾನೆ.

"ಮನುಷ್ಯನಿಗೆ ಮಿದುಳು ಇರುವುದು ಆರೋಗ್ಯಕರ
ಯಾಕಂದ್ರೆ ಮನುಷ್ಯನಿಗೆ ಮಿದುಳೂ ಇದ್ರೆ ಬಡವನಾದ್ರೂ
ರಾಜನ ಮನೇಲೂ ಊಟ ಮಾಡ್ಬಹುದು
ರಾಣಿಯ ಕೈಲೇ ಮಾಡ್ಬಹುದು"[೯]

ಎನ್ನುವ ಮಾತುಗಳು ಮೌಢ್ಯಕ್ಕೊಳಗಾದ ಜನರಲ್ಲಿ ಉಂಟಾದ ಜಾಗೃತಿಯನ್ನು ತಿಳಿಸುತ್ತವೆ. ಶೋಷಣೆಯನ್ನು ಸಹಿಸದ ಜನ ಅಕ್ಷರಸ್ಥರಾಗಿ ನ್ಯಾಯ ಕೇಳುವ ಹೊಸತನದ ಜೀವನದೆಡೆಗೆ

ಸಾಗುವುದನ್ನು ಗುರುತಿಸಬಹುದು. ಮುಂದೆ ರಾಣಿಗೆ ತನ್ನ ಮಗ ಬಾಲಕನನ್ನು ರಾಜನ ಕೊಲೆಗೆಂದು ಕಳುಹಿಸುತ್ತಾಳೆ.

> "ಬಡೂಕ ಮಿದುಳ ಕೇಳುವ
> ರಕ್ಕಸ ರಾಜನ ತಲೆಯ ತರುದು
> ತಾರಯ್ಯ ಮಗನೆ ಎಂದು...."[೬೪]

ಕಾದಂಬರಿಕಾರರು ಸಮಾಜದ ಸಮಾನತೆಯನ್ನು ಬಸುರಾಜನ ಪಾತ್ರದ ಮೂಲಕ ಪ್ರಶ್ನಿಸಲು ಪ್ರಯತ್ನಿಸುತ್ತಾರೆ. ಬಸುರಾಜು ಹಿಂಸೆಯನ್ನು ಹಿಂಸೆಯಿಂದಲೇ ಸಾಧಿಸಬೇಕೆಂಬ ಧೋರಣೆ ಹೊಂದಿರುವವನಾಗಿರುತ್ತಾನೆ. ಹಾಗಾಗಿ ದಲಿತ ವರ್ಗದ ಹೆಣ್ಣಾದ ಕೆಂಚಿಯನ್ನು ಅತ್ಯಾಚಾರ ಮಾಡಲು ಬಂದ ಚಂದ್ರಯ್ಯನನ್ನು ಹೊಡೆದು, ಅವನ ಹೆಂಡತಿಯನ್ನು ಆತನೆದುರಿಗೆ ಅತ್ಯಾಚಾರವೆಸಗುತ್ತಾನೆ, ರಂಗ-ರಂಗಿಯರ ಸಮಸ್ಯೆಯಲ್ಲಿಯೂ ಪಾಲ್ಗೊಳ್ಳುತ್ತಾನೆ. ಹೀಗೆ ಕಾದಂಬರಿಯುದ್ದಕ್ಕೂ ಪ್ರತಿಭಟನೆ ಮೂಲಕ ಜನಪರ ಮೌಲ್ಯಗಳಿಗಾಗಿ ಹೋರಾಡುತ್ತಾನೆ. ಆದರೆ 'ಕುಸುಮ ಬಾಲೆ'ಯಲ್ಲಿ ಈ ತರಹ ಪ್ರತಿಭಟನೆ ಕಾಣಸಿಗುವುದಿಲ್ಲ. ದೇವನೂರು ಸೃಷ್ಟಿಸಿದ ಕೆಳವರ್ಗದ ಪಾತ್ರಗಳು ವ್ಯವಸ್ಥೆಯ ಅಡಿಯಲ್ಲಿಯೇ ಇದ್ದು ಆ ವ್ಯವಸ್ಥೆಯ ಪ್ರತಿನಿಧಿಗಳಿಗೆ ತೀವ್ರ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ಆ ಮೂಲಕ ಜನಪರ ಆಶಯಗಳನ್ನು ಎತ್ತಿಹಿಡಿಯುತ್ತಾರೆ. "ಜನಪರ ನಿಲುವುಗಳಲ್ಲಿ ಬಂಡಾಯ ಕೇವಲ ಸಿಟ್ಟು-ನೋವು-ಪ್ರತಿಭಟನೆ ಸಾಹಿತ್ಯವಾಗಲಾರವು. ಈ ಧಾತುಗಳು ಅನುಭವದ ಮೂಸೆಯಲ್ಲಿ ಕಾದು, ಅರ್ಥಪೂರ್ಣ ಅಭಿವ್ಯಕ್ತಿಯನ್ನು ಪಡೆದಾಗ ಬಂಡಾಯ ಸಾಹಿತ್ಯ ಸೃಷ್ಟಿಯಾಗುತ್ತದೆ. ಬಂಡಾಯ ಸಾಹಿತ್ಯದಲ್ಲಿ ಬರೀ ಪ್ರತಿಭಟನೆ-ರೊಚ್ಚು ಆವೇಶ ಇರಬೇಕೆಂದೇನೂ ಇಲ್ಲ. ವ್ಯವಸ್ಥೆ ಬದಲಾವಣೆಗಾಗಿ ಹಾತೊರೆಯುವ ಯಾವುದೇ ತಣ್ಣನೆಯ ವಿಚಾರ ಕೂಡ ಬಂಡಾಯ ಸಾಹಿತ್ಯವಾಗಬಲ್ಲದು"[೬೫] ಹಾಗಾಗಿ ದೇವನೂರರು ಬಂಡಾಯದ ಈ ಸಿದ್ಧಾಂತಗಳೊಂದಿಗೆ ಕುಸುಮಬಾಲೆಯ ತಾತ್ವಿಕತೆಯನ್ನು ಹದಗೊಳಿಸುತ್ತಾರೆ. ಆ ಮೂಲಕ ಸಾಮಾಜಿಕ ಜಾಗೃತಿಗಾಗಿ ಹಂಬಲಿಸುತ್ತಾರೆ.

ಮನಜರ 'ಮಾಗಿ' ಕಾದಂಬರಿಯಲ್ಲಿ ದಲಿತ ಕುಟುಂಬದ ಆಂತರಿಕ ಕಲಹಗಳನ್ನು ತಿಳಿಸುತ್ತಲೇ, ಆ ಕಲಹದಿಂದ ಮನೆ ಒಡೆದು ಹಾಳಾಗುವ ಚಿತ್ರಣವನ್ನು ನೀಡುತ್ತಾರೆ. ಈ ಕಾಲಕ್ಕೆ ದಲಿತರಲ್ಲಿಯ ಅಜ್ಞಾನ, ಮೌಢ್ಯತೆಯನ್ನು ಎತ್ತಿಹಿಡಿಯುತ್ತಾರೆ. ಹೀಗಾಗಿ ಕಾದಂಬರಿಯ ಕೇಂದ್ರ ಪಾತ್ರವಾದ 'ಮಾಗಿ' ಈ ಕಲಹದಲ್ಲಿ ಬೆಂದು ಹೋಗುತ್ತಾಳೆ. ಮನುಷ್ಯನ ಸಣ್ಣತನವನ್ನು ಮಾಗಿ ತನ್ನ ಆದರ್ಶದಿಂದಲೇ ಸೋಲಿಸುತ್ತಾಳೆ. ಆದರೆ ಮಾಗಿಯ ಬದುಕು ದುರಂತವಾದಾಗ ಸಮಾಜದಲ್ಲಿಯ ಇತರ ಜನಗಳು ಅವಳ ದುಃಖಕ್ಕೆ ಸ್ಪಂದಿಸುವುದು ಗ್ರಹಿಕೆಗೆ ಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಲಾಯರ್ ಗುಂಡಪ್ಪನವರ ಸಹಾಯದಿಂದ ಮಾಗಿ ತನ್ನ ಭಾವನಿಂದ ಆಸ್ತಿಯನ್ನು ಪಡೆಯುತ್ತಾಳೆ. ಆ ಮೂಲಕ

ಚಾಮನ ಶೋಷಕ ಪ್ರವೃತ್ತಿ ಕುಗ್ಗಿ ಬಿಡುತ್ತದೆ. ಹೀಗೆ ಕಾದಂಬರಿಯುದ್ದಕ್ಕೂ ಜನಪರ ಆಶಯಗಳನ್ನು ಪ್ರಕಟಿಸುತ್ತದೆ. ಈ ಕಾದಂಬರಿ ಪ್ರಮುಖವಾಗಿ ಸ್ತ್ರೀ ಸಂವೇದನೆಯನ್ನು ಪ್ರಕಟಿಸುತ್ತದೆ. 'ಗತಿ' ಕಾದಂಬರಿಯು ಕೂಡಾ ದಲಿತವರ್ಗದ ಸ್ತ್ರೀ ಸಂವೇದನೆಯನ್ನು ಪ್ರಕಟಿಸುತ್ತದೆ. ಆ ಮೂಲಕ ವ್ಯವಸ್ಥೆಯ ಅಡಿಯಲ್ಲಿ ಶೋಷಿತಳಾದ ಸೋನಿ, ಲಚ್ಚಿಯಂತವರಿಗೆ ಹೊಸ ಬದುಕನ್ನು ಕೊಡಿಸುವ ಸಾಹಸ ಮಾಡಿದ್ದಾರೆ. ಅಲ್ಲದೇ ಅಜ್ಞಾನದಿಂದ ತುಂಬಿದ 'ದಿಬ್ಬ'ದ ತಾಂಡ್ಯವನ್ನು ವಿಮೋಚನೆಗೊಳಿಸುವತ್ತ; ಚಂದುವಿನ ಮೂಲಕ ಹೊಸ ಶಿಕ್ಷಣದ, ಮೂಢನಂಬಿಕೆಯಿಂದಾಗುವ ಪರಿಣಾಮಗಳ ಅರಿವನ್ನು ಮೂಡಿಸುತ್ತಾರೆ. ಹೀಗಾಗಿ ಕಾಶಪ್ಪನ ಡಾಂಭಿಕ ಪೂಜಾರಿತನವನ್ನು ಬಯಲುಗೊಳಿಸಿ, ಅವನ ಮೂಲಕ ನಡೆಯುತ್ತಿದ್ದ ಅಮಾಯಕ ಸ್ತ್ರೀಯರ ಶೋಷಣೆಯು ಹೋಗಲಾಡಿಸುತ್ತ ಜನಮುಖಿಯಾಗುತ್ತಾನೆ.

ಹೀಗೆ ಮೌಢ್ಯದಿಂದ ಕೂಡಿದ ದಿಬ್ಬದ ಜನರ ಮನಸ್ಸು ಪರಿವರ್ತಿಸುವಲ್ಲಿ ಅನವರತವಾಗಿ ಹೋರಾಡುತ್ತಾನೆ. 'ಮಾಗವ್ವ'ಳ ಬದುಕು ಕೂಡಾ ದುರ್ಬಲವಾದಾಗ, ಅದರಲ್ಲೂ ಮಾಗವ್ವನ ಭಾವ ಚಾಮನ ದೌರ್ಜನ್ಯ ಅತಿಯಾದಾಗ, ಊರಿನ ಜನ ಪಂಚಾಯ್ತಿ ನಡೆಸುತ್ತಾರೆ; ಇಲ್ಲಿಯೂ ಚಾಮನ ಅಹಂಕಾರವೇ ಮೆರೆಯುತ್ತದೆ. ಲಾಯರ್ ಗುಂಡಪ್ಪನ ಒಂದೇ ಒಂದು ಕೋರ್ಟ್ ನೋಟಿಸ್ ಕೊಟ್ಟಾಗ ಚಾಮ ಕಕ್ಕಾವಿಕ್ಕಿಯಾಗಿ ಬಿಡುವನು ಎಂಬುವಲ್ಲಿಯೂ ಚಂದುವಿನ ಶಿಕ್ಷಣ, ಅರಿವಿನಿಂದ ಸ್ತ್ರೀ ವಿಮೋಚನೆಯಾಯಿತು ಎಂಬುವಲ್ಲಿ ಶಿಕ್ಷಣದ ಬಗ್ಗೆ ಜಾಗೃತಿಯನ್ನು ಮೂಡಿಸುವುದರ ಮೂಲಕ ಲೇಖಕರು ಜನಪರವಾದ ಎಚ್ಚರವನ್ನು ಹುಟ್ಟುಹಾಕುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿರುವಂತೆ, ಕುಂ.ವೀ.ಯವರ 'ಕಪ್ಪು' ಕಾದಂಬರಿಯ ಗೌರಿ ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಅಮಾನವೀಯ ಕೃತ್ಯಕ್ಕೊಳಗಾಗಿ ಇತ್ತ ಬದುಕಲಾರದೇ ಅತ್ತ ಸಾಯಲಾರದಂಥ ಸ್ಥಿತಿಯಲ್ಲಿ ನರಳಿ ಹೋಗುತ್ತಾಳೆ. ಕಾದಂಬರಿಕಾರರು ಅಂಥ ಸ್ಥಿತಿಯಲ್ಲೂ ಆಕೆಗೆ ಹೊಸ ಬದುಕನ್ನು ಕೊಡಿಸಬೇಕೆಂಬುದು ಒಂದು ಕಡೆಯಾದರೆ ಅಂಥ ಆಚರಣೆಯನ್ನು ನಾಶಗೊಳಿಸಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. ಹಾಗಾಗಿ ಬಸವಿ ಬಿಡುವ ಸಂಪ್ರದಾಯವನ್ನು ಯಾರು ವಿರೋಧಿಸುವುದಿಲ್ಲ. ಈ ಇಕ್ಕಟ್ಟಿನಲ್ಲಿ ಲೇಖಕರು 'ಕೋಣ'ದ ಮೂಲಕ ಮಾರಿದೇವಿಯ ಮೂರ್ತಿಯನ್ನು ಛಿದ್ರಗೊಳಿಸುತ್ತಾರೆ. ಇದು ಅಂತಿಮವಾಗಿ ಹಿಂಸೆಯ ಮೂಲಕವೇ ಹೋರಾಟ ಮಾಡಬೇಕಾಗಿದೆ ಎನ್ನುವ ತೀವ್ರತೆಯನ್ನು ಕಟ್ಟಿಕೊಡುತ್ತಾರೆ.

"ನಾಯಿಯೊಂದು ನೆಲಕ್ಕೆ ಉರುಳಿದ್ದ ಮಾರಮ್ಮನನ್ನೆ ಹೆಣವೆಂದು ಭಾವಿಸಿ ಎಳೆಯತೊಡಗಿತು. ಮೈ ಮ್ಯಾಲೆ ಅಲ್ಲಲ್ಲಿದ್ದ ರಕೂತ ಕಲೆಗಳನ್ನು ನೆಕ್ಕಿದ ಮ್ಯಾಲೆ ಅದಕ್ಕೆ ಗೊತ್ತಾಯಿತು. ಇದು ರಕ್ತ ಮಾಂಸದ ಹೆಣವಲ್ಲ, ಕೆಸರು ಸೆಗಣಿಯಿಂದ ಮಾಡಿದ ಕೇವಲ ಗೊಂಬೆ ಅಂತ"[೯೬] ಬರೆಯುತ್ತಾರೆ.

ಹೀಗೆ ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬಂದ ಆಚರಣೆಯನ್ನು ಪ್ರತಿಮೆಗಳ ಮೂಲಕ ನಾಶಗೊಳಿಸುತ್ತಾ ಜನಮುಖಿ ಹೋರಾಟಕ್ಕೆ ಒತ್ತಾಯಿಸುತ್ತಾರೆ. ಬಸವರಾಜ ಸಬರದ ಅಭಿಪ್ರಾಯ ಪಡುವಂತೆ, "ಕುಂಬಾರ ವೀರಭದ್ರಪ್ಪನರ 'ಕಪ್ಪು' ಕಾದಂಬರಿ ಜನಪರ ಆಶಯಗಳನ್ನು ದಾಖಲಿಸಬಹುದಾದ ಮಹತ್ವದ ಕೃತಿ. ಬಂಡಾಯ ಕೃತಿಗಳ ಒಟ್ಟು ಪ್ರತಿನಿಧಿಯಂತಿರುವ ಈ ಕಾದಂಬರಿ ಮಾಡಬಹುದಾದ ಪರಿಣಾಮ ತುಂಬಾ ತೀವ್ರತರವಾದುದು. ಕುಂ.ವೀ. ಅವರ ಮೊದಲ ಕಾದಂಬರಿ ಇದಾದರೂ, ಊಳಿಗಮಾನ್ಯ ಸಂಸ್ಕೃತಿಯ ನೈಜ ದಾಖಲೆಗೆ ಇಂದಿಗೂ ಕೂಡ ಇದನ್ನೇ ಹೆಸರಿಸಬಹುದಾಗಿದೆ. ಬಂಡಾಯದ ಪ್ರಖರತೆಯಲ್ಲಿಯೇ ಇಲ್ಲಿ ಮುಗ್ಧತೆಯ ಕನಸುಗಳು ಅರಳಿವೆ. ಉರಿವ ಕೆಂಡದ ನಡುವೆ ಪಲ್ಲವಿಸಬಹುದಾದ ಆಶಯವೂ ಇದೆ. ಕಾಗೆ-ಗೂಬೆಗಳ ನಡುವೆ ಕೋಗಿಲೆಯ ಸ್ವರಕ್ಕಾಗಿ ಹುಡುಕಾಟ ನಡೆದಿದೆ. ಬಂಡಾಯದ ಅನೇಕ ಸೂಕ್ಷ್ಮ ಸಂಗತಿಗಳನ್ನು, ಜನಪರ ನಿಲುವಿನ ಅನೇಕ ಮಗ್ಗಲುಗಳನ್ನು ಕುಂ.ವೀ.ಇಲ್ಲಿ ಕಲಾತ್ಮಕವಾಗಿ ದಾಖಲಿಸಿದ್ದಾರೆ."[೯೭]

ಹೀಗೆ ದಲಿತ ಬಂಡಾಯ ಕಾದಂಬರಿಗಳು ಜನಪರ ಹೋರಾಟವನ್ನು ದಲಿತ ಬದುಕಿನ ಸಂವೇದನೆಗಳು, ಗ್ರಾಮೀಣ ಬದುಕಿನ ಸಂವೇದನೆಗಳು ಮತ್ತು ಮಹಿಳಾ ಸಂವೇದನೆಗಳು, ಈ ಸಂವೇದನೆಗಳ ಮೂಲಕ ಪ್ರಕಟವಾಗುವ ಸಾಮಾಜಿಕ ಕಾಳಜಿ, ಸಮಾನತೆಗಾಗಿ ಹೋರಾಟ, ಶೋಷಣೆಯ ವಿರುದ್ಧ ಪ್ರತಿಭಟನೆ, ಅರಿವಿನ ಸ್ಫೋಟ, ಮಾನವೀಯತೆಯಂತಹ ಮೌಲ್ಯಗಳ ಸ್ಥಾಪನೆ ದಲಿತ ಬಂಡಾಯ ಕಾದಂಬರಿಗಳ ಸಾಧನೆಗಳಾಗಿವೆ. ಆ ಮೂಲಕ ಜನಮುಖಿ ಹೋರಾಟಕ್ಕೆ ವೇದಿಕೆಯನ್ನು ಕಟ್ಟಿಕೊಳ್ಳುತ್ತವೆ. ಪರ್ಯಾಯ ಹುಡುಕಾಟದತ್ತ ಮುಖಮಾಡುತ್ತವೆ.

## ಅಂತರ್ಮುಖಿ ಹೋರಾಟಕ್ಕೆ ಸ್ಥಿರತೆ

ದಲಿತ ಬಂಡಾಯ ಕಾದಂಬರಿಗಳು ಹೀಗೆ ಜನಮುಖಿಯಾಗುತ್ತಾ ಅಂತರ್ಮುಖಿ ಹೋರಾಟಕ್ಕೂ ಸ್ಥಿರತೆಯನ್ನು ತಂದುಕೊಳ್ಳುವುದನ್ನು ಕಾಣುತ್ತೇವೆ. ಇದೇ ಕೆಳವರ್ಗದ ಆಂತರಿಕ ಎಚ್ಚರವಾಗಿದೆ ಕೂಡ. ಕಾದಂಬರಿಕಾರ ಕೆಳವರ್ಗಗಳ ಬದುಕನ್ನು ದಾಖಲು ಮಾಡುತ್ತಲೇ ಆ ಸಂಸ್ಕೃತಿಯಲ್ಲಿ ಜಡ್ಡುಗಟ್ಟಿದ ಸಂಪ್ರದಾಯ, ಆಚರಣೆ, ಅಜ್ಞಾನ ಮುಂತಾದವುಗಳ ವಿರುದ್ಧವಲ್ಲದೆ ಶೋಷಣೆಗೆ ಕಾರಣವಾದ ಊಳಿಗಮಾನ್ಯ ವ್ಯವಸ್ಥೆಯ ಬಗ್ಗೆ ಒಳಹೋರಾಟವಿದೆ. "ಸಾಹಿತ್ಯ ಸೃಷ್ಟಿಯೊಂದೇ ಬಂಡಾಯ ಸಾಹಿತ್ಯ ಚಳವಳಿಯ ಮುಖ್ಯ ಗುರಿಯಲ್ಲ. ಬದುಕು ಹಸನಾಗಬೇಕು; ಅಸಮಾನತೆ-ಅನಕ್ಷರತೆಗಳಿಂದ ಮುಕ್ತವಾದ ಬದುಕೇ ಸ್ವತಃ ಸೃಜನಶೀಲ ಗುಣಗಳನ್ನು ಹೊಂದಿರಬೇಕು. ಇದಕ್ಕೆ ಮೊದಲ ಪ್ರಾಶಸ್ತ್ಯ ಈ ಮೂಲಕ ಮೊದಲು ನಾವು ಮನುಷ್ಯರಾಗಬೇಕು; ನಮ್ಮೊಳಗಿನ ನಾಯಿ, ನರಿ, ಹುಲಿ, ಸಿಂಹಗಳನ್ನು ಓಡಿಸಿ,

ಪುರೋಹಿತಶಾಹಿ ಬಂಡವಾಳಶಾಹಿ ವ್ಯಗೀಯತೆಯನ್ನು ಮೂಲೆಗುಂಪು ಮಾಡಿ ನಿಜ ಮನುಷ್ಯರಾಗಬೇಕು.... ಈ ದೃಷ್ಟಿ ದರ್ಶನವನ್ನು ಒಳಗೊಂಡ ಬಂಡಾಯ ಸಾಹಿತ್ಯ ಚಳವಳಿಯು ಹೋರಾಟ ಮತ್ತು ಅಭಿವ್ಯಕ್ತಿಗಳನ್ನು ಒಟ್ಟಿಗೇ ಸ್ವೀಕರಿಸಿದೆ, ಈ ಮೂಲಕ ಬದುಕಿನ ಹೊಸ ಸಂವಿಧಾನವನ್ನು ರೂಪಿಸುತ್ತ ಹೊಸ ಸಂಸ್ಕೃತಿಯ ದಿಕ್ಕನ್ನು ಕಾಣಿಸುತ್ತದೆ''[೯೮] ಎಂಬುದು ಈ ಚಳುವಳಿಯ ಸೈದ್ಧಾಂತಿಕ ಹಿನ್ನಲೆಯಲ್ಲಿಯೇ ಕಾದಂಬರಿಗಳು ಒಳಹೋರಾಟದ ಕಡೆ ಮುಖಮಾಡುತ್ತಿವೆ.

ಬರಗೂರರು ಹೇಳುವಂತೆ ''ಬಂಡಾಯವನ್ನು ಒಂದು ಮನೋಧರ್ಮವಾಗಿಸಿಕೊಳ್ಳುವ ಒಳಹೋರಾಟದ ನಿರಂತರತೆಯಲ್ಲಿ ಬದುಕನ್ನು ನೋಡುವ ಒಳಗಾಗಿರಿಕೆಬೇಕು. ಆಗ ಅರಳಿದ ಹೂವಾಗಲಿ, ಬಿರಿಯುವ ಮೋಡವಾಗಲಿ, ಬೆಳೆಯುವ ಮರವಾಗಲಿ, ಇಂಥ ಯಾವುದೇ ಆಗಲಿ, ಒಳಗನ್ನು ಹಾದು ಉಸಿರೊಳಗೊಂದಾಗಿ ಹೊರ ಬರುವುದರಿಂದ ಬಂಡಾಯದ ಅಂತರ್ಗತ ನೆಲೆ ತಾನಾಗಿಯೇ ಇರುತ್ತದೆ.''[೯೯] ಎಂಬುವಲ್ಲಿ ಕಾದಂಬರಿ ಪ್ರಕಾರವು ಸಾಮಾಜಿಕ ಅಂತರ್ ಸಂಬಂಧಗಳ ಶೋಧನೆ ಮಾಡುತ್ತದೆ. ಹೀಗಾಗಿ ಕಾದಂಬರಿಕಾರರು ಶೋಷಣೆಗೊಳಗಾಗುವ ಪಾತ್ರಗಳ ಮೂಲವನ್ನು ಕೆದಕುತ್ತಾರೆ. ಆ ಮೂಲಕ ತನಗೆ ಶೋಷಣೆಯ ಕಾರಣದ ಅರಿವನ್ನು ಮೂಡಿಸುತ್ತಾರೆ. ಕೇಶವಶರ್ಮ ಅಭಿಪ್ರಾಯ ಪಡುವಂತೆ ''ಒಳಚೈತನ್ಯಗಳಲ್ಲಿ (Instra structure) ಬದಲಾವಣೆಯಾಗದೆ, ಮೇಲು ಚೈತನ್ಯದಲ್ಲಿ (Super Structure) ಬದಲಾವಣೆಯನ್ನು ಬಯಸುವುದು ಕೇವಲ ಆಂಶಿಕ ಬದಲಾವಣೆಯಷ್ಟೆ.''[೧೦೦] ಆಗುತ್ತದೆ. ಹಾಗಾಗಿ ಶೋಷಿತರ ಮನಸ್ಸಲ್ಲಿರುವ ಅಪರಾಧಿ ಭಾವನೆಗಳನ್ನು ಕೀಳಿರಿಮೆಯನ್ನು ತೊಲಗಿಸುವ ಕಾರ್ಯ ಕಾದಂಬರಿಕಾರರು ಮಾಡಿದ್ದಾರೆ. ಇಂಥ ಅಂತರ್ಮುಖಿ ಹೋರಾಟಗಳನ್ನು ಕಾದಂಬರಿಗಳಲ್ಲಿ ತಾತ್ವಿಕವಾಗಿ ಈಗ ನೋಡಬಹುದಾಗಿದೆ.

ಈ ಹಿನ್ನಲೆಯಲ್ಲಿ 'ಕಾರ್ಯ' ಕಾದಂಬರಿಯಲ್ಲಿ ಸಂಪ್ರದಾಯವೆನ್ನುವುದು ಎಷ್ಟು ಕಠೋರವಾದದ್ದು ಎಂಬುದು ವಿವಿಧ ಸನ್ನಿವೇಶಗಳಲ್ಲಿ ಗೋಚರಿಸುತ್ತದೆ. ಬಂಗಾರವ್ವನ ಸಾವಿನ ಕಾರ್ಯವು ಮೂರನೇ ದಿನದಿಂದ ಐದನೇ ದಿನಕ್ಕೆ ಮುಂದೂಡುತ್ತದೆ. ಈ ನಡುವೆ, ಕಾರ್ಯಕ್ಕೆ ಪಾಲ್ಗೊಂಡಿದ್ದ ಮಹಿಳೆಯರು ಇವರ ಕಟು ಸಂಪ್ರದಾಯವನ್ನು ವಿರೋಧಿಸುತ್ತಾರೆ. ಮನೆಯಲ್ಲಿ ಮಕ್ಕಳು ಹಸಿವಿನಿಂದ ಬಳಲುತ್ತಿರುವುದನ್ನು ನೆನೆದು ಕಾರ್ಯದಲ್ಲಿ ಪಾಲ್ಗೊಂಡಿದ್ದ ಸ್ತ್ರೀಯರು ಮನೆಗೆ ತೆರಳುತ್ತಾರೆ.

"ದೊಡ್ಡವ್ರು ನಾವು ಹ್ಯಾಂಗಾರ ತಡದೇವು
ಸಣ್ಣ ಮಕ್ಕಳು ಏನ ತಡಿಬೇಕು''[೧೦೧]

ಎನ್ನುತ್ತಾ ಕಾರ್ಯದ ನೆವದಲ್ಲಿ ಮಚಗಾರ ಪುರುಷರು ಹೆಂಡ ಕುಡಿದು ಒಬ್ಬರಿಗೊಬ್ಬರು ಸಂಬಂಧವಿಲ್ಲದೆ ಏನೇನೋ ಮಾತನಾಡುತ್ತಿರುತ್ತಾರೆ. ಇದನ್ನು ಸಹಿಸದ ಮಹಿಳೆಯರು ಮನೆಗೆ ಬಂದು

ಸಂಪ್ರದಾಯದ ನಿರ್ಬಂಧವನ್ನು ಕುರಿತು ತಮ್ಮ ತಮ್ಮಲ್ಲೇ ಚರ್ಚಿಸತೊಡಗುತ್ತಾರೆ. ಪಕ್ಕಿರಪ್ಪನ ಮಡದಿ ಸಂಗನಬಸವ್ವ ಆಡುವ ಮಾತು ಹೀಗಿದೆ.

"ಏನ ಸುಮ್ಮನಿರ ಅಂತಿಯ ಯಕ್ಕಾ ನೀನು?
ಊರದ ಕೊಳ್ಳಗಿ, ಹಾಕ್ಕೊಂಡು
ನಿಶೆದಾಗ ನ್ಯಾಯ ಮಾಡ್ತರಂತ ನ್ಯಾಯ"[೧೦೨]

ಎನ್ನುವ ಪ್ರತಿಭಟನೆಯು ಅಂತರ್ಗತ ನೆಲೆಯಿಂದ ಮೂಡಿದೆ. ಇಂಥ ಹೋರಾಟ ಕಾದಂಬರಿಯ ವಿವಿಧ ಸನ್ನಿವೇಷದ; ಘಟನೆಯಲ್ಲಿ ಗ್ರಹಿಕೆಗೆ ಬರುತ್ತದೆ. ಇಲ್ಲಿ ಕಾದಂಬರಿಕಾರ ಸಂಪ್ರದಾಯದ ಪರ ನಿಲ್ಲದೇ ಆ ಸಂಪ್ರದಾಯದ ವಿರುದ್ಧ ಇರುವುದನ್ನು ಮೇಲಿನ ಅಂಶಗಳಿಂದ ಗಮನಿಸಬಹುದು. ಇಂಥ ಅಂತರ್ಗತ ಹೋರಾಟವು ಪ್ರಮುಖವಾಗಿ ಸ್ತ್ರೀ ಪಾತ್ರಗಳಲ್ಲೇ ಕಂಡುಬರುತ್ತದೆ. ಕಾದಂಬರಿಕಾರರು ಇಂಥ ಹೋರಾಟವನ್ನು ವಿಭಿನ್ನ ಸ್ವರೂಪದಿಂದ ಕಟ್ಟಿಕೊಡುತ್ತಾರೆ. ಬರಗೂರರ 'ಸೂರ್ಯ' ಕಾದಂಬರಿಯ ನಾಯಕಿ ಸೀತಕ್ಕಳ ಪ್ರತಿಭಟನೆ ಲೈಂಗಿಕ ರೋಗದಿಂದ ಕೂಡಿದ ಜಮೀನ್ದಾರನ ವಿರುದ್ಧ ಒಳಹೋರಾಟವಿದೆ. ಹಾಗಾಗಿ ತಾನು ಕರಿಯನೊಂದಿಗೆ ಹೊಂದಿದ ಸಂಬಂಧವನ್ನು ಗಟ್ಟಿಗೊಳಿಸುತ್ತಾಳೆ. ಆದರೆ "ನಂಗಿನ್ನೇನು ಬ್ಯಾಡ, ಗಂಡ ಬೇಕು, ಗಂಡ"[೧೦೩] ಎಂದು ತನ್ನ ಇಂಗಿತವನ್ನು ಹೊರಚೆಲ್ಲುವಳು. ಇವಳ ಈ ದೃಢ ನಿರ್ಧಾರದಲ್ಲಿ ಸಫಲಳಾಗುತ್ತಾಳೆ. 'ಕಪ್ಪು'ವಿನ ಗೌರಿ ತಾನು ಬಸವಿಯಾಗದೆ ಮದುವೆಯಾಗಬೇಕೆಂಬ ಅದಮ್ಯ ಆಸೆ ಇಟ್ಟುಕೊಂಡಿರುತ್ತಾಳೆ. ಆದರೆ, ಸಣ್ಣುದ್ರನ ಬಂಧನದಲ್ಲಿ ಸಿಕ್ಕಿಹಾಕಿಕೊಂಡಿರುವಾಗ ತನ್ನ ನಿರ್ಧಾರವನ್ನು ಬದಲಿಸದೇ ಮೌನವಾಗೇ ಪ್ರತಿಭಟಿಸುತ್ತಾಳೆ. ಬಸವಿ ಮಾಡುವ ಸಂದರ್ಭಗಳನ್ನೆಲ್ಲಾ ಮೌನದಿಂದಲೇ ನಿರಾಕರಿಸುತ್ತಾಳೆ. ಈ ಬಂಧನದಿಂದ ತಪ್ಪಿಸಿಕೊಂಡರೂ ಕೊನೆಯಲ್ಲಿ ಆತ್ಮಹತ್ಯೆಯೊಂದಿಗೆ ತನ್ನ ನಿಲುವನ್ನು ಸಮರ್ಥಿಸಿಕೊಳ್ಳುತ್ತಾಳೆ.

ಸೀತಕ್ಕಳ ಈ ಹೋರಾಟದಂತೆ, ಪಾತರಗಿತ್ತಿ ಕಾದಂಬರಿಯ ಗಿರಿಜವ್ವ ಹೋರಾಟಕ್ಕೆ ಇಳಿಯುತ್ತಾಳೆ. "ನಮಗೆ ಗೊತ್ತಾಗದಂಗೆ ಗಂಡಸರು ಮಾಡುತ್ತಾರೆ. ಅವರಿಗೆ ಗೊತ್ತಾಗದಂತೆ ನಾವು ಮಾಡಿದರಾಯ್ತು. ನಮಗೂ ಮಕ್ಕಳು ಬೇಕು ಅವರಿಗೂ ಮಕ್ಕಳು ಬೇಕು ಈ ಗಂಡಸರು ಹುಚ್ಚರು ನಾವು ಸ್ವಲ್ಪ ಜಾಣತನ ಉಪಯೋಗ ಮಾಡಿದರೆ ಅವರಿಗೂ ಆನಂದ ನಮಗೂ ಆನಂದ."[೧೦೪] ಎಂಬುದು ಹೆಣ್ಣು ಭೋಗದ ವಸ್ತುವೆಂದು ಬಗೆದಿದ್ದ ಜಮೀನ್ದಾರಿಕೆಯ ಪುರುಷ ಪ್ರಭುತ್ವವನ್ನೇ ಅಲುಗಾಡಿಸಿದೆ. ಇಂಥ ಹೋರಾಟದ ಪ್ರಕ್ರಿಯೆಯಲ್ಲಿ ದೇವನೂರರ ಕುಸುಮಬಾಲೆಯ ಸ್ತ್ರೀ ಪಾತ್ರಗಳೆಲ್ಲವೂ ಒಳಗಾಗುತ್ತವೆ. ಕೆಂಪಿಯು ಮಕ್ಕಳು ಪಡೆಯುವ ಮನಸ್ಸಿನ ತೊಳಲಾಟವನ್ನು ಇಲ್ಲಿ ನೆನಪಿಸಬಹುದು. ಆದರೆ, ಮೇಲುವರ್ಗದ ಆಚಾರ್ಯರ ಮಗಳಾದ ಭಗವತಿ ಮದುವೆಯಾಗದೇ ಹಾಗೆ ಉಳಿದು, ತಾನು ಋತಿಮತಿಯಾದಾಗ ಕನಸ್ಸಿನಲ್ಲಿ ಅಮಾಸನನ್ನು ನೆನೆಸಿಕೊಂಡು ಸುಖ ಹೊಂದುತ್ತಾಳೆ. ಕನಸ್ಸಿನಲ್ಲಿ

ಕಂಡದ್ದನ್ನು ಬಾಹ್ಯ ಜಗತ್ತಿನಲ್ಲಿ ಅಮಾಸನನ್ನು ವಿರೋಧಿಸುತ್ತಾಳೆ. ಇದಕ್ಕೆ ಜಾತಿ ಎಂಬ ಮಿತಿಯೂ ಇದೆ. ಹಾಗಾಗಿ ಅವಳ ಹೋರಾಟ ಕನಸಾಗಿ ಉಳಿಯುತ್ತದೆ. ಈ ಅಂತರ್ಮುಖಿ ಹೋರಾಟ ಸಂಘಟನೆಯ ನೆಲೆಯದಾಗದಿದ್ದರೂ ಪರಿಣಾಮದ ದೃಷ್ಟಿಯಿಂದ ತೀಕ್ಷ್ಣವಾದದ್ದು.

'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯು ಕೆಳವರ್ಗದ ಕೊರವರ ಅಂತರ್ಮುಖಿ ಹೋರಾಟವನ್ನು ಪ್ರಕಟಿಸುತ್ತದೆ. ಆರ್ಥಿಕವಾಗಿ ದುರ್ಬಲವಾದ ಈ ವರ್ಗ ಪ್ರತಿಷ್ಠಿತ ಮೇಲುವರ್ಗಗಳ ಅಡಿಯಾಳಾಗಿ ದುಡಿಯುತ್ತಿರುತ್ತಾರೆ. ಕೊರವ ಜನಸಮುದಾಯಗಳ ಮೇಲೆ ಪ್ರತಿಷ್ಠಿತ ವರ್ಗ ಒತ್ತಡ ಹೇರುವಾಗ, ಪ್ರತಿಭಟನೆಯ ಧೋರಣೆ ತಾಳುತ್ತಾರೆ. ಕೊರವರಿಗೆ ಬಾವಿಯ ನೀರು ಕುಡಿಯದಂತೆ ಕುಶಾಲಪ್ಪ ಆಜ್ಞೆ ಮಾಡಿದಾಗ, ಸ್ವಾಭಿಮಾನಯುಕ್ತರಾದ ಕೊರವರು ಸ್ವತಃ ಬಾವಿಯನ್ನೇ ತೋಡುತ್ತಾರೆ. ಆ ಮೂಲಕ ಕುಶಾಲಪ್ಪನ ಅಹಂಕಾರವನ್ನು ಅಡಗಿಸಿರುತ್ತಾರೆ. ಆದರೆ, ಈ ಎಲ್ಲ ಹೋರಾಟಕ್ಕಿಂತ ಮುಖ್ಯವಾಗಿ ತಮ್ಮ ಸಮುದಾಯದವರಾದ ಗ್ಯಾನಪ್ಪ, ಮಲ್ಲಪ್ಪನ ವಿರುದ್ಧ ಪ್ರತಿಭಟನೆಗೆ ಇಳಿಯುತ್ತಾರೆ ಈ ವ್ಯಕ್ತಿಗಳು ಸಂಶಾಲಪ್ಪನೆಂಬ ಮತ್ತೊಬ್ಬ ಬಂಡವಾಳಶಾಹಿಯ ಅಡಿಯಾಳುಗಳು. ಹಾಗಾಗಿ ಸಂಶಾಲಪ್ಪನಿಗೆ ಕೊರವರ ನಡುವಿನ ಒಳಸಂಘರ್ಷದ ಸುದ್ದಿಯನ್ನು ಮುಟ್ಟಿಸುತ್ತಿರುತ್ತಾರೆ. ಇವರ ಮೂಲಕವೇ ಆ ಸಮುದಾಯದ ಒಳಗಡೆ ದೇವರು-ಧರ್ಮದ ವಿಷಬೀಜ ಬಿತ್ತಿ ಕೊರವರನ್ನು ಅಂಕುಶದೊಡ್ಡಿಯಿಂದಲೇ ಜಾಗ ಖಾಲಿ ಮಾಡಿಸುತ್ತಾರೆ. ಈ ಸುಳಿವು ತಿಳಿದ ಕುರುಮಯ್ಯ ಮಾರೆಪ್ಪನ ಮೇಲಿಂದ ಗ್ಯಾನಪ್ಪನಿಗೆ 'ಬೇಡಿಕುಕ್ಕ' ಎಂದು ತನ್ನ ಒಳಹೋರಾಟವನ್ನು ವ್ಯಕ್ತಪಡಿಸುತ್ತಾನೆ. ಈ ಹೋರಾಟ ಜಾತಿಸಂಘರ್ಷ, ವರ್ಗ ಸಂಘರ್ಷವಾಗಿ ಪರಿಣಮಿಸುತ್ತದೆ.

"ದಲಿತ ಜನಾಂಗದವರಿಗೆ ರಾಜಕೀಯ ಪ್ರಾತಿನಿಧ್ಯವನ್ನು ಕಟ್ಟಿಸಿಕೊಡಲಾಗಿದೆ. ಇಂದು ರಾಜಕೀಯ ಪ್ರಾತಿನಿಧ್ಯ ದಲಿತ ಜನಾಂಗದಲ್ಲಿಯೇ 'ನವ-ಬ್ರಾಹ್ಮಣ ವರ್ಗವೊಂದನ್ನು ಸೃಷ್ಟಿಸಲು ಮಾತ್ರ ಸಹಕಾರಿಯಾಗಿದೆ.[೧೦೫] ಇಂಥ ನವ ಬ್ರಾಹ್ಮಣನ ಮೂಲಕ ಸಾಮಾಜದಲ್ಲಿ ಬಿಕ್ಕಟ್ಟು ಉಂಟಾಗುವುದು. ಇವರು ಮಾಡುವ ವಂಚನೆಯ ವಿರುದ್ಧ ಒಳಹೋರಾಟವಿದೆ. ಹಾಗಾಗಿ ಶೋಷಿತ ವರ್ಗ ನವ-ಬ್ರಾಹ್ಮಣನನ್ನು ಸಮಾಜದಲ್ಲಿ ಗೌರವಭಾವನೆಯಿಂದ ನೋಡಿಕೊಳ್ಳುತ್ತಿಲ್ಲ.[೧೦೬] ಇದಕ್ಕೆ ಜೀವಂತ ಉದಾಹರಣೆಯೆಂದರೆ, ಬಂಗಾರು ಲಕ್ಷ್ಮಣ್ . ಈ ದಲಿತ ಯುವ ಮೋರ್ಚನಿಗೆ ಬಿ.ಜೆ.ಪಿಯ ರಾಷ್ಟ್ರೀಯ ಅಧ್ಯಕ್ಷರನ್ನಾಗಿ ಮಾಡಿಕೊಂಡು ಇವರ ಮೂಲಕ ದಲಿತ ವರ್ಗದ ಓಟುಗಳನ್ನು ಪಡೆಯುವ ಉದ್ದೇಶವಾಗಿತ್ತು. ಇದು ನೆಪಮಾತ್ರ ಏಕೆಂದರೆ, "ಬಿ.ಜೆ.ಪಿಯಲ್ಲಿ ದಲಿತರಿಗೆ ದೇಹ ಬೆಳೆಸುತ್ತಾರೆ, ತಲೆ ಬೆಳೆಯದಂತೆ ಕಾಯುತ್ತಾರೆ."[೧೦೭] ಹಾಗಾಗಿ ಅತ್ತಸಂಪೂರ್ಣವಾಗಿ ವ್ಯಕ್ತಿತ್ವ ಬೆಳೆಸಿಕೊಳ್ಳಲಾರದೆ

ಇತ್ತ ತನ್ನ ಸಮುದಾಯದವರ ಮನಸ್ಸು ಗೆಲ್ಲಲಾರದೇ ಅತಂತ್ರ ಸ್ಥಿತಿಯಲ್ಲಿರುವನು. ಹಾಗೇ ಗ್ಯಾನಪ್ಪ, ಮಲ್ಲಪ್ಪ, ಚಂದಪ್ಪನಂತಹ ವ್ಯಕ್ತಿಗಳ ವಿರುದ್ಧ ಒಳಹೋರಾಟ ಮಹತ್ವದಾಗಿದೆ.

ದಲಿತ ಬಂಡಾಯ ಕಾದಂಬರಿಕಾರರು ಜಾತಿ, ವರ್ಣಗಳನ್ನು ಪೋಷಿಸುವವರ ವಿರುದ್ಧ ಹೋರಾಟ ಮಾಡುತ್ತಾರೆ. ಪಾವಿತ್ರ್ಯದ ಕಲ್ಪನೆಯಲ್ಲಿ ಬೀಗುತ್ತಿದ ಮೇಲು, ಜಾತಿ ವರ್ಗಗಳ ಪಾವಿತ್ರ್ಯವನ್ನೇ ಪ್ರಶ್ನಿಸಿದ್ದಾರೆ. ಆ ಮೂಲಕ ಯಾವುದು ಅಪವಿತ್ರ್ಯವೆಂದು ದೂರೀಕರಿಸಿದ್ದನ್ನೇ ಪಾವಿತ್ರ್ಯವನ್ನಾಗಿ ಮಾಡಿದ್ದಾರೆ. ಇಂತಹ ಜಾತೀಯತೆಯನ್ನು ಆಚರಿಸಿರುವ ಪೋಷಿಸುವ ಪ್ರಬಲಶಕ್ತಿಗಳಿಗೆ ಪ್ರತಿಭಟನೆ ಒಡ್ಡುತ್ತಾರೆ. ಇದಕ್ಕೆ ದೇವನೂರು, ಮದ್ವಾಚಾರ್ಯರಿಗೆ ಭಾಷೆಯ ಮೂಲಕ ವಿಡಂಭಿಸಿದರೆ, ಅರವಿಂದ ಮಾಲಗತ್ತಿಯರು ಮಟಗಾರರ ಸಂಪ್ರದಾಯವನ್ನೆ ಮುಂದುವರೆಸುವ ಬುಟಾಳಯ್ಯನೆಂಬ ಪುರೋಹಿತ ವರ್ಗವನ್ನು ವಿಡಂಭಿಸುತ್ತಾರೆ. ಜಂಬಣ್ಣ ಅಮರಚಿಂತರು ದೇವರ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಬಯಲುಗೊಳಿಸುತ್ತಾರೆ. ಇದನ್ನು ಬೆಟ್ಟದ ಲಿಂಗೇಶ್ವರನ ಹೆಸರಿನಲ್ಲಿ ಪೂಜಾರಿ ಶಂಭುಲಿಂಗನ ಮೂಲಕ ಸಂಶಾಲಪ್ಪ ಹಾಗೂ ಯಂಕಟರೆಡ್ಡಿಯವರ ಕುತಂತ್ರವನ್ನು ಕುರುಮಯ್ಯ ಮತ್ತು ಅಂಕುಶದೊಡ್ಡಿಯಲ್ಲಿ ಚಿತ್ರಿಸುತ್ತಾರೆ. ಆದರೆ ಇಲ್ಲಿ ಕಾದಂಬರಿಕಾರರು ಮೇಲುವರ್ಗ, ಜಾತಿಗಳ ಸಂಪ್ರದಾಯವನ್ನು ಬಯಲುಗೊಳಿಸುತ್ತಾರಷ್ಟೇ. ಮುಖ್ಯವಾಗಿ ಕೊರವರು ನಂಬಿಕೊಂಡು ಬಂದ ಮರದ ಎಲ್ಲಪ್ಪ ತಾತ ದೇವರ ವಿರುದ್ಧ ಒಳಹೋರಾಟ ಮಾಡುತ್ತಾರೆ. ಈ ದೇವರ ಪೂಜಾರಿ ಕೊರವರ ಶಂಕ್ರಪ್ಪನು ಭಯದ ವಾತಾವರಣ ಸೃಷ್ಟಿಸಿ, ಅವರನ್ನು ಊರಿಂದಲೇ ತಳಕಿತ್ತುಕೊಂಡು ಸ್ಥಿತ್ಯಂತರವಾಗಲು ಕಾರಣವಾಗುತ್ತಾನೆ. ಕೊರವರು ಬೆಟ್ಟದ ಲಿಂಗೇಶ್ವರನ ದೈವೀ ಶಕ್ತಿಯನ್ನು ನಂಬಿರಲಿಲ್ಲ. ಆದರೆ ತಮ್ಮದೇ ಸಮುದಾಯದ ದೇವರನ್ನು ನಂಬಿದುದು ಇಲ್ಲಿ ದುರಂತಕ್ಕೀಡಾಗುತ್ತದೆ.

ಹೀಗೆ ದಲಿತ-ಬಂಡಾಯ ಕಾದಂಬರಿಗಳು, ಕೆಳವರ್ಗದ ಅವರ ನಂಬಿಕೆಯ ಸಂಪ್ರದಾಯ, ಆಚರಣೆಯನ್ನು ಎತ್ತಿಹಿಡಿಯುತ್ತಲೇ ಅದರ ಹಿಂದಿನ ಅಮಾನವೀಯ ನೆಲೆಗಳನ್ನು ಚಿತ್ರಿಸುತ್ತಾರೆ. ಹಾಗಾಗಿ ಕೆಳವರ್ಗದವರಲ್ಲಿ ಅರಿವು ಉಂಟಾಗಲು ಈ ಬಗೆಯ ಅಂತಃರ್ಮುಖಿ ಹೋರಾಟದ ಬಹುಮುಖ್ಯವಾಗಿದೆ. ಈ ಕಾದಂಬರಿಗಳಲ್ಲಿ ಜನಪರ ಹೋರಾಟ, ಹಾಗೂ ಅಂತರ್ಮುಖಿ ಹೋರಾಟಗಳು ಮೇಲು ನೋಟದಲ್ಲಿ ಸಮಸ್ಯೆಗಳು ಒಂದೇ ರೂಪವಾಗಿ ಕಂಡರೂ ಹಾಗೂ ಸಮಸ್ಯೆಗಳು ಪುನರಾವರ್ತನೆಯೆನಿಸಿದರೂ ಕೆಳವರ್ಗ ಆತ್ಮ ವಿಮರ್ಶೆ ಮಾಡಿಕೊಳ್ಳಲು ಹಾಗೂ ಆ ಮೂಲಕ ಆಧುನಿಕ ಎಚ್ಚರ ಕಂಡುಕೊಳ್ಳಲು ದಾರಿದೀಪವಾಗಿವೆ.

## ಕೊನೆ ಟಿಪ್ಪಣಿ

೧. ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯ ನೆಲೆ, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೨

೨. ಉದ್ಧೃತ : ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ ೧೯೯೦, ಪು.೧೧

೩. ಅದೇ, ಪು.೧೩

೪. ಸರಜೂ ಕಾಟ್ಕರ್, ಕನ್ನಡ ಮರಾಠಿ ದಲಿತ ಸಾಹಿತ್ಯ, ೧೯೯೬, ಪು.೧೬

೫. ಉದ್ಧೃತ : ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ ೧೯೯೦, ಪು.೧೭

೬. ಅದೇ,

೭. ಶಿವತೀರ್ಥನ್, ಒಳಧ್ವನಿ, ೨೦೦೦, ಪು.೨೩

೮. ಅರವಿಂದ ಮಾಲಗತ್ತಿ(ಸಂ), ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೨೬

೯. ದೇವಯ್ಯ ಹರವೆ, ದಲಿತಸಾಹಿತ್ಯ ಮತ್ತು ಇತರ ಲೇಖನಗಳು, ೧೯೯೧, ಪು.೪೬

೧೦. ಪುರುಷೋತ್ತಮ ಬಿಳಿಮಲೆ, ನವ್ಯ ಕಾವ್ಯದಲ್ಲಿ ಜನಪರ ನಿಲುವುಗಳು, ಸಂಕ್ರಮಣ ಸಾಹಿತ್ಯ, ಸಂಪುಟ ೨, ೧೯೯೩

೧೧. ಮಾಲತಿ ಪಟ್ಟಣಶೆಟ್ಟಿ, ಜನಪರ ನಿಲುವು, ೧೯೯೩, ಪು.೫೩

೧೨. ಲಲಿತನಾಯಕ ಬಿ.ಟಿ., ಗತಿ, ೧೯೯೩, ಪು.೩೮

೧೩. ಉದ್ಧೃತ : ಬಸವರಾಜ ಸಬರದ (ಸಂ) ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೪೨

೧೪. ಅರವಿಂದ ಮಾಲಗತ್ತಿ, ದಲಿತಜ್ಞ, ೨೦೦೧, ಪು.೧೯

೧೫. ತಿಪ್ಪೇರುದ್ರಸ್ವಾಮಿ ಎಚ್., ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ, ೧೯೭೯, ಪು.೫೦

೧೬. ಉದ್ಧೃತ : ತಿಪ್ಪೇರುದ್ರಸ್ವಾಮಿ ಎಚ್., ಅದೇ, ಪು.೪೪

೧೭. ಬಸವರಾಜ ಸಬರದ, ಕನ್ನಡದಲ್ಲಿ ಬಂಡಾಯ ಸಾಹಿತ್ಯ, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೪, ಪು.೪೬

೧೮. ತಿಪ್ಪೇರುದ್ರಸ್ವಾಮಿಯವರ ಒಂದು ನೆನಪು: ಮುಚ್ಚಿಸಿಕೊಂಡವರು, ೧೯೯೮, ಪು.೨೪೧

೧೯. ಜವರಯ್ಯ ಮ.ನ., ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ, ೧೯೯೪, ಪು.೨೦೧

೨೦. ಅನಂತಮೂರ್ತಿ ಯು.ಆರ್., ದಲಿತ ಚಳವಳಿ ಮತ್ತು ಸಂವೇದನಶೀಲತೆ, ಸಾಹಿತ್ಯ ವಿಮರ್ಶೆ, ೧೯೮೮, ಪು.೬೯

೨೧. ಅಶೋಕ ಟಿ.ಪಿ., ಪುಸ್ತಕ ಪ್ರೀತಿ, ೧೯೯೨, ಪು.೨೬೪

೨೨. ಅಮೂರ ಜಿ.ಎಸ್., ಅರ್ಥಲೋಕ, ೧೯೮೮, ಪು.೫೦

೨೩. ಉಧೃತ : ಪುರುಷೋತ್ತಮ ಬಿಳಿಮಲೆ, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ಬಸವರಾಜ ಸಬರದ(ಸಂ) ೧೯೯೨, ಪು.೨೭೩

೨೪. ಬರಗೂರು ರಾಮಚಂದ್ರಪ್ಪ, ಅದೇ, ಪು.೩

೨೫. ಭಂಡಾರಿ ಆರ್.ವಿ.(ಪ್ರ.ಸಂ), ಬರಗೂರು ರಾಮಚಂದ್ರಪ್ಪ, ದಲಿತ ಬಂಡಾಯ ಸಾಹಿತ್ಯ, ಪ್ರಭುತ್ವ ಮತ್ತು ಮುಖಾಮುಖಿ, ಸಂ.೧೨, ೧೯೯೩

೨೬. ಅದೇ, ಪು.೨೦೦

೨೭. ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ, ೧೯೯೦, ಪು.೨೮

೨೮. ಉಧೃತ : ಲಕ್ಷ್ಮಣ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ೧೯೯೯, ಪು.೯೮

೨೯. ಅಶೋಕ ಟಿ.ಪಿ., ಪುಸ್ತಕ ಪ್ರೀತಿ, ೧೯೯೨, ಪು.೨೬೭

೩೦. ಉಧೃತ ಜವರಯ್ಯ ಮ.ನ., ಪರಂಪರೆ ಹಾಗೂ ದಲಿತ ಸಾಹಿತ್ಯ ಒಂದು ಅಧ್ಯಯನ, ೧೯೯೯, ಪು.೩೦೨

೩೧. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೯೩

೩೨. ವಿವೇಕ ರೈ, ಸಾಹಿತ್ಯ ವಿಮರ್ಶೆ, ೧೯೯೧, ಪು.೧೩೬

೩೩. ಅದೇ, ಪು.೧೨೯

೩೪. ಬಡಿಗೇರ ವಿ.ಎಸ್., ಕನ್ನಡ ಹಸ್ತಪ್ರತಿಗಳು ಮತ್ತು ಸಾಪ್ಟ್‌ವೇರ್ ತಂತ್ರಜ್ಞಾನ, ೨೦೦೦, ಪು.೬೫

೩೫. ಶಿವರುದ್ರಪ್ಪ ಜಿ.ಎಸ್., ಬಂಡಾಯ ಸಾಹಿತ್ಯದ ಕುರಿತು, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೧, ಪು.೮೪

೩೬. ಉಧೃತ ತಿಪ್ಪೇರುದ್ರಸ್ವಾಮಿ ಎಚ್., ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ, ೧೯೭೯, ಪು.೬೯

೩೭. ಸದಾಶಿವ ಎಣ್ಣೆಹೊಳೆ, ಕುಸುಮ ಬಾಲೆಯ ಕಾದಂಬರಿಯ ಸಾಧ್ಯತೆಗಳು, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೨೧

೩೮. ಶಿವರುದ್ರಪ್ಪ ಜಿ.ಎಸ್.(ಸಂ), ಸಾಹಿತ್ಯ ವಾರ್ಷಿಕ, ೧೯೭೭, ಪು.೬೫

೩೯. ಬರಗೂರು ರಾಮಚಂದ್ರಪ್ಪ, ಸೂರ್ಯ, ಪು.೪೪

೪೦. ಕೇಶವ ಶರ್ಮ, ಸಂಕ್ರಮಣ, ಏಪ್ರಿಲ್-ಮೇ ೧೯೮೯, ಪು.೨೮

೪೧. ಶಿವರುದ್ರಪ್ಪ ಜಿ.ಎಸ್., ಕಾದಂಬರಿ ಸಾಮಾನ್ಯ ಮನುಷ್ಯ, ೧೯೯೦, ಪು.೪೫

೪೨. ವಿವೇಕ ರೈ, ಸಾಹಿತ್ಯ ವಿಮರ್ಶೆ, ೧೯೯೧, ಪು.೧೪೧

೪೩. ಮುನ್ನುಡಿ: ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨

೪೪. ದೇವನೂರು ಮಹಾದೇವ, ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೧೬೧

೪೫. ಅದೇ, ಪು.೧೫೭

೪೬. ಅದೇ, ಪು.೧೧೬

೪೭. ಅದೇ, ಪು.೧೨೨

೪೮. ಅದೇ, ಪು.೧೨೯

೪೯. ಅದೇ, ಪು.೧೪೪

೫೦. ಮುಳ್ಳೂರು ನಾಗರಾಜ್, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೨೩

೫೧. ಅದೇ, ಪು.೨೨

೫೨. ಅದೇ, ಪು.೧೦೪

೫೩. ಅದೇ, ಪು.೨೬

೫೪. ಅದೇ ಪು.೫೪

೫೫. ಮನಜ, ಮಾಗಿ, ೧೯೮೭, ಪು.೧೦೭

೫೬. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೧೧೫

೫೭. ಅದೇ, ಪು.೧೧೫

೫೮. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೧೪೨

೫೯. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೭೩

೬೦. ಅದೇ, ಪು.೭೮

೬೧. ದೇವನೂರು ಮಹಾದೇವ, ಕುಸುಮಬಾಲೆ, ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೧೬೨

೬೨. ಅರವಿಂದ ಮಾಲಗತ್ತಿ, ಕಾರ್ಯ, ಪು.೩೫

೬೩. ದೇವನೂರು ಮಹಾದೇವರ ಕುಸುಮಬಾಲೆ, ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೧೧೩

೬೪. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೧೮.

೬೫. ಅದೇ, ಪು.೨೯

೬೬. ಅದೇ, ಪು.೬೯

೬೭. ಅದೇ, ಪು.೫೯

೬೮. ದೇವನೂರು ಮಹಾದೇವ ಕುಸುಮಬಾಲೆ, ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೧೦೯

೬೯. ಅದೇ, ಪು.೧೪೦

೭೦. ಅದೇ, ಪು.೧೨೦

೭೧. ಅದೇ, ಪು.೧೫೪

೭೨. ಅದೇ, ಪು.೧೫೮

೭೩. ಬರಗೂರು ರಾಮಚಂದ್ರಪ್ಪ, ಸೂರ್ಯ, ೧೯೯೦, ಪು.೧೪

೭೪. ಅದೇ, ಪು.೧೭

೭೫. ಅದೇ, ಪು.೨೧

೭೬. ಜವರಯ್ಯ ಮ.ನ., ಮಾಗಿ, ೧೯೮೭, ಪು.೧೪೨

೭೭. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೧೦೧

೭೮. ಗಿರಡ್ಡಿ ಗೋವಿಂದರಾಜು, ಕಾದಂಬರಿ ವಸ್ತು ಮತ್ತು ತಂತ್ರ, ೧೯೮೯, ಪು.೪

೭೯. ಶಿವರಾಮಯ್ಯ, ಸಾಹಿತ್ಯ ಪರಿಸರ, ೧೯೯೩, ಪು.೧೩೮

೮೦. ದೇವನೂರು ಮಹಾದೇವ, ಕುಸುಮಬಾಲೆ, ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೧

೮೧. ರಘುನಾಥ್ ಎನ್.ಎಸ್., ಸಾಹಿತ್ಯ ವಿಮರ್ಶೆ, ೧೯೯೧, ಪು.೧೫೩

೮೨. ಬರಗೂರು ರಾಮಚಂದ್ರಪ್ಪ, ಸೂರ್ಯ, ೧೯೯೦, ಪು.೩೭

೮೩. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೪೫

೮೪. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೫

೮೫. ಅದೇ, ಪು.೬

೮೬. ಅದೇ, ಪು.೧೧೨

೮೭. ಗಿರಡ್ಡಿ ಗೋವಿಂದರಾಜು, ಕಾದಂಬರಿ: ವಸ್ತು, ತಂತ್ರ, ೧೯೮೭, ಪು.೨೦

೮೮. ಉಧೃತ: ಆರ್.ವಿ.ಭಂಡಾರಿ; ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ; ೧೯೯೩; ಪು;೧೬೯.

೮೯. ತಾಳ್ತಂಜೆ ವಸಂತಕುಮಾರ(ಸಂ), ಜನಪರ ನಿಲುವು, ೧೯೯೩, ಪು.೩

೯೦. ಚಂದ್ರಶೇಖರ ಪಾಟೀಲ್, ಹೂವು, ಹೆಣ್ಣು, ತಾರೆ, ೧೯೮೨, ಪು.೫

೯೧. ಬಸವರಾಜ ಸಬರದ, ದಲಿತ ಬಂಡಾಯ ಕಾವ್ಯದಲ್ಲಿ ಜನಪರ ನಿಲುವುಗಳು, ಸಂಕ್ರಮಣ ಸಾಹಿತ್ಯ, ಸಂ.೨, ೧೯೯೩, ಪು.೧೮೮

೯೨. ಅದೇ, ಪು.೧೭೫

೯೩. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೨೫

೯೪. ಅದೇ, ಪು.೨೭

೯೫. ಶೇಷಗಿರಿರಾವ್ ಎಸ್.ಎಲ್., ಹೊಸದಿಕ್ಕು, (ಲೇ)ಬಸವರಾಜ ಸಬರದ, ೧೯೯೦, ಪು.VI

೯೬. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೧೩೮

೯೭. ತಾಳ್ತಂಜೆ ವಸಂತಕುಮಾರ(ಸಂ), ಜನಪರ ನಿಲುವು, ೧೯೯೩, ಪು.೮೦

೯೮. ಬಸವರಾಜ ಸಬರದ(ಸಂ). ಬಂಡಾಯ ಸಾಹಿತ್ಯಕ್ಕೆ ಹತ್ತು ವರ್ಷ: ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೨೧೨

೯೯. ಬರಗೂರು ರಾಮಚಂದ್ರಪ್ಪ, ಇಣಕು ನೋಟ, ೧೯೯೧, ಪು.೧

೧೦೦. ಕೇಶವ ಶರ್ಮ, ನಾಲ್ಕು ದಲಿತೀಯ ಕಾದಂಬರಿಗಳು, ೧೯೮೧, ಪು.೩೯

೧೦೧. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೫೭

೧೦೨. ಅದೇ, ಪು.೩೪

೧೦೩. ಬರಗೂರು ರಾಮಚಂದ್ರಪ್ಪ, ಸೂರ್ಯ, ೧೯೯೦, ಪು.೧೨

೧೦೪. ಉಧ್ಧೃತ: ಕೇಶವ ಶರ್ಮ ಕೆ., ಕನ್ನಡ ಸಾಹಿತ್ಯದ ಪುನರ್ ಮೌಲ್ಯೀಕರಣ, ಸಂ.೨, ೧೯೯೩, ಪು.೧೪೪

೧೦೫. ಸಂಕ್ರಮಣ ಸಾಹಿತ್ಯ ಡಾ.ಅಂಬೇಡ್ಕರ್ ವಿಶೇಷಾಂಕ, ೧೯೮೧, ಪು.೧೬೮

೧೦೬. ನಾನು ಕ್ಷೇತ್ರಕಾರ್ಯ ಮಾಡಿದ ಸಂಡೂರು ತಾಲೂಕು ವ್ಯಾಪ್ತಿಗೆ ಬರುವ ಗ್ರಾಮಪಂಚಾಯಿತಿ ಸದಸ್ಯೆಯರನ್ನು ಸಂದರ್ಶಿಸಿದ ಸಂದರ್ಭದಲ್ಲಿ ತಿಳಿದ ಸಂಗತಿ

೧೦೭. ಜನಪರ ಕರ್ನಾಟಕ, ದಿನಾಂಕ ೧೦.೧.೨೦೦೧, ಪು.೭

ಅಧ್ಯಾಯ ೩

# ಪ್ರಾತಿನಿಧಿಕ ದಲಿತ-ಬಂಡಾಯ ಕಾದಂಬರಿಗಳು ಮತ್ತು ಕಾದಂಬರಿಕಾರರು

ದಲಿತ-ಬಂಡಾಯ ಸಾಹಿತ್ಯದ ವಸ್ತು, ಶೋಷಣೆಗೊಳಗಾದ ಸಮಾಜ. ಇದರ ವಸ್ತು ವಿನ್ಯಾಸವೇ ಸಮಾಜದ ವಿನ್ಯಾಸದ ಜೊತೆಗೆ ಹೆಣೆದುಕೊಂಡಿದೆ. ಹಾಗಾಗಿ ದಲಿತ-ಬಂಡಾಯ ಲೇಖಕರು ಮತ್ತು ಸಾಹಿತಿಗಳು ಮೊಟ್ಟ ಮೊದಲ ಬಾರಿಗೆ ಆ ಸಮಾಜದ ಅಜ್ಞಾತ ನೆಲೆಗಳನ್ನು ಭಾಷೆಯಲ್ಲಿ ಕಟ್ಟಿಕೊಡಲು ಹವಣಿಸಿದರು.

ಸ್ವಾತಂತ್ರ್ಯ ಬಂದ ತಲೆಮಾರಿನ ಲೇಖಕರೇ ಆದ ಬಹುತೇಕ ಬಂಡಾಯ ಲೇಖಕರು ವಿದ್ಯೆ ಕಲಿತು ಬದಲಾವಣೆ ಹೊಂದಿದ ಭಾರತೀಯ ಸಮಾಜದ ಬದುಕನ್ನು ತಮ್ಮ ಅನುಭವದ ಮಿತಿಯಲ್ಲಿ ಚಿತ್ರಿಸಿದ್ದಾರೆ. ಈ ಅನುಭವದ ಅಭಿವ್ಯಕ್ತಿಯಲ್ಲಿ ದಲಿತೀಯ ಲೇಖಕರು, ಹಾಗೂ ದಲಿತೇತರ ಲೇಖಕರಲ್ಲಿ ವ್ಯತ್ಯಾಸವೂ ಇದೆ. ಇವರ ಸಾಹಿತ್ಯ ಸೃಜನಶೀಲತೆ ಮಾರ್ಕ್ಸ್ ಸಿದ್ಧಾಂತ, ಲೋಹಿಯಾ, ಅಂಬೇಡ್ಕರ್ ಸಿದ್ಧಾಂತಗಳಿಂದ ಪ್ರಭಾವಿತಗೊಂಡಿದೆ. ಬಂಡಾಯ ಲೇಖಕರು ಮಾರ್ಕ್ಸ್ ಸಿದ್ಧಾಂತ, ಲೋಹಿಯಾ ಸಿದ್ಧಾಂತವನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದರೆ, ದಲಿತೀಯ ಲೇಖಕರು ಮೇಲಿನ ಸಿದ್ಧಾಂತವನ್ನು ಅಳವಡಿಸಿಕೊಂಡಿದ್ದಾರೆ. ಆದರೂ ಕಾದಂಬರಿ ಸೃಜನತೆಯಲ್ಲಿ ಅಂಬೇಡ್ಕರ್ ಸಿದ್ಧಾಂತವನ್ನೇ ಪ್ರಮುಖವಾಗಿ ಅಳವಡಿಸಿಕೊಂಡು ಸೃಜನ ಕ್ರಿಯೆಯಲ್ಲಿ ಕೆಲಸಮಾಡಿರುವುದನ್ನು ಗಮನಿಸಬಹುದು. ಈ ತಲೆಮಾರಿನ ಕಾದಂಬರಿಕಾರರಲ್ಲಿ ಮುಖ್ಯರಾದವರು ಬರಗೂರು ರಾಮಚಂದ್ರಪ್ಪ, ಕುಂ.ವೀರಭದ್ರಪ್ಪ, ದೇವನೂರು ಮಹಾದೇವ, ಅರವಿಂದ ಮಾಲಗತ್ತಿ ಮ.ನ.ಜವರಯ್ಯ, ಮುಳ್ಳೂರು ನಾಗರಾಜ್ ಜಂಬಣ್ಣ ಅಮರಚಿಂತ, ಬಿ.ಟಿ.ಲಲಿತಾನಾಯ್ಕ ಮುಂತಾದವರು. ಈ ಪಂಥದ ಲೇಖಕರನ್ನು ಎರಡು ಪಂಥಗಳಾಗಿ ವಿಂಗಡಿಸಿ ನೋಡಬಹುದಾಗಿದೆ.

ದಲಿತ ಲೇಖಕ : ಮೇಲು ಜಾತಿಗಳಿಂದ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೊಳಗಾದ ಅಸ್ಪೃಶ್ಯ ಜಾತಿಗೆ ಸೇರಿದವರು ಮತ್ತು ಸಮಾಜದ ಉಳಿದ ಜಾತಿಗಳ ಮನುಷ್ಯ ಸಂದರ್ಭದಲ್ಲಿ ಬದುಕಲಾಗದೆ ಊರ ಹೊರಗೆ ವಾಸಿಸುವವರ ಬದುಕಿಗೆ ಸಂಬಂಧಿಸಿದಂತೆ ಸಾಹಿತ್ಯ ರಚಿಸುವವ.

ಬಂಡಾಯ ಲೇಖಕ : ಎಂದರೆ ಎಲ್ಲ ಜಾತಿಗಳ ಮೇಲ್ವರ್ಗದವರ ತುಳಿತವನ್ನು ಮನುಷ್ಯರಲ್ಲಿನ ಅಸಮಾನತೆಯನ್ನು ಧಾರ್ಮಿಕ, ಆರ್ಥಿಕ, ಸಾಮಾಜಿಕ ಶೋಷಣೆಯನ್ನು ವಸ್ತುವಾಗಿಟ್ಟು ಬರೆದದ್ದು. ಬದುಕಿನ ಎಲ್ಲಾ ಶೋಷಣಾ ಮೂಲಗಳಿಗೆ ಪ್ರತಿಭಟನೆಯ ಧೋರಣೆಯನ್ನು ತಳೆದ ಸಾಹಿತ್ಯ ರಚನೆಗೆ ತೊಡಗಿದವನು ಬಂಡಾಯ ಲೇಖಕ.

ಸಮಾಜ ವ್ಯವಸ್ಥೆಯ ಕ್ರೌರ್ಯದ ವಿರುದ್ಧ ಈ ಎರಡೂ ಪಂಥದ ಲೇಖಕರು ಕೂಡಿ ಪ್ರತಿಭಟನೆ ಧೋರಣೆ ತಾಳಿದ್ದು ನಿಜ. ಆದರೆ ಈ ಕೂಡುವಿಕೆ ಮೇಲುನೋಟದ್ದಾಗಿದೆಯೇ ಹೊರತು ಪರಸ್ಪರ ಮಾನಸಿಕವಾಗಿ ಸಂಪೂರ್ಣ ಬೆರಕೆಯಾಗಿರಲಿಲ್ಲ, ಎನ್ನುವುದು ಬರಗೂರರ ಈ ಕೆಳಗಿನ ಹೇಳಿಕೆಯಿಂದ ಅರ್ಥೈಸಬಹುದು.

"ಪ್ರಗತಿಪರ ದಲಿತರು ಮತ್ತು ಎಡಪಂಥೀಯರನ್ನೊಳಗೊಂಡ ಬಂಡಾಯ ಸಾಹಿತ್ಯ ಚಳುವಳಿ ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಘಟನೆಗಳಲ್ಲೊಂದು"[೧]

ಎಂಬಲ್ಲಿ 'ಪ್ರಗತಿಪರ' ದಲಿತರು ಮತ್ತು 'ಎಡಪಂಥೀಯರು' ಎಂದು ಪ್ರತ್ಯೇಕಿಸಲಾಗಿದೆ. ಬಂಡಾಯ ಚಳುವಳಿಯ ಆಶಯವನ್ನು ಹೇಳುವಾಗಲೂ ಸೂಕ್ಷ್ಮವಾಗಿ ಮೇಲು-ಕೀಳು ಕೆಲಸ ಮಾಡಿರುವುದನ್ನು ಗುರ್ತಿಸಬಹುದು. ದಲಿತ ಬಂಡಾಯ ಲೇಖಕರು ಕೆಳವರ್ಗದಿಂದ ಬಂದವರು. ಹಾಗಾಗಿ ಗ್ರಾಮೀಣ ಸಮಾಜದ ನೆಲೆಯಲ್ಲಿ ನೋಡಿದಾಗ ಕೆಳವರ್ಗ ತಮ್ಮ ತಮ್ಮ ವರ್ಗಗಳ ನಡುವೆ ಸ್ಪೃಶ್ಯ-ಅಸ್ಪೃಶ್ಯಗಳೆಂದು ಕಾಣುವುದು ಗ್ರಹಿಕೆಗೆ ಬರುತ್ತದೆ. ಕೆಳವರ್ಗದ ಸ್ಪೃಶ್ಯ(Touchable) ಮೇಲು ಜಾತಿಗಳಿಂದ ಅಸ್ಪೃಶ್ಯನಾದರೆ, ಅಸ್ಪೃಶ್ಯ(untouchable) ಕೆಳವರ್ಗದ ಅಸ್ಪೃಶ್ಯನಿಂದಲೂ, ಮೇಲು ಜಾತಿಯವರಿಂದಲೂ ಅಸ್ಪೃಶ್ಯನಾಗಿ ಉಳಿದಿದ್ದಾನೆ. ಕೆಳವರ್ಗದ ಅಸ್ಪೃಶ್ಯ ಜಾತಿಯವನು ಬ್ರಾಹ್ಮಣ ಮತ್ತಿತರ ಜಾತಿಗಳಲ್ಲಿ ರಕ್ತ ಸಂಬಂಧವಿಲ್ಲದಿದ್ದರೂ ಹುಟ್ಟು-ಸಾವು, ಮದುವೆ, ಶೋಬಾನ, ಧರ್ಮಕಾರ್ಯ, ದೇವರು, ಊರಿನ ಹಬ್ಬಗಳು ಮುಂತಾದ ಕೆಲವೊಂದು ಸಂದರ್ಭಗಳಲ್ಲಿ ಸಾಂಸ್ಕೃತಿಕ ವಿನಿಮಯ ಕನಿಷ್ಠ ಮಟ್ಟದಲ್ಲಾದರೂ ನಡೆಯುತ್ತದೆ. ಒಬ್ಬ ಶೂದ್ರನೊಬ್ಬ ಬ್ರಾಹ್ಮಣರ ಮನೆಯ ಅಂಗಳಕ್ಕೂ ಬ್ರಾಹ್ಮಣನೊಬ್ಬ ಶೂದ್ರರ ಅಂಗಳಕ್ಕೆ ಪ್ರವೇಶ ಮಾಡುವ ಒಂದೇ ದೇವಸ್ಥಾನಕ್ಕೆ ಹೋಗುವ ಸ್ಥಿತಿ ಇದೆ. ಆದರೆ ಅಸ್ಪೃಶ್ಯನೊಬ್ಬ ಕೆಳವರ್ಗದ ಸ್ಪೃಶ್ಯನ ಮನೆಯೊಳಗೆ ಪ್ರವೇಶವಿಲ್ಲ ಹಾಗಾಗಿ ದಲಿತ ಒಟ್ಟು ಮಾನವ ಸಂಬಂಧದಿಂದ ದೂರ ಉಳಿದಿದ್ದಾರೆ. ತನಗಿಂತ ಮೇಲಿನ ಸ್ತರದ ಜಾತಿಗಳನ್ನು ಎದುರಿಸಬೇಕಾಗಿದೆ.

ಬಹುಶಃ ಬರಗೂರರು ಮೇಲೆ ಹೇಳಿರುವ ಹೇಳಿಕೆಯಲ್ಲಿ ಈ ತರಹದ ಜಾತಿಪ್ರಜ್ಞೆ ಕೆಲಸ ಮಾಡಿರಬಹುದೆಂದು ಭಾವಿಸಬಹುದು. ಇದು ಬಂಡಾಯ ಕಾದಂಬರಿಕಾರರಲ್ಲಿ ಪರೋಕ್ಷವಾಗಿ ಮುಂದುವರೆದಿದೆ ಎನ್ನಬಹುದು. ಯಾಕೆಂದರೆ "ಬರೆಯುವ ಸಾಹಿತಿ ತಾನು ವರ್ಗ ಕಲ್ಪನೆಯನ್ನು ರಕ್ತಗತ ಮಾಡಿಕೊಂಡು ಆ ಸಮಾಜದ ನಂಬಿಕೆಗಳು, ನಡವಳಿಕೆಗಳು, ಹುಟ್ಟು, ಸಾವು, ಮದುವೆ, ಸಂಪ್ರದಾಯ, ಪರಂಪರೆ, ಹಬ್ಬ, ವೃತ್ತಿ, ದೇವರು, ಧರ್ಮ ಒಟ್ಟಿನಲ್ಲಿ ಇಡೀ ಬದುಕನ್ನು ಅದರ ಸಂದರ್ಭದಲ್ಲೇ ಗ್ರಹಿಸಿ, ವಿಶ್ಲೇಷಿಸಿ, ಒಪ್ಪಿಕೊಂಡು, ವಿರೋಧಿಸಿ, ಧ್ವನಿಸಿ, ಬರೆಯಬೇಕಾಗುತ್ತದೆ"[೨]

ಈ ಹಿನ್ನಲೆಯಲ್ಲಿ ದಲಿತ ಲೇಖಕ ತನ್ನ ಸಮುದಾಯದ ಸಾಂಸ್ಕೃತಿಕ ದಾಖಲೆಯೊಂದಿಗೆ ಸಾಹಿತ್ಯ ರಚನೆಗೆ ತೊಡಗಿದರೆ, ಬಂಡಾಯ ಲೇಖಕರು ವರ್ಗಸಮಸ್ಯೆಯಂತಹ ವಸ್ತುವನ್ನಾಯ್ದುಕೊಂಡು ಸಾಹಿತ್ಯ ರಚನೆಗೆ ತೊಡಗಿಸಿಕೊಂಡರು.

ಹೀಗೆ ವರ್ಗ ಸಮಸ್ಯೆಯನ್ನು ಸಾಮಾನ್ಯೀಕರಣಗೊಳಿಸಲು ಚಾಚಿಕೊಳ್ಳುವುದರಿಂದ ಜಾತಿ ವಿನ್ಯಾಸದ ಮೇಲೆ ರೂಪಪಡೆದಿರುವ(ಸಂಸ್ಕೃತಿ) ದಲಿತ ಲೇಖಕರು ವರ್ಗ ಸಂದರ್ಭದ ಜೊತೆ ಸಮೀಕರಿಸಿ ಕೊಳ್ಳಲಾಗದೇ ಹೋಯಿತು. ಯಾಕೆಂದರೆ, ಈ ಸಮಾಜದ ಹೊಲೆಯನಿಗೂ, ಕುರುಬನಿಗೂ, ಲಿಂಗಾಯತನಿಗೂ ಬ್ರಾಹ್ಮಣನಿಗೂ ಬದುಕು ಬೇರೆ ಬೇರೆ ರೀತಿಯದಾಗಿರುತ್ತದೆ. ಹಾಗಾಗಿ ಸಮಾಜಕ್ಕೆ ತಮ್ಮದೇ ಆದ ಅರಿವು ಅಥವಾ ಪ್ರಜ್ಞೆಯನ್ನು ತಂದುಕೊಡುವ ಅವಶ್ಯಕತೆ ಮನಗಂಡು ತಮ್ಮ ಭಾಷೆಯ ಬರವಣಿಗೆಯಲ್ಲಿ ತೊಡಗಿಕೊಂಡ ಅಕ್ಷರಸ್ಥ ದಲಿತರನ್ನು ತಲುಪುವ ಬಗೆ, ಅನಕ್ಷರಸ್ಥ ದಲಿತರನ್ನು ತಲುಪುವ ಬಗೆಗೆ ಸಾಹಿತ್ಯಿಕವಾದ ಪ್ರಯೋಗಗಳನ್ನು ತಂದು ಗೆದ್ದರು. ಗ್ರಂಥಸ್ಥ ಭಾಷೆಗೆ ಸತ್ವವಿಲ್ಲವೆನಿಸಿ, ದಲಿತ ಆಡು ಭಾಷೆಯನ್ನೇ ಸಾಹಿತ್ಯದಲ್ಲಿ ಬಳಸಿಕೊಂಡರು. "ಈ ಭಾಷೆ ಕೆಲವರಿಗೆ ಶಿಲ್ಪದಲ್ಲಿ ಸಂಗೀತ ನುಡಿದಂತೆ ಭಾಸವಾದರೆ, ಇನ್ನೂ ಕೆಲವರಿಗೆ ಅರಗಿಸಿಕೊಳ್ಳಲಾಗದ ತುತ್ತಾಗಿದೆ. ಈ ರೀತಿಯ ಭಾಷೆಯ ಬಳಕೆ ಕೇವಲ ಸಾಹಿತ್ಯಿಕ ಪ್ರಯೋಗದಿಂದ ಸಾಹಿತ್ಯ ಚರಿತ್ರೆಯಲ್ಲಿ ಮೈಲುಗಲ್ಲಾಗುವ ಉದ್ದೇಶವಾಗಿರದೆ, ಭಾಷೆ ತಮ್ಮ ತನದ ಸ್ವಾಭಿಮಾನದ, ಅದರೊಂದಿಗೆ ವ್ಯಕ್ತವಾಗುವ ಆತ್ಮ ವಿಶ್ವಾಸ, ಅಭಿವ್ಯಕ್ತಿಯ ಪ್ರಕರತೆ, ಜನ ಸಾಮಾನ್ಯನಿಗೆ ತಲುಪುವಿಕೆ, ಸಾಂಸ್ಕೃತಿಕ ನಿಷ್ಠೆ ಇವೆಲ್ಲವನ್ನು ಕೂಡಿಕೊಂಡಿದೆ"[೩] ಇಂಥ ಭಾಷೆಯನ್ನೊಳಗೊಂಡ ಸಾಹಿತ್ಯ ರಚನೆಯನ್ನು ಹುಟ್ಟಿನಿಂದ ದಲಿತರಾದವರಿಗೆ ಮಾತ್ರ ಸಾಧ್ಯವಾಗುತ್ತದೆ.

ದಲಿತ ಲೇಖಕರು ಸಮಾಜದ ಶೋಷಣೆಯನ್ನು ನೇರವಾಗಿ ಪ್ರಶ್ನಿಸುವುದಿಲ್ಲ. ಬದಲಾಗಿ ಭಿನ್ನ ರೀತಿಯ ಅಭಿವ್ಯಕ್ತಿಯ ಮೂಲಕ ಪ್ರತಿಭಟಿಸುತ್ತಾರೆ. ಆವೇಶ, ಆರ್ದ್ರತೆ, ವಿಡಂಬನ ಸ್ವರೂಪದ ಅಭಿವ್ಯಕ್ತಿಯೇ ಕೇಂದ್ರವಾಗಿದ್ದು ಪರಂಪರಾಗತ ಮೌಢ್ಯದ ಮೌಲ್ಯಗಳನ್ನು ಅನಾದರಣೆಯಿಂದ ಕಾಣುವುದು ತಕ್ಷಣವೇ ಗಮನ ಸೆಳೆಯುತ್ತದೆ. ಪ್ರತಿಭಟನೆಗಿಂತ ಅಸಹಾಯಕತೆಯ ಗುಣವನ್ನು ಮೂಲವಾಗಿಸಿಕೊಂಡು ಅಸ್ಪೃಶ್ಯತೆಯ ನೋವಿನ ವಿವಿಧ ಮಜಲುಗಳನ್ನು ಬಿಚ್ಚಿ ತೋರಿಸುತ್ತಾ ಎದುರಾಳಿಯ ಮನಸ್ಸನ್ನು ಕಲಕುವ ಆತ್ಮ ವಿಮರ್ಶೆಗೆ ಹಚ್ಚುವಂತೆ ಮಾಡುತ್ತದೆ. ದಲಿತ ಸಾಹಿತಿ ಈ ಎಲ್ಲ ಸಾಧ್ಯತೆಗಳೊಂದಿಗೆ ತನ್ನ ಸಂಸ್ಕೃತಿಯನ್ನು ಜೀವಂತವಾಗಿ ಉಳಿಸಲು ಪ್ರಯತ್ನಿಸುತ್ತಿರುವುದರಿಂದಲೇ ಶೂದ್ರ ಮತ್ತು ಬ್ರಾಹ್ಮಣ ಜಾತಿಗಳ ಮೂಲದಿಂದ ಹುಟ್ಟಿ ಬಂದ ಸಾಹಿತಿಗೆ ದಲಿತ ಸಮಾಜದ ನೆಲೆಗಳು ತೀರಾ ಪರಕೀಯವಾಗಿ ಕಾಣುತ್ತದೆ.

ಬಂಡಾಯ ಕಾದಂಬರಿಗಳಲ್ಲಿ ಕಾದಂಬರಿಕಾರರು ವ್ಯವಸ್ಥೆಯ ವಿರುದ್ಧ ನೇರವಾದ ಪ್ರತಿಭಟನೆಯ ಧೋರಣೆಯನ್ನು ತಾಳುತ್ತಾರೆ. ಅಸಹಾಯಕತೆ ಇರುವುದಾದರೂ ಅದು ಇಡೀ ಸಂಸ್ಕೃತಿಯದಾಗಿರದೇ ವ್ಯಕ್ತಿಗತವಾಗಿ ಮೂಡಿದೆ. ಹಾಗಾಗಿ ದಲಿತರ ಸೃಜನ ಶೀಲತೆಗೂ ಬಂಡಾಯ ಲೇಖಕರ ಸಾಹಿತ್ಯ ಸೃಜನಶೀಲತೆಗೂ ಅಗಾಧ ವ್ಯತ್ಯಾಸವಿದೆ. ದಲಿತ ಲೇಖಕರು ತಮ್ಮ ಸಂಸ್ಕೃತಿಯ ಸಮಸ್ಯೆಗಳ ವಿವಿಧ ಮಜಲುಗಳನ್ನು ಯಾವ ಹಂಗಿಲ್ಲದೇ ಅನಾವರಣಗೊಳಿಸುತ್ತಾರೆ. ಈ ಚಿತ್ರಣಕೊಡುವುದರ ಮೂಲಕ ತನ್ನನ್ನು ತಾನು ಕಂಡುಕೊಳ್ಳುವುದರೊಂದಿಗೆ ಜನಾಂಗ ಮುಖಿಯಾಗಿ ಕಂಡುಕೊಳ್ಳಲು ಹಚ್ಚುವಂತಹದು. ಹಾಗೆಯೇ ಇತರ ಸವರ್ಣೀಯರು ತಮ್ಮನ್ನು ತಾವು ಕಂಡುಕೊಳ್ಳಲು ಪ್ರೇರೇಪಿಸುವಂತಹದ್ದಾಗಿದೆಯೇ ವಿನಃ ದಲಿತ ಸಾಹಿತ್ಯ-ಲೇಖಕ ಸವರ್ಣೀಯರನ್ನು ತಿದ್ದುವ ತೀಡುವ ಯೋಜನೆಯಲ್ಲ. ಇಂಥ ದಲಿತರ ಸಮಸ್ಯೆಗಳೂ ದಲಿತೇತರ ಸಮಸ್ಯೆಗಳಿಗಿಂತ ಭಿನ್ನವಾಗಿವೆ. ಹಾಗಾಗಿ ಕಾದಂಬರಿಗಳಲ್ಲಿ ಚಿತ್ರಣಗೊಂಡ ಬಂಡಾಯ ಲೇಖಕರ ಸಮಸ್ಯೆಗಳು ಭಿನ್ನವಾಗಿ ಕಂಡುಬರುತ್ತವೆ. ನೊ.ಸಂ.ತಿಮ್ಮೇಗೌಡ ಅವರು ಅಭಿಪ್ರಾಯಪಡುವಂತೆ "ಬಂಡಾಯ ಲೇಖಕ-ಸಾಹಿತ್ಯದ ದಿಕ್ಕು ಧೋರಣೆಗಳ ಟೋಪಿ ಮಾರ್ಕ್ಸ್‌ನಿಗೆ ಹೊಂದುವಂತೆ ದಲಿತರ ಸಮಸ್ಯೆಗಳ ಟೋಪಿ ಹೊಂದುವುದಿಲ್ಲ"[೪] ಆದ್ದರಿಂದ ಬಂಡಾಯ ಕಾದಂಬರಿಕಾರರ ಮನೋಧರ್ಮ ಮಾರ್ಕ್ಸ್ ಹಿನ್ನೆಲೆಯಲ್ಲಿ ಪ್ರೇರಿತಗೊಂಡರೆ, ದಲಿತ ಕಾದಂಬರಿಕಾರರ ಮನೋಧರ್ಮ ಅಂಬೇಡ್ಕರ್ ಸಿದ್ಧಾಂತದ ಮೂಲಕ ಪ್ರೇರಣೆಗೊಂಡಿವೆ.

ದಲಿತ ಸಂವೇದನೆಯನ್ನು ದಲಿತೇತರ ಲೇಖಕ ಬರೆದನೆಂದರೆ ದಲಿತ ಸಾಹಿತ್ಯವಾಗುವುದೇ ಎಂಬ ಪ್ರಶ್ನೆ ಎದುರಾಗುತ್ತದೆ. ಮನಜರವರು ಈ ಪ್ರಶ್ನೆಗೆ "ಗಂಡು ಪ್ರಸೂತಿವೈದ್ಯ ಎಷ್ಟೇ ಮೇಧಾವಿ ಯಾಗಿದ್ದರೂ ಶಿಶು ಜನ್ಮಾದಿಗಳ ಬಗೆಗೆ ಎಷ್ಟೇ ತಿಳುವಳಿಕೆ ಪಡೆದಿದ್ದರೂ ಹೆರಿಗೆಯ ನೋವನ್ನು ತಿಳಿದಿರಲಾರ ಹಾಗೆಯೇ ದಲಿತೇತರ ಲೇಖಕ ದಲಿತರ ಸಮಸ್ಯೆಯನ್ನು ಅನುಭವಿಸಲಾರ"[೫] ಎಂದು ಉತ್ತರಿಸುತ್ತಾರೆ. ಆದರೆ, ದಲಿತ ಸಂವೇದನೆ ಕುರಿತು ದಲಿತೇತರ ಲೇಖಕರ ಕಾದಂಬರಿಗಳು ಪ್ರಕಟವಾಗಿದೆ. ಉದಾ. ಶಿವರಾಂ ಕಾರಂತರ ಚೋಮನ ದುಡಿ ಈ ಕೃತಿ ದಲಿತ ಕಾದಂಬರಿಯೆಂದು ಪರಿಗಣಿಸಲ್ಪಡುವುದು ಎಂಬುದು ಬಹುಶಃ ಮೇಲಿನ ಹೇಳಿಕೆಯಲ್ಲಿ ಸ್ಪಷ್ಟವಾಗಬಹುದು. ಆದರೆ, ದಲಿತರ ಹಾಗೇ ದಲಿತೇತರರ ಲೇಖಕರು ಅಂದರೆ, ಬಂಡಾಯ ಕಾದಂಬರಿಗಳಲ್ಲಿ ದಲಿತರ ಸಮಸ್ಯೆಯನ್ನು ಚಿತ್ರಿಸಿದ್ದಾರೆ. ಆದರೆ ಅವುಗಳ ಧೋರಣೆ ಬೇರೆಯಾಗಿರಬಹುದು. ಅಭಿವ್ಯಕ್ತಿಸುವ ಶೈಲಿ, ಬರವಣಿಗೆ ಭಿನ್ನವಾಗಿರಬಹುದು. ಆದ್ದರಿಂದ "ದಲಿತರೇ ಬರೆದದ್ದು ದಲಿತ ಸಾಹಿತ್ಯವಾಗುತ್ತದೆಂದು ನಂಬಿ ಹೊರಟದ್ದೇ ಆದರೆ, ಸಾಹಿತ್ಯದಲ್ಲಿ ಮತ್ತೊಂದು ಅಸ್ಪೃಶ್ಯರ ಕೇರಿಯನ್ನು ನಿರ್ಮಾಣ ಮಾಡಿದಂತಾಗುತ್ತದೆ. ಆಗ ದಲಿತ ಸಾಹಿತ್ಯ ಒಂದೇ ವಾರ್ಡಿನ ರೋಗಿಗಳು ನರಳಿದ ದನಿಯಾಗುತ್ತದೆ"[೬]

ಎರಡು ಕೈಗಳು ಸೇರಿದಾಗಲೇ ಚಪ್ಪಾಳೆ-ಧ್ವನಿ. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಇದರಿಂದಾಗಿ ದಲಿತ ಬಂಡಾಯ ಕಾದಂಬರಿಕಾರರು ಹೊಸ ಹೊಸ ಅನುಭವಗಳ ಬೆನ್ನು ಹತ್ತಿ ಕಾದಂಬರಿಗಳನ್ನು ರಚಿಸಿದ್ದಾರೆ. ಒಂದು ಕಾದಂಬರಿಯಲ್ಲಿ ಜೀವನ ಕಂಡರೆ ಮತ್ತೊಂದು ಕಾದಂಬರಿಯಲ್ಲಿ ಮತ್ತೊಂದು ಜನಾಂಗದ ಆಶಯ ಆಶೋತ್ತರ ಬದುಕು ಬವಣೆಗಳನ್ನು ಬಿತ್ತರಿಸುತ್ತವೆ. ರಂಜಾನ್ ದರ್ಗಾ ಹೇಳುವಂತೆ "ಬದುಕಿನಲ್ಲಿರುವ ಕ್ರೌರ್ಯದ ವಿರುದ್ಧ ಹೋರಾಡುತ್ತ ಅದರ ಸೌಂದರ್ಯವನ್ನು ಕಾಪಾಡುವುದು ಇಬ್ಬರ ಹೊಣೆಗಾರಿಕೆಯಾಗಿದೆ. ಈ ಹೊಣೆಯನ್ನು ನಿರ್ವಹಿಸಲು ಮತ್ತು ಮೂರ್ತಗೊಳಿಸಲು ಜವಾಬ್ದಾರಿಯನ್ನು ನಿರ್ವಹಿಸಲು ಬಳಸಿಕೊಳ್ಳುವ ಅನುಭವ ದ್ರವ್ಯಗಳು ಮಾತ್ರ ಎರಡೂ ಕಡೆ ಬೇರೆ ಬೇರೆಯಾಗಿರುತ್ತದೆ".[೭] ವಿಭಿನ್ನ ಅನುಭವಗಳಿಂದ ಸೃಷ್ಟಿಗೊಂಡ ಕಾದಂಬರಿಗಳು ಒಟ್ಟು ಕೆಳಸಂಸ್ಕೃತಿಯ ಬದುಕನ್ನು ಕಟ್ಟಿಕೊಡುತ್ತವೆ. ಹೀಗಾಗಿ ವಿಭಿನ್ನ ಸಾಮಾಜಿಕ ಬದಲಾವಣೆಯ ಸಂದರ್ಭ ದಲ್ಲಿ ದಲಿತ ಮತ್ತು ದಲಿತೇತರ ಲೇಖಕರು ಸಮಗ್ರವಾಗಿ ಕೆಳಸಂಸ್ಕೃತಿಗಳ ಬದುಕನ್ನು ಚಿತ್ರಿಸುವುದರಿಂದ ಈ ಅಧ್ಯಯನದಲ್ಲಿ ದಲಿತ-ಬಂಡಾಯ ಕಾದಂಬರಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಮೇಲೆ ಚರ್ಚಿಸಿದಂತೆ ದಲಿತ-ಬಂಡಾಯ ಲೇಖಕರ ವ್ಯತ್ಯಾಸ ಹಾಗೂ ಸಂಬಂಧಗಳ ಅಂಶಗಳು ಹೇಗೆ ಗೋಚರವಾಗುತ್ತದೆಂದು ತಾತ್ವಿಕವಾಗಿ ಮುಂದೆ ವಿವೇಚಿಸಲಾದ ಕಾದಂಬರಿಗಳ ಮೂಲಕ ಗಮನಿಸಬಹುದು.

**ದೇವನೂರು ಮಹಾದೇವ**

'ಕುಸುಮ ಬಾಲೆ' ಕಾದಂಬರಿ ದೇವನೂರು ಮಹಾದೇವರ ಎರಡನೇ ಕೃತಿ. ಭಾಷೆ ತಂತ್ರ, ರೂಪ, ಶೈಲಿ ಎಲ್ಲವೂ ಕನ್ನಡದ ಇತರ ಕಾದಂಬರಿಗಳಿಗಿಂತ ಭಿನ್ನವಾಗಿರುವುದರಿಂದ, ಕನ್ನಡ ಸಾಹಿತ್ಯಕ್ಕೊಂದು ಅದ್ಭುತ ಕೊಡುಗೆಯಾಗಿದೆ. ಹಾಗಾಗಿ ದಲಿತರ 'ಮಹಾಕಾವ್ಯ' ವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಕುಸುಮ ಬಾಲೆ ದಲಿತ ವರ್ಗದ ಬದುಕಿನ ಆಯಾಮಗಳನ್ನು ಹಿಡಿದಿಡುತ್ತಲೇ ವ್ಯವಸ್ಥೆ ಒಡ್ಡಿದ ಕ್ರೌರ್ಯವನ್ನು ಯಾವ ರೋಷ, ಸಿಟ್ಟೂ ಇಲ್ಲದೇ ಆ ವ್ಯವಸ್ಥೆಯೊಳಗಿದ್ದುಕೊಂಡೇ ಮೌನ ಪ್ರತಿಭಟನೆ ಮಾಡುತ್ತದೆ. ಆ ಮೂಲಕ ಕಾದಂಬರಿ ಪ್ರತಿಸಂಸ್ಕೃತಿ ನಿರ್ಮಾಣದತ್ತ ಮುಖಾ ಮಾಡುತ್ತದೆ. ಕಾದಂಬರಿ ಆರಂಭವಾಗುವುದು ಸಹಜ ಸನ್ನಿವೇಶದೊಂದಿಗೆ, ಹಳ್ಳಿಯೊಂದರ ಜಗುರಿ ಕಲ್ಲ ಮೇಲೆ ಕುಳಿತುಕೊಂಡ ಜೋತಮ್ಮಗಳು ಮಾತನಾಡುತ್ತಿರುತ್ತಾರೆ. ಕಷ್ಟ-ಸುಖಗಳನ್ನು ಕೆದಕುತ್ತ ಹಳ್ಳಿಯೊಂದರ ತಲೆ ಮಾರುಗಳ ಹಿಂದಿನ ಇತಿಹಾಸದ 'ಗುಟ್ಟು' ಬಿಚ್ಚುತ್ತಾರೆ. ಇವರ ಮಾತಿನ ಮುಖ್ಯ

ವಿಷಯ ಕುಸುಮ ಚೆನ್ನರ ಸಂಬಂಧ ಕುರಿತದ್ದು. ಕುಸುಮ ಮದುವೆಯಾದ ಗಂಡನಿಂದಲ್ಲದೆ ಬೇರೊಬ್ಬನಿಂದ ಮಗುವನ್ನು ಪಡೆದಿದ್ದಾಳೆ. ಗಂಡ ತನ್ನದಲ್ಲದ ಮಗುವಿನ ಮುಖ ನೋಡಿ ಆಕೆಯನ್ನು ಮನೆಯಿಂದ ಹೊರಹಾಕುತ್ತಾನೆ. ಗಂಡ ಬಿಟ್ಟ ಕುಸುಮ ಪ್ರತಿನಿತ್ಯ ಚೆನ್ನನ್ನು ಕೂಡುತ್ತಿರುತ್ತಾಳೆ. ಈ ಘಟನೆಯಿಂದ ಜಾತಿ ಸಂಘರ್ಷ ಬೆಳೆಯುತ್ತದೆ. ಚೆನ್ನನ ಕೊಲೆಯಾಗುತ್ತದೆ. ಕುಸುಮಳ ಬದುಕು ದುರಂತಕ್ಕೀಡಾಗುತ್ತದೆ. ಜೋತಮ್ಮಗಳು ಮಾತನಾಡಿಕೊಳ್ಳುವಾಗ ಆ ಹಳ್ಳಿಯ ಇಂಥ ಹಲವಾರು ಪ್ರಕರಣಗಳು ಗರಿ ಬಿಚ್ಚುತ್ತ ಹೋಗುತ್ತವೆ.

ಅಕ್ಕಮಾದೇವಮ್ಮಾ ಗಂಡ ಸತ್ತ ಹನ್ನೆರಡು ತಿಂಗಳಿಗೆ ಹಟ್ಟಿ ಜೀತಗಾರನಲ್ಲಿ ಹುಟ್ಟಿದ ಯಾಡನನ್ನು ಗಂಡನ ವಂಶದ ಮುಂದುವರಿಕೆಯಾಗಿ ಸ್ವೀಕರಿಸುತ್ತಾಳೆ. ಇದನ್ನು ಆಕೆಯ ಭಾವ ಮೈದುನರು ತಿರಸ್ಕರಿಸುತ್ತಾರೆ. ನಂತರ ಆಕೆಯು ಇಹಕ್ಕೆ ಅಂಟಿದ ಛಲವನ್ನು ವ್ಯಕ್ತಪಡಿಸಿ ತನ್ನ ಮಗನ ಭವಿಷ್ಯವನ್ನು ರೂಪಿಸುವ ನೆಲೆಗೆ ಬದ್ಧವಾಗುತ್ತಾಳೆ. ಲೋಕವು ಗ್ರಹಿಸುವ ಅನೈತಿಕ ಸಂಬಂಧವನ್ನು ತಾನೂ ವಿರೋಧಿಸುತ್ತಾಳೆ, ಪರಿಶುದ್ಧಳು ಎಂಬುದನ್ನು ಉದ್ದಕ್ಕೂ ಸಾಬೀತುಪಡಿಸುವ ಉತ್ಸಾಹ ತೋರುತ್ತಾಳೆ. ಆಕೆಯ ಭಾವ ಗಂಡನ ಆಸ್ತಿ ಪಾಲು ಕೊಡಲು ನಿರಾಕರಿಸುತ್ತಾನೆ. ಹಾಗಾಗಿ ಬದುಕಿಗಾಗಿ ಹೋಟಲ್ ತೆರೆದು ಮಗನನ್ನು ಬೆಳೆಸುತ್ತಾಳೆ. ಯಾಡ ದೊಡ್ಡವನಾದ ಮೇಲೆ ಆರ್ಥಿಕ ಸ್ಥಿತಿಯೂ ಉತ್ತಮವಾಗುತ್ತದೆ. ನಂತರ ಬಸಪ್ಪಸೋಮಿ ಹಾಗೂ ಸಿದ್ದೂರರ ಮನೆಯೂ ಯಾಡನ ತಲೆಯಲ್ಲಿ ಕೊಟ್ಟಿಗೆಯಾಗಿ ಪರಿವರ್ತನೆಯಾಗುತ್ತದೆ. ನಂತರ ಅವರ ಅಸ್ತಿತ್ವವು ಕಡೆಗೆ ಮುಖ್ಯವಾಗುವುದಿಲ್ಲ. ಮುಖ್ಯ ಕೊಂಡಿಗಳು ಮಾತ್ರ ಬೆಳೆಯುತ್ತಾ ಹೋಗುತ್ತವೆ.

ಯಾಡನ ಆರ್ಥಿಕ ಸುಧಾರಣೆಯು, ವ್ಯವಸ್ಥೆಯು ರೂಪಿಸಿರುವ ನಿಯಮಗಳ ಅಡಿಯಲ್ಲಿ ತಿರಸ್ಕೃತಗೊಳ್ಳುವಂಥದ್ದು. ಆದರೆ ಯಾವುದೇ ಹಿಂಸಾತ್ಮಕ ಗತಿಗಳನ್ನು ಬಳಸಿಕೊಳ್ಳದೆ, ಇರುವ ಸ್ಥಿತಿಯಿಂದ ಇಲ್ಲದ ಸ್ಥಿತಿಗೆ ಸಂಪತ್ತನ್ನು ವರ್ಗಾಯಿಸಿಕೊಳ್ಳುವ ಅವನ ಬುದ್ಧಿವಂತಿಕೆಯು ಸ್ವೀಕಾರ್ಹವಾಗುತ್ತದೆ. ಇದು ಸಹಜವಾಗಿ ಬದುಕಬೇಕೆಂಬ ಛಲವಿರುವ ಜೀವಿಯು ಅಷ್ಟೇ ಸಹಜವಾಗಿ ಕೆಲವು ಉಪಾಯಗಳನ್ನು ಶೋಧಿಸಿಕೊಳ್ಳುವ ಸ್ಥಿತಿಗೆ ಸಂಬಂಧಿಸಿದೆ. ಯಾಡ-ಯಾಡೇಗೌಡನಾದುದು ಬದುಕನ್ನು ಛಲದಿಂದ ಆರಿಸಿಕೊಂಡಿದುದು ಪ್ರಮುಖವಾಗಿದೆ. ಅಲ್ಲದೇ ಅವಮಾನಗೊಳಿಸಿದ ಸಮಾಜದೊಂದಿಗೆ ತಾನು ಸೇಡು ತೀರಿಸಿಕೊಂಡಂತಾಗಿದೆ. ಲೇಖಕರು 'ಇದಕ್ಕೆ ಸಮಾನಾಂತರವಾಗಿ ಚೆನ್ನನ ಬಳಗದವರ ಬದುಕನ್ನು ನಮ್ಮ ಮುಂದಿಟ್ಟು ಆತ್ಮಗೌರವ ಹಾಗೂ ಕಾಯಕ ಗೌರವ ಎಂದರೇನು? ಎಂಬುದನ್ನು ನಮ್ಮ ಹೋಲಿಕೆ ಹಾಗೂ ಆಯ್ಕೆಗೆ ಬಿಡಲಾಗಿದೆ. ಅಪಮಾರ್ಗದಿಂದ ಬರುವ ಅರ್ಥ ಸಂಪಾದನೆಯನ್ನು ಅಲ್ಲಗೆಳೆದು ದುಡಿಯುವ ವರ್ಗವು ಮರ್ಯಾದೆಯಿಂದ

ಮಾನವ ಘನತೆಯಿಂದ ಶ್ರಮಿಕರಾಗಿ ಬದಕಲು ಸಾಧ್ಯ ಎಂಬುದನ್ನು ಸೂಚಿಸಲಾಗಿದೆ. ಶ್ರಮ ಮೂಲವಾದ ಸುಭದ್ರ ಆರ್ಥಿಕ ನೀತಿಯನ್ನು ಮಹಾದೇವ ಅವರು ಒತ್ತಾಯಿಸುತ್ತಾರೆ."[೮] ಹಾಗಾಗಿ ಯಾಡೇಗೌಡನ ಫ್ಯೂಡಲಿಸ್ಟಿಕ್ ಮೌಲ್ಯಗಳನ್ನು ಧಿಕ್ಕರಿಸುತ್ತ, 'ಗೇದು' ಹೊಟ್ಟೆ ತುಂಬಿ ಉಂಡು ಬಂದ ದುಡಿವ ವರ್ಗದ ಗೌರವವನ್ನು ಕಾಯ್ದಿರಿಸಲಾಗಿದೆ. ಕಳ್ಳತನ, ಸಣ್ಣತನ, ನೀಚತನ, ಮುಂತಾದ ಹೇಸಿಗೆ ತರುವ ಕಾರ್ಯಗಳನ್ನು ಅನಾವರಣ ಮಾಡಿ ಶ್ರಮಿಕ ವರ್ಗವೂ ಕೂಡ ಇದನ್ನು ಒಪ್ಪದೆ ಅಲ್ಲಗಳೆಯುವಂತೆ ಏರ್ಪಡಿಸಲಾಗಿದೆ.

ಹುಟ್ಟಿನ ಹಿನ್ನಲೆಯಲ್ಲಿ ಮಾನವೀಯವಾಗಿ ಗೌರವಿಸಿಕೊಳ್ಳುವವನಂತೆ ಯಾಡ ಅಕ್ರಮ ಸಂತಾನದ ಶಿಶು ಮಲ್ಲಾಜಮ್ಮನನ್ನು ಸೊಸೆಯಾಗಿ ಸ್ವೀಕರಿಸುತ್ತಾನೆ. ಇದು ವಂಶದಲ್ಲಿ ರಕ್ತಗತವಾಗಿ ಮುಂದುವರೆಯುತ್ತಿರುವಂತೆ ಕಾಣುತ್ತದೆ. ಸೋಮಪ್ಪ ಮಲ್ಲಾಜಮ್ಮರ ದಾಂಪತ್ಯ ಸಂಕೇತವಾಗಿರುವ ಕುಸುಮ, ಹೊಲೆಯರ ಚನ್ನನೊಡನೆ ಸಂಬಂಧ ಬೆಳೆಸಿ, ಅವನಿಂದ ಮಗು ಪಡೆಯುತ್ತಾಳೆ. ಆಕೆಯ ಗಂಡ ತಿರಸ್ಕರಿಸಿದರೂ, ವ್ಯವಸ್ಥೆಯು ಆಕೆಯ ಮಗನನ್ನು ರಕ್ಷಿಸುತ್ತದೆ. ಯಾಡನ ಬದುಕು ದರ ಧೋರಣೆಯು ಸೋಮಪ್ಪನಲ್ಲಿ ಇಲ್ಲವಾದ್ದರಿಂದ, ಮಗಳ ಆಶಯವನ್ನೂ ಚನ್ನನನ್ನು ಕೊಲೆ ಮಾಡಿಸುವುದರ ಮೂಲಕ ತಿರಸ್ಕರಿಸುತ್ತಾನೆ. ಬದುಕು ರೂಪುಗೊಳ್ಳುತ್ತಿರುವ ಸಾಂಸ್ಕೃತಿಕ ಒತ್ತಡಗಳ ಅವಶ್ಯಕತೆಯಲ್ಲಿ ಮನುಷ್ಯನ ಆಶಯಗಳು ಕ್ರಿಯಾತ್ಮಕವಾಗುವುದನ್ನು ಕೃತಿ ಸಾವಧಾನದಿಂದ ಬದುಕು ಪರವಾದ ಹಿನ್ನಲೆಯಲ್ಲಿ ಖಚಿತಪಡಿಸುತ್ತದೆ.

ಹೊಲೆಯ ಕೇರಿಯಲ್ಲಿ ತೂರಮ್ಮನ ಮಗಳು ಕೆಂಪಿಯ ಬದುಕು ಕೂಡ, ವ್ಯವಸ್ಥೆಗೆ ವಿರುದ್ಧವಾದ ಸ್ಥಿತಿಯಲ್ಲಿ ಈಜುತ್ತದೆ. ಈಕೆಯೊಡನೆ ಸಂಬಂಧವಿರುವ ಗಂಡು ಯಾವ ಜಾತಿಯವನು ಎಂದು ಸ್ಪಷ್ಟವಾಗದಿದ್ದರೂ, ವಿವಾಹೇತರ ನೆಲೆಯಲ್ಲಿ ತನ್ನನ್ನೂ ಗುರುತಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಈಕೆ ಮಕ್ಕಳು ಪಡೆಯುವ ಆಶೆಯಿಂದ ತೂರಮ್ಮನಲ್ಲಿ ತನ್ನ ಇಂಗಿತ ವ್ಯಕ್ತಪಡಿಸುತ್ತಾಳೆ. ಇದನ್ನು ಅನುಮೋದಿಸುವುದು ಕೆಳಜಾತಿಗಳು, ಕೆಳವರ್ಗಗಳು ವ್ಯವಸ್ಥೆಯು ಸ್ವೀಕರಿಸುತ್ತಿರುವ ಪವಿತ್ರವಾದ ಎಲ್ಲೆಯನ್ನು ಮಾಡುವುದಕ್ಕೆ ಸೂಚನೆಯಾಗಿದೆ. ತೂರಮ್ಮ ಕೆಂಪಿಯ ಮಗುವನ್ನು 'ಇದಿಯಮ್ಮ'ನಿಂದ ಉಳಿಸಿಕೊಳ್ಳುವ ಪ್ರಯತ್ನವು ಜೀವಪರವಾದ ಧೋರಣೆಯಾದರೂ, ವ್ಯವಸ್ಥೆಯ ಆಕರವನ್ನು ಕಾಪಾಡಿಕೊಳ್ಳದ ಆಶಯದ್ದೂ ಆಗಿದೆ. ಇಲ್ಲಿಯೆ ಪರಂಪರೆಯ ಪ್ರಬಲ ಹಿಡಿತವಾಗಿರುವ 'ಇದಿ'ಯನ್ನು ವಿರೋಧಿಸಿ ಸಾಧ್ಯತೆಯೆಡೆಗೆ ಚಲಿಸುವ ಆಶಯವೂ ಇದೆ. ಆದ್ದರಿಂದ ತೂರಮ್ಮ ಇರುವ ಮತ್ತು ಇರಬೇಕಾದ ಸ್ಥಿತಿಗಳ ನಡುವಿನ ಗತಿಗೆ ಸಂಬಂಧಿಸಿದ ಸಮರ್ಥ ಪ್ರತಿನಿಧಿಯಾಗುತ್ತಾಳೆ. ಬದುಕು ಮುಖ್ಯವಾಗುವ ಸಂದರ್ಭದಲ್ಲಿ ಸಾಮಾಜಿಕ ಸ್ವಘೋಷಿತ ನಿಯಂತ್ರಣಗಳನ್ನು ಮೀರುವ ಉತ್ಸಾಹ

ಕಾಣುವುದು ಕೆಳವರ್ಗಗಳಲ್ಲಿ ಮಾತ್ರ. ಈ ಪ್ರಕ್ರಿಯೆಯನ್ನು ಹೆಣ್ಣು ಸಜೀವವಾಗಿಸಲು ದುಡಿಯುತ್ತಾಳೆ ಎಂಬುದಕ್ಕೆ ಸಮಾಜದ ಗತಿಯನ್ನು ಗುರುತಿಸುವ ಎಲ್ಲ ಕೃತಿಗಳಲ್ಲೂ ನಿದರ್ಶನಗಳಿವೆ. ತೂರಮ್ಮನ ಆ ಬಗೆಯ ವ್ಯಕ್ತಿತ್ವವು ಕೆಂಪಿಯ ವರ್ತಮಾನ ಮತ್ತು ಭವಿಷ್ಯವನ್ನು ನಾವು ಗೌರವಿಸುವಂತೆ ಮಾಡುತ್ತದೆ. ವ್ಯವಸ್ಥೆಯು ತನ್ನ ಪರವಾಗಿ ರಚಿಸಿಕೊಂಡಿರುವ ಸ್ಥಿರ ಮೌಲ್ಯಗಳನ್ನು ಮೀರುವುದು ಕೃತಿಯ ಕೇಂದ್ರವಾಗಿದೆ. ಅಮಾಸ ಮತ್ತು ಗಾರಸಿದ್ಧಮಾವ ಈ ದಿಕ್ಕಿನಲ್ಲಿ ಭವಿಷ್ಯ ಮುಖಿ ಚಲನೆಯಾಗಿದ್ದಾರೆ. ಮುಟ್ಟಿನ ಸೀರೆಗಳನ್ನು ಕದ್ದು ಮಾರಾಟ ಮಾಡುವುದನ್ನು ಅಮಾಸ ದಂಧೆಯಾಗಿ ಮಾಡಿಕೊಂಡಿದ್ದಾನೆ. ಗಾರಾಸಿದ್ಧಮಾವ ಬಾಯಾರಿಕೆಯಾದಾಗ, ಹಸಿವಾದಾಗ ಕೈಗೆ ಸಿಕ್ಕಿದ ಮರದಲ್ಲಿ ಎಳನೀರು ಕಿತ್ತು ಕುಡಿಯುತ್ತಾನೆ. ಸಿಕ್ಕಿಕೊಂಡಾಗ ವ್ಯವಸ್ಥೆಯ ಸೂತ್ರಗಳನ್ನು ವ್ಯವಸ್ಥೆಗೇ ಅಂಟಿಸಿ ಕೈತೊಳೆದುಕೊಳ್ಳುತ್ತಾನೆ. ದಲಿತ ಜಗತ್ತಿನ ದೈಹಿಕ ಆಶೋತ್ತರಗಳನ್ನು ಈಡೇರಿಸುವಂತಿರುವ ಈತ, ಒಟ್ಟು ಸ್ಥಿತಿ ಬದ್ಧತೆಯಲ್ಲಿ ಮೀರಬೇಕಾದ್ದನ್ನು ನವುರಾದ ಹಾಸ್ಯದಲ್ಲಿ ವ್ಯಕ್ತಪಡಿಸುತ್ತಾನೆ. ಮೇಲುಜಾತಿಯವರ ಹತ್ತಿರವೂ, ಚೆನ್ನನ ಅಪ್ಪನ ಹತ್ತಿರವೂ ಅಥವಾ ದಲಿತ ಮುಖಂಡರ ಹತ್ತಿರವೂ ವರ್ತಿಸುವುದನ್ನು ಈ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಗಮನಿಸಬೇಕು. ದಲಿತ ಜಗತ್ತು ಪುರಾಣದೊಳಕ್ಕೆ ಮತ್ತೆ ತಲೆಕೊಡುತ್ತಿರುವುದರಲ್ಲಿ ಗಾರಸಿದ್ಧಮಾವ ಕೇಂದ್ರವಾಗುತ್ತಾನೆ. ವಾಸ್ತವದ ಅಸಹಾಯಕತನದ ಅತಿರೇಕಗಳನ್ನು ಸೃಷ್ಟಿಸಿಕೊಳ್ಳುವ ಭ್ರಮೆಯಲ್ಲಿ ಗೆಲ್ಲುವುದು ಮತ್ತು ಮರೆಯುವುದು ವರ್ಗೀಕೃತ ಸಮಾಜದ ಧೋರಣೆಗಳಲ್ಲಿ ಪ್ರಮುಖವಾದುದು. ವ್ಯವಸ್ಥೆಯ ಕಾಳಜಿಗಳು ಕ್ರೌರ್ಯದ ತಾಣವಾದಾಗ, ತಲ್ಲಣಕ್ಕೆ ಈಡಾದ ವರ್ಗದ ನೋವುಗಳನ್ನು, ಸಂಕಟಗಳನ್ನು ಭ್ರಮೆಯ ಮೂಲಕ ಒಡೆಯುವ, ಪಲ್ಲಟ ಮಾಡುವ ಆ ಮೂಲಕ ವರ್ತಮಾನವನ್ನು ಭವಿಷ್ಯದ ಕಾಯುವಿಕೆಗಾಗಿ ಆಪ್ಯಾಯ ಮಾನವಾಗುವಂತೆ ಮಾಡುವುದು ಕೃತಿಯ ಅರ್ಥವ್ಯಾಪ್ತಿಯನ್ನು ಹಿಗ್ಗಿಸಿದೆ.

ಚನ್ನನ ಅಪ್ಪ ಹೇಳುವ ನರಿಗೆ ಲಿಂಗಧಾರಣೆ ಆಗುವ ಕತೆಯು, ಬೇರೆ ಜಾತಿಯ ಆಚರಣೆಯು ಕನಿಷ್ಟವಾದುದು ಎಂದು ಹೇಳಿಕೊಳ್ಳುತ್ತಲೇ, ತನ್ನ ಜಾತಿಯ ಬದುಕುವ ರೀತಿಯನ್ನು ಗೌರವಿಸಿಕೊಳ್ಳು ವಂಥದ್ದೇ ಆಗಿದೆ. ಚನ್ನನನ್ನೂ ದೊರೆಯ ದರ್ಬಾರಿನಲ್ಲಿ ಕಾಣಬೇಕೆಂಬುದಕ್ಕೆ ಅವರು ಹಂಚಿಕೆ ಹಾಕಿಕೊಳ್ಳುವ ರೀತಿ ಮತ್ತು ಸಂಬಂಧ ದೊಡ್ಡದು ಎಂಬುದರ ಹಿನ್ನೆಲೆಯಲ್ಲಿ ಮಗ ಬಂದೇ ತೀರುತ್ತಾನೆಂಬ ಭರವಸೆ, ಬದುಕು ಅವರ ಭವಿಷ್ಯ ಮುಖಿ ನಿರೀಕ್ಷೆಗಳಿಗೆ ರಕ್ತಮಾಂಸ ತುಂಬಲು ಸಹಾಯಕವಾಗಿದೆ. ಕುರಿಯಯ್ಯನ ನನ್ನಿ ಇಂಥದೇ ಆವರಣ ಸೃಷ್ಟಿಸಲು ಪ್ರಯತ್ನಿಸಿದರೂ, ಅದು ಸೃಷ್ಟಿಯಾಗುವ ನೆಲೆ ತೀರಾ ಸೀಮಿತವಾದದ್ದು. ಜಾತಿ ಬದ್ಧವಾದ ಸ್ಥಿತಿಯು ಜಾತಿ ಬದ್ಧವಾಗಿ ಯೋಚಿಸುವ ರೀತಿ ಇದಾಗಿದೆ.

ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲಗೊಂಡ ಸ್ತ್ರೀ, ವ್ಯವಸ್ಥೆಯ ಅಡಿಯಲ್ಲಿ ಶೋಷಣೆಗೆ ಒಳಗಾಗುತ್ತಿದ್ದರೂ ಅವಳು ಮಾನವೀಯತೆಯನ್ನು ಜೀವಂತವಾಗಿ ಉಳಿಸಿಕೊಂಡಿರುತ್ತಾಳೆ. ಆದರೆ, ಎಲ್ಲಾ ಪರಿಸ್ಥಿತಿಯಿಂದಲೂ ಸದೃಢಗೊಂಡ ಕೆಳವರ್ಗದ ಹೆಣ್ಣು ಮಾನವೀಯತೆಯನ್ನು ನಿರಾಕರಿಸುತ್ತಾಳೆ. ಇದು ಒಂದು ತರಹ ಅಹಂಕಾರ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಾ ಮನುಷ್ಯತ್ವವನ್ನೇ ಕಳೆದುಕೊಂಡಾಗುತ್ತದೆ. ಕೆಳವರ್ಗದ 'ಸದೃಢ' ಹಾಗೂ 'ದುರ್ಬಲ' ಸ್ತ್ರೀಯರ ಚಿತ್ರಣವನ್ನುಳ್ಳ ಕಾದಂಬರಿ 'ಮಾಗಿ'.

ನಮ್ಮ ಗ್ರಾಮೀಣ ರೈತಾಪಿ ವರ್ಗಗಳಿಗೆ ಮಾಗಿ ಕಾಲ 'ಸಂಕ್ರಮಣ ಕಾಲ'. ಈ ಸಂದರ್ಭದಲ್ಲಿ ರೈತರು ಹೊಲದಲ್ಲಿ ಶ್ರಮಪಡುತ್ತಾರೆ. ಹೀಗೆ ಶ್ರಮ ಪಡೆದದ್ದರ ಫಲವಾಗಿ ವಸಂತ ಕಾಲದಲ್ಲಿ ಸಂತೋಷದ ಕ್ಷಣಗಳನ್ನು ಅನುಭವಿಸುತ್ತಾರೆ. ಈ ಹಿನ್ನಲೆಯಲ್ಲಿ 'ಮಾಗಿ' ಕಾದಂಬರಿಯ ಮಾಗವ್ವ ಕಷ್ಟದ ಮಡುವಿನಲ್ಲಿ ಮಾಗಿ, ಮಗ ವಸಂತನಿಗೆ ಶಿಕ್ಷಣ ಕೊಡಿಸುವುದರ ಮೂಲಕ ಬದುಕಿನ ಹೊಸ ನೆಲೆಗಳನ್ನು ಪಡೆಯುತ್ತಾಳೆ. ದಲಿತವರ್ಗದ ಹೆಣ್ಣಾದ ಮಾಗಿ ಯಜಮಾನ್ ದಾಸಪ್ಪನ ಸೊಸೆಯಾಗಿ, ಕುಡುಕ ಗಂಡ ಗಿರಿಯಪ್ಪನ ಹೆಂಡತಿಯಾಗಿ, ಅತ್ತಿಗೆ-ನಾದಿನಿಯಾಗಿ, ತಾಯಿಯಾಗಿ ಬಡತನದ ಅತ್ಯಂತ ದಾರುಣ ಸ್ಥಿತಿಯಲ್ಲಿ ಬದುಕನ್ನು ನಡೆಸುತ್ತಾಳೆ. ಮಾಗಿಯ ಭಾವ ಚಾಮನು ಅಲ್ಪ ಆಸ್ತಿಯ ದುರಾಸೆಗಾಗಿ ಯಜಮಾನ್ ದಾಸಪ್ಪರ ಮನೆತನವನ್ನು ಒಡೆದುಬಿಡುತ್ತಾನೆ. ಹಾಗಾಗಿ ಮಾಗಿ ಗಂಡನ ಪಾಲಿನ ಆಸ್ತಿಗಾಗಿ ಚಾಮನಲ್ಲಿ ಹಕ್ಕನ್ನು ಕೇಳುವಾಗ, ಚಾಮ ಅಮಾನವೀಯವಾಗಿ ವರ್ತಿಸುತ್ತಾನೆ. ಆಸ್ತಿ ಪಾಲಿನ ವಿಷಯ ರಾಜಕೀಯ ವಿಷಯವಾಗಿ ಬಿಡುತ್ತದೆ. ಚಾಮ ಊರ ಪಂಚಾಯತಿಯಲ್ಲಿ 'ಮಾಗಿ' ಗಿರಿಯಪ್ಪನ ಅಧಿಕೃತ ಹೆಂಡತಿ ಅಲ್ಲವೆಂದು ಹಠಹಿಡಿಯುತ್ತಾನೆ. ಹಾಗಾಗಿ ಗಿರಿಯಪ್ಪನಿಗೆ ಮತ್ತೊಂದು ಮದುವೆ ಮಾಡಿಸುವ ಮೂಲಕ ಮಾಗಿಯ ಬದುಕಿನ ಆಸ್ತಿತ್ವವನ್ನು ಕಸಿದುಕೊಳ್ಳುತ್ತಾನೆ. ಅಲ್ಲದೇ ಗಿರಿಯಪ್ಪನ ಮೂಲಕ ಚಿತ್ರಹಿಂಸೆ ಕೊಡಿಸುತ್ತಾನೆ. ಹಾಗಾಗಿ ಮಾಗಿ ಏಕಕಾಲಕ್ಕೆ ಅಸ್ತಿಪಾಲನ್ನು, ಬಡತನವನ್ನು ಹಾಗೂ ಗಂಡನ ಹಿಂಸೆಯನ್ನು ಎದುರಿಸುವ ಸಂದರ್ಭ ಬಂದೊದಗುತ್ತದೆ. ಇಂಥ ಪರಿಸ್ಥಿತಿಯಲ್ಲೂ ಮಾಗಿ ತನ್ನ ಬದುಕಿನ ಮೇಲೆ ಇಟ್ಟಿರುವ ಆತ್ಮವಿಶ್ವಾಸವನ್ನು ಕಳೆದುಕೊಳ್ಳುವುದಿಲ್ಲ.

ಮನುಷ್ಯ ಮನುಷ್ಯನಾಗಿ ಬದುಕಬೇಕೆಂದು ವ್ಯಕ್ತಿಯ ಪ್ರಬಲ ಇಚ್ಛೆಯಾದಾಗ ಎಂಥ ಕಷ್ಟಗಳನ್ನೂ ಎದುರಿಸುವ ಛಲ ತೋರಿಸುತ್ತಾನೆ. ಅವುಗಳನ್ನು ತಿರಸ್ಕಾರದ ದೃಷ್ಟಿಯಲ್ಲಿ ನೋಡಿದಾಗ, ಕಾಣುವುದಕ್ಕಿಂತ, ತನ್ನ ವ್ಯಕ್ತಿತ್ವದ ಹದಗೊಳ್ಳಲು ಬಂದ ಪೂರಕ ಆಶಯಗಳು ಎಂದು ಗ್ರಹಿಸುವುದು. ಕಷ್ಟಗಳನ್ನು ಎದುರಿಸುವ ಸಂದರ್ಭದಲ್ಲಿ ವ್ಯಕ್ತಿಗೆ ಹೆಚ್ಚಿನ ವಿಶ್ವಾಸವನ್ನು ಕೊಡುತ್ತದೆ. ಇದನ್ನು ಗಂಭೀರವಾಗಿ ತೆಗೆದುಕೊಳ್ಳುವ ವ್ಯಕ್ತಿ ಸುಖದ ನೆಲೆಯನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಾನೆ. ಸುಖಕ್ಕೆ ಹಿಗ್ಗಿ

ಬಿಡುವ ವ್ಯಕ್ತಿ ಬದುಕನ್ನು ಎದುರಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಮಾಗಿ ಈ ಬಗೆಯ ಇಕ್ಕಟ್ಟಿನಲ್ಲಿ ಸಿಲುಕಿಕೊಂಡು, ಬದುಕಿ ಬಾಳಬೇಕೆಂಬ ಛಲದಿಂದ ಆತ್ಮವಿಶ್ವಾಸವನ್ನು ಬಲಪಡಿಸಿಕೊಳ್ಳುತ್ತಾಳೆ.

ಮಾಗಿ ತನ್ನ ಅಸಹಾಯಕ ಬದುಕಿನ ನಡುವೆ ಚಾಮನಲ್ಲಿ ಗಂಡನ ಪಾಲಿನ ಆಸ್ತಿಯನ್ನು ಪಡೆಯಬೇಕೆಂದು ಆಂತರಿಕವಾಗಿ ಹಟಹಿಡಿಯುತ್ತಾಳೆ. ಈ ಹಟದೊಂದಿಗೆ ಹಗಲಿರುಳು ದುಡಿದು ಅಲ್ಪಪ್ರಮಾಣದ ಹಣ ಸಂಪಾದಿಸುತ್ತಾಳೆ. ಚಾಮ ಊರ ಪಂಚಾಯಿತಿಯಲ್ಲಿ ಪಾಲು ಕೊಡಲು ನಿರಾಕರಿಸಿದಾಗ, ತಾನು ಸಂಪಾದಿಸಿದ ಅಲ್ಪ ಹಣದಿಂದ ಕೋರ್ಟಿನ ಮೊರೆ ಹೋಗುತ್ತಾಳೆ. ಲಾಯರ್ ಗುಂಡಪ್ಪನ ಮೂಲಕ ಕೋರ್ಟ್ ನೋಟಿಸ್ ಕೊಡಿಸಿದಾಗ ಚಾಮ ನೋಟಿಸ್‌ಗೆ ಹೆದರಿ ಪಾಲು ಕೊಡುತ್ತಾನೆ. ಅಂದರೆ ಇಲ್ಲಿ ಕಾನೂನಿನ ತಿರುವು ಪಡೆಯುವುದು ಗುರುತಿಸುತ್ತೇವೆ. ಇಂಥ ಸಂದರ್ಭವು 'ಕುಸುಮ ಬಾಲೆ' ಹಾಗೂ 'ಗತಿ' ಕಾದಂಬರಿಯಲ್ಲಿ ಮುಖಾ ಮುಖಿಯಾಗುವುದನ್ನು ಗಮನಿಸಬಹುದು.

ಮಾಗಿಯ ಸಂಬಂಧದ ವರ್ಗದವರು ಅವಳ ಹೀನ ಬದುಕನ್ನು ನೋಡಿ ಮತ್ತಷ್ಟು ಕೆಳಗಿನ ಸ್ಥಿತಿಗೆ ಒಯ್ಯುವ ಪ್ರಯತ್ನವನ್ನು ಮಾಡುತ್ತದೆ. ನಂತರ ಮಾಗಿಯ ಬದುಕು ಕ್ರಮೇಣ ಸುಧಾರಿಸತೊಡಗಿದಾಗ ಆ ಸಂಬಂಧ ವರ್ಗಗಳು ಮಾಗಿಯ ಆಶ್ರಯಕ್ಕಾಗಿ ಬರುತ್ತದೆ. ಸಮಾಜ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿ ಹೀನಸ್ಥಿತಿಗೊಂಡಾಗ ಎಲ್ಲಾರು ತಿರಸ್ಕಾರ ಮನೋಭಾವದಿಂದ ನೋಡುತ್ತಾರೆ. ಆದರೆ ಅದೇ ವ್ಯಕ್ತಿ (ಸಾಮಾಜಿಕವಾಗಿ) ಆರ್ಥಿಕವಾಗಿ ಸುಧಾರಿಸತೊಡಗಿದಾಗ ಸಮಾಜ ಗೌರವದಿಂದ ನೋಡುತ್ತದೆ. ಈ ಎರಡು ಕ್ರಿಯೆಯಿಂದ ಸಮಾಜದ ಮನ್ನಣೆಯನ್ನು ಗಳಿಸಲು ಸನ್ನದ್ಧಳಾಗಿ ಬಿಡುತ್ತಾಳೆ. ಆರ್ಥಿಕವಾಗಿ ಸದೃಢವಿಲ್ಲದಿದ್ದರೂ ಅವಳ ಮಾನವೀಯ ದೃಷ್ಟಿಯಿಂದ ಎಲ್ಲರ ಮನವನ್ನು ಗೆಲ್ಲುತ್ತಾಳೆ. ತನ್ನ ಸವತಿ ಸಣ್ಣಿ ಕೊಳೆತು ನಾರುತ್ತಿರುವ ಗಂಡನನ್ನು ತಿರಸ್ಕರಿಸಿ ತನ್ನ ವೈಯಕ್ತಿಕತೆಯನ್ನು ಪ್ರಧಾನ ಮಾಡಿಕೊಂಡು ತಿರುಗಿ ನೋಡದೆ ಆ ದಿಕ್ಕಿನಲ್ಲಿ ನಡೆದು ಬಿಡುತ್ತಾಳೆ. ಮಗಳು ಚಾಮಕ್ಕನ ಕಷ್ಟ ಸುಖಗಳಿಗೂ ಆಕೆ ಕುರುಡಿಯಾಗುತ್ತಾಳೆ. ಸಮಾಜ ಕೊಡುತ್ತಿರುವ ಸಣ್ಣತನಗಳನ್ನು ಮಾತ್ರ ಸ್ವೀಕರಿಸಿ ಬದುಕಿನ ಗತಿಯನ್ನು ಸರಳೀಕರಿಸಿ ಕೊಳ್ಳುತ್ತಾಳೆ. ಸಾಂಪ್ರದಾಯಿಕವಾಗಿ ಗಿರಿಯಪ್ಪನ ಅಧಿಕೃತ ಹೆಂಡತಿ ಸಣ್ಣಿಯೇ ಆಗಿದ್ದರೂ ಅದನ್ನು ಆಕೆ ಯಾವ ಗಳಿಗೆಯಲ್ಲೂ ಸಿದ್ಧ ಮಾಡುವುದಿಲ್ಲ. ಆ ಸ್ಥಾನವನ್ನು ಮಾಗಿ ತುಂಬುತ್ತಾಳೆ. ಮಕ್ಕಳಲ್ಲಿ ಹಿರಿಯ ಮಗ ಕರಿಯ, ಬಲಿಯುವ ತನಕ ತಾಯಿಯ ಬಳಿ ಇದ್ದು, ಹೆಂಡತಿ ಬಂದ ಮೇಲೆ ಮಾವನ ಮನೆ ಸೇರುತ್ತಾನೆ. ಆದರೆ ಅಲ್ಲಿ ಅವನು ಕೇವಲ ಒಬ್ಬ ಕೆಲಸಗಾರನಾಗಿ ದಿನ ದೂಡಬೇಕಾಗುತ್ತದೆ. ಅವನ ಹೆಂಡತಿ ಕಮಲಿ ರಾಜಪ್ಪನೊಂದಿಗೆ ಲೈಂಗಿಕ ಸಂಪರ್ಕ ಹೊಂದಿರುತ್ತಾಳೆ. ಹಾಗಾಗಿ ಈ ಸ್ಥಿತಿಯನ್ನು ನೋಡಿ ಕರಿಯ ತಾಯಿಯ ಆಶ್ರಯವನ್ನು

ಬಯಸುತ್ತಾನೆ. ಮಗನ ಸ್ಥಿತಿಯನ್ನು ನೋಡಿ ಮಾಗಿ ಅವನನ್ನು ಸಾಕಬೇಕಾದ ಹೊಣೆ ಹೊರುತ್ತಾಳೆ. ಎರಡನೆ ಮಗ ಚಿಕ್ಕ ಚಾಮ ಕಾಸಿಗೆ ಕಾಸು ಗಂಟು ಹಾಕಿ ಜಮೀನು ಬಿಡಿಸಲು ಕೂಡಿ ಹಾಕಿದ್ದ ಹಣವನ್ನು ದೋಚುತ್ತಾನೆ. ತಾಯಿಯನ್ನು ಕೇವಲವಾಗಿ ಕಾಣುತ್ತಾನೆ. ಮಾಗಿಯಂಥವಳ ಬದುಕೂ ಇಂಥ ಸ್ಥಿತಿಯನ್ನು ವಿರೋಧಿಸಲಾರದು ಎಂಬುದನ್ನು ಈ ಘಟಕಗಳು ಖಚಿತಪಡಿಸುತ್ತವೆ. ಎಲ್ಲವೂ ಇನ್ನೇನು ಇಂದಲ್ಲ ನಾಳೆ ಸರಿಯಾಗಬಹುದೆಂಬ ನಿರೀಕ್ಷೆಯು ಅವಳ ಬದುಕಿನ ಪ್ರಧಾನ ಆಶಯವಾಗಿದೆ. ಈ ನಿರೀಕ್ಷೆಯು ಅವಳ ಅದಮ್ಯ ಬದುಕಿನ ಮಾನವೀಯ ಸಂಕೇತಗಳಾಗಿ ಕಾಣುತ್ತವೆ.

ಮಾಗಿಯ ಬದುಕಿನಲ್ಲಿ ಕಷ್ಟಕೊಡುವವರು ನಾಶಗೊಳ್ಳುತ್ತಿದ್ದಾರೆ ಎಂಬುದಕ್ಕೆ ಹಾವು ಎದುರಾಗುವುದು ಮತ್ತು ಅದನ್ನು ಮಾಗಿ ವಸಂತರೇ ಕೊಲ್ಲುವ ಸಂದರ್ಭವನ್ನು ಮನಜ ಅವರು ಸಾಂಕೇತಿಕವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಅದಕ್ಕೆ ನಿದರ್ಶನವಾಗಿ ಓದಲು ಆಶೆಯಿರುವ, ಆದರೆ ಆರ್ಥಿಕವಾಗಿ ಕಷ್ಟದಲ್ಲಿರುವ ವಸಂತನಿಗೆ ಪ್ರಥಮ ವೈರಿಯಾಗಿದ್ದ ಚಾಮ, ಅವನನ್ನು ಮಾತನಾಡಿಸಿ ಉಂಗುರ ಕೊಡುತ್ತಾನೆ. ಮಾಗಿಯ ಬದುಕುತ್ತಿರುವ ರೀತಿ ಇವನನ್ನು ಪರಿವರ್ತಿಸಿತೆ ಅಥವಾ ಇವಳ ಮುಂದೆ ತನ್ನ ರೊಚ್ಚು ನಡೆಯಲಾರದು ಎಂಬ ಅಸಹಾಯಕತನವೇ? ಆದರೆ ಚಾಮನ ಈ ಬದಲಾವಣೆಯನ್ನು ಪರ ಮತ್ತು ವಿರೋಧ ಸ್ಥಿತಿಗಳೆರಡರಲ್ಲೂ ಸ್ವೀಕರಿಸುವ ಮಾಗಿ, ಬದುಕಿನ ಸಂಯಮವನ್ನು ಕಳೆದುಕೊಳ್ಳುವುದಿಲ್ಲ.

ಕಷ್ಟದ ಮಡುವಿನಿಂದ ಮಾಗಿಯ ಬದುಕು ಸುಧಾರಿಸುತ್ತಿದ್ದಂತೆ, ಮಾಗಿಗೆ ವಿರೋಧಿಗಳಾಗಿದ್ದವ ಬದುಕು ನಾಶವಾಗುತ್ತಾ ಹೋಗುವ ಎರಡೂ ಕ್ರಿಯೆಯನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಕ್ರೌರ್ಯದ ಪ್ರತಿರೂಪನಾಗಿದ್ದ ಚಾಮ ಇಟ್ಟುಕೊಂಡವಳಾದ ಮಾದಿಗೆ ಹೆದರುತ್ತಾನೆ. ಮಂಜಿಯಲ್ಲಿ ಹುಟ್ಟಿದ ಮಕ್ಕಳು ಕೊಳರೋಗದಿಂದ ಸಾಯುತ್ತವೆ. ನೀರಿನ ಅಭಾವದಿಂದ ತೋಟವೊಂದು ಒಣಗುತ್ತದೆ. ಗಿರಿಯಪ್ಪನನ್ನು ಕೊಲ್ಲಲು ಚಾಮನಿಗೆ ಬೆಂಬಲ ಕೊಟ್ಟಿದ್ದ ಮರಿಚಾಮ ಮತ್ತು ಚಿಕ್ಕ ಇವರ ತೋಟವೂ ಭೂರ್ಣದ ರೋಗ ತಗುಲಿ ಹಾಳಾಗುತ್ತದೆ. ಬೇಡಿ ತಿನ್ನುವ ಗತಿ ಇವರದಾಗುತ್ತದೆ. ಹೀಗೆ ಭಾವಮೈದುನರ ಬದುಕು ದುರಂತದಲ್ಲಿ ಚಲಿಸುತ್ತಿರುವುದನ್ನು ಕಾಣುತ್ತೇವೆ. ಹೀಗೆಯೇ ತವರು ಮನೆ ಆಸ್ತಿ ಒಡೆಯಲು ಮಾಗಿಯನ್ನು ತಿರಸ್ಕಾರದಲ್ಲಿ ದೂರವೇ ಇರಿಸುತ್ತಾ ಬಂದ ಒಡಹುಟ್ಟಿದ ತಂಗಿ ಕುಣಕೆಯನ್ನು ಗಂಡ ಹಿಂಸಿಸಿ ಓಡಿಸುತ್ತಾನೆ. ದತ್ತು ಪ್ರಕಾರವಾಗಿ ಬಂದಿದ್ದ ಅಪ್ಪನ ಆಸ್ತಿ ಮೈಸೂರು ನಗರಾಭಿವೃದ್ಧಿ ಸಮಿತಿಗೆ ಸೇರಿಕೊಳ್ಳುತ್ತದೆ. ನಂತರ ಬರಬಾರದ ದಾರಿದ್ರ್ಯ ಬಂದು ಆಕೆ ಅಕ್ಕನ ಮಾರ್ಗದರ್ಶನದಲ್ಲಿ ಬದುಕಲು ಬರುತ್ತಾಳೆ. ಮಾಗಿಯ ಪರವಾಗಿರುವ 'ದೊಡ್ಡೆ' ಇಟ್ಟುಕೊಂಡವಳಾದರೂ ಚನ್ನಾಗಿ ಬದುಕುತ್ತಿರುತ್ತಾಳೆ. ಹೀಗೆ ಸಾಂಸ್ಕೃತಿಕ ಸಂದರ್ಭದ ಸಾಮಾಜಿಕ

ಘಟಕಗಳು ವೈಯುಕ್ತಿಕಗೊಳ್ಳುತ್ತಿರುವ ಹಿನ್ನಲೆಯಲ್ಲಿ ಸರಳೀಕರಣದ ಅಪಾಯಕ್ಕೆ ಒಳಗಾಗಿವೆ. ಈ ಮೂಲಕ ಮಾಗಿಯ ತ್ಯಾಗದ ಹಾಗೂ ದುಃಖದ ಬದುಕನ್ನು ಪರೋಕ್ಷವಾಗಿ ವೈಭವೀಕರಿಸಲಾಗಿದೆ. ಹಾಗಾಗಿ ಸಾಮಾಜಿಕ ಪರಿವರ್ತನೆಯಲ್ಲಿ ಮಾಗಿಯ ಪಾತ್ರ ಗಮನಾರ್ಹವಾಗಿದೆ.

## ಮುಳ್ಳೂರು ನಾಗರಾಜ

ದಲಿತ ಚಳುವಳಿಯ ಹಿನ್ನಲೆಯಲ್ಲಿ ರೂಪಗೊಂಡ 'ಮರಣ ಮಂಡಲ ಮಧ್ಯದೊಳಗೆ' ಒಂದು ಉತ್ತಮ ಕಾದಂಬರಿ. ಸಮಾಜ ವ್ಯವಸ್ಥೆಯಲ್ಲಿಯ ಜಾತೀಯತೆಯ ದೌರ್ಜನ್ಯ ಮತ್ತು ಅದನ್ನು ಪ್ರತಿಭಟಿಸುವ ಮನೋಧರ್ಮಗಳನ್ನು, ದಲಿತ ಬದುಕಿನ ಸಂಸ್ಕೃತಿಯನ್ನು ವಿವರವಾಗಿ ಚಿತ್ರಿಸುತ್ತದೆ. ವ್ಯವಸ್ಥೆಯು ಆಧೀನ ಸಂಸ್ಕೃತಿಗಳ ಮೇಲೆ ಒತ್ತಡ ಹೇರಿದಾಗ ಅದರಿಂದ ತಪ್ಪಿಸಿಕೊಳ್ಳುತ್ತವೆ ಅಂದರೆ ಪರ್ಯಾಯ ಹುಡುಕಾಟ ಕಂಡುಕೊಳ್ಳುತ್ತವೆ ಇಲ್ಲವೆ ವ್ಯವಸ್ಥೆಯ ಹೇರಿಕೆಗೆ(ತಲೆಬಾಗುತ್ತವೆ) ಶರಣಾಗಿ ಬಿಡುತ್ತದೆ. 'ತಪ್ಪಿಸಿಕೊಳ್ಳುವಿಕೆ' ಮತ್ತು 'ಶರಣಾಗಿ ಬಿಡುವ' ಕ್ರಿಯೆಗಳು ವ್ಯವಸ್ಥೆಗೆ ಆಂತರಿಕವಾಗಿ ಪ್ರತಿಭಟಿಸುವ ಸಂಗತಿಗಳಾಗುತ್ತವೆ, ತಪ್ಪಿಸಿಕೊಳ್ಳುವ ಕ್ರಿಯೆಯಲ್ಲಿ ವ್ಯವಸ್ಥೆಗೆ ಮುಖಾ ಮುಖಿ ಪ್ರತಿಭಟನೆ ಮಾಡಬೇಕಾಗುತ್ತದೆ. 'ಶರಣಾಗಿ ಬಿಡುವ' ಕ್ರಿಯೆಯಲ್ಲಿ ವ್ಯವಸ್ಥೆಯಲ್ಲಿದ್ದುಕೊಂಡೇ ಆಂತರಿಕವಾಗಿ ಸಮಸ್ಯೆಗೆ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳುತ್ತದೆ. ಈ ಎರಡೂ ಕ್ರಿಯೆಗಳು ಕೆಳವರ್ಗದವನ ಜಾಗೃತಿಯನ್ನು ಪ್ರಕಟಿಸುತ್ತವೆ. ಮತ್ತು ಸಮಾಜ ಬದಲಾವಣೆಯಲ್ಲಿ ಪ್ರಮುಖ ಅಂಶಗಳಾಗುತ್ತವೆ. ಈ ಹಿನ್ನಲೆಯಲ್ಲಿ 'ಮರಣ ಮಂಡಲ ಮಧ್ಯದೊಳಗೆ ಕಾದಂಬರಿ ಗಮನಾರ್ಹ.

ಕೃತಿ ಎರಡು ಭಾಗದಲ್ಲಿದೆ. ಮೊದಲನೆಯದು ಕಾಡೂರಿಗೆ ಒಂದು ಹಿನ್ನೆಲೆಯನ್ನು ಒದಗಿಸಿಕೊಳ್ಳಲು ಪ್ರಯತ್ನಿಸಿದೆ. ಜನಪದ ಪುರಾಣದ ರೀತಿಯಲ್ಲಿ ಗುರುತಿಸಿಕೊಳ್ಳುವ ಹಾಗೆ ಕಾಡೂರಿನ ಅಸ್ತಿತ್ವವೂ ಇದೆ. ಪುರಾಣದ ಕಾಲದ ಕಥೆಯಂತೆ ಬಿಚ್ಚಿಕೊಳ್ಳುವ ಲಿಂಗಾಯ್ತರ ಮಾಳುಗಮ್ಮ ತನ್ನ ಚಲುವಿನಿಂದ ಹಾಗೂ ಜಾತಿ ಪಾವಿತ್ರ್ಯತೆಯಿಂದ ಇತರರನ್ನು ತಿರಸ್ಕರಿಸುತ್ತಾಳೆ. ಈ ಹಿನ್ನೆಲೆಯಲ್ಲಿ ತನ್ನ ತಮ್ಮ ಈರಣ್ಣ ಕೀಳು ಜಾತಿಯ ಹುಡಿಗಿಯೊಂದಿಗೆ ಸಂಬಂಧವಿರುವುದನ್ನು ತಿಳಿದು ತಿರಸ್ಕರಿಸುತ್ತಾಳೆ. ಪುರಪರನ್ನ ತಿರಸ್ಕರಿಸುವ ಈಕೆ ಹೊಲೆಯ ಸಂಗಯ್ಯನ ಹಾಡಿಗೆ ಮರಳುಬಿದ್ದು ಅನುರಕ್ತ ಹೊಂದುತ್ತಾಳೆ. ಗರ್ಭವತಿಯೂ ಆಗುವ ಮಾಳುಗಮ್ಮನಿಗೆ ಸಮಾಜವು 'ಹೊಲತಿ' ಎಂದು ನಾಮಕರಣ ಮಾಡುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜಾತಿಯಿಂದ ಲಿಂಗಾಯ್ತಳಾದ ಮಾಳುಗಮ್ಮ ಹೊಲತಿಯಾಗುತ್ತಾಳೆ. ಸಮಾಜದಲ್ಲಿ ಒಂದು ಹೆಣ್ಣು ಮದುವೆಯಾಗದೆ, ಗಂಡಿನೊಡನೆ ಸಂಬಂಧ ಹೊಂದಿದರೆ ಆ ಹೆಣ್ಣು ಎಲ್ಲರಿಂದಲೂ ತಿರಸ್ಕಾರಕ್ಕೊಳಗಾಗುತ್ತಾಳೆ. ಇಂಥ ಸಮಸ್ಯೆಯನ್ನು ಮಾಳುಗಮ್ಮ ಅನುಭವಿಸುತ್ತಾಳೆ.

ಒಂದು ಹಂತದಲ್ಲಿ ತಾನೇ ಕೀಳು ಜಾತಿಯನ್ನು ನಿರಾಕರಿಸುತ್ತಿದ್ದು ಈಗ ಮಾಳುಗಮ್ಮನ ಪಾಲಿಗೆ ಈ ಕ್ರಿಯೆ ನಡೆಯುತ್ತದೆ.

ಹೊಲೆಯರ ಸಂಗಯ್ಯ ಮತ್ತು ಮಾಳುಗಮ್ಮರ ಸಂಬಂಧವನ್ನು ಸಹಿಸದ ರಾಕ್ಷಸಿಯು ಇಬ್ಬರನ್ನು ಬಲಿತೆಗೆದುಕೊಳ್ಳುತ್ತಾಳೆ. ಕಾರಣ ರಾಕ್ಷಸಿಗೆ ಸಂಗಯ್ಯನೊಂದಿಗೆ ಲೈಂಗಿಕ ಸಂಬಂಧ ಹೊಂದಬೇಕೆಂಬ ಬಯಕೆಯಾಗುತ್ತದೆ. ತನ್ನ ಇಂಗಿತವನ್ನು ಸಂಗಯ್ಯನಲ್ಲಿ ಹೇಳುತ್ತಾಳೆಯಾದರೂ ಅವನು ನಿರಾಕರಿಸಿ ಬಿಡುತ್ತಾನೆ. ಹೊಲೆಯರ ಸಂಗಯ್ಯ ಹಾಗೂ ಮಾಳುಗಮ್ಮರ ಸಂಬಂಧದಿಂದ ಹುಟ್ಟಿದ ಮಗನನ್ನು ರಕ್ಷಿಸುವ ಜವಾಬ್ದಾರಿಯನ್ನು ರಾಕ್ಷಸಿ ಹೊತ್ತುಕೊಳ್ಳುತ್ತಾಳೆ. ಇಲ್ಲಿ ಆರಂಭದ ಒಂದು ಸ್ಥಿತಿಯು ಶೋಷಣೆಯನ್ನು ಹುಟ್ಟು ಹಾಕಿದ್ದರೆ, ಅಂತಿಮವಾದ ಒಂದು ಪ್ರಕ್ರಿಯೆ ಅದನ್ನು ದಮನಿಸಿದೆ. ಹೀಗೆ ಎರಡೂ ರೀತಿಯ ಪ್ರತಿಭಟನೆಗಳಿಗೆ ಬದುಕನ್ನು ವಿರೋಧಿಸುವ ಮತ್ತು ಪ್ರೀತಿಸುವ ಆಶಯಗಳು ಅದನ್ನು ಒಂದಲ್ಲ ಒಂದು ರೀತಿಯಲ್ಲಿ ಪೋಷಿಸುತ್ತದೆ. ಭೂತ ಇಂಥ ಸಾಧ್ಯತೆಗಳನ್ನು ಮುಂದೆ ತಳ್ಳುತ್ತದೆ. ವರ್ತಮಾನವು ಭೂತದ ಕೊಡುಗೆಯಾದುದರಿಂದ ಮುಳ್ಳೂರರು ಗುರುತಿಸುವ ಮರಳುವ ಹೊಳಹುಗಳನ್ನು ಸ್ವೀಕರಿಸಬೇಕಾಗುತ್ತದೆ. ಮುಂದೆ ಕೃತಿ ವರ್ತಮಾನದ ಮೌಲ್ಯಗಳಿಗೆ ಪ್ರತಿಕ್ರಿಯಿಸುತ್ತಾ ಒಂದು ಜೀವನ ವಿಧಾನವನ್ನು ಸೃಷ್ಟಿಸಲು ಪ್ರಯತ್ನಿಸುತ್ತದೆ.

ಅಂಬೇಡ್ಕರ್ ನಂತರದ ಕಾಡೂರಿನ ಚಿತ್ರಣವನ್ನು ಬಸವರಾಜು ಮೂಲಕ ಪರಿಚಯಿಸಲಾಗಿದೆ. ಬಸವರಾಜನನ್ನು ಹೋರಾಟದ ವ್ಯಕ್ತಿಯಾಗಿ ಚಿತ್ರಿಸಿದ್ದಾರೆ, ಈತ ಹೊಲೆಯನಾಗಿದ್ದು ತನ್ನ ಜಾತಿಯ ಜನರಿಗೆ ಲೆಕ್ಕಕ್ಕಿಲ್ಲದೆ ಮೇಲು ಜಾತಿಯವರಿಗೆ ಮಾತ್ರ ಸಿಂಹಸ್ವಪ್ನನಾಗಿದ್ದನು. ಇವನ ಅಪ್ಪ ಕಿಡಿಗೇಡಿ, ಗೌಡರ ಹುಲ್ಲುಮೆದೆಗಳಿಗೆ ಬೆಂಕಿಹಾಕುವುದು. ತೋಟಗಳನ್ನು ಲೂಟಿ ಮಾಡುವುದು, ಮೇಲುಕೇರಿಯ ಹೆಂಗಸರನ್ನು ಕದ್ದು ಕೂಡುವುದು ಇಂಥ ದಂಧೆಯಲ್ಲಿ ಈತ ಪ್ರಖ್ಯಾತಿ ಪಡೆದಿದ್ದನು. ಇದನ್ನು ಬಸರಾಜು ವಿರೋಧಿಸಿದರೂ ಈತ ಪ್ರಖ್ಯಾತಿ ಪಡೆದಿದ್ದನು.

ಕಾದಂಬರಿಯ ಬಸರಾಜನನ್ನು ಶೋಷಿತ ವರ್ಗದ ಪ್ರತಿಭಟನೆಯಲ್ಲಿ ಒಂದು ಮಾದರಿಯಾಗಿ ರೂಪಿಸಲು ಮೂಳ್ಳೂರರು ಪ್ರಯತ್ನಿಸುವಂತಿದೆ. ಹಾಗಾಗಿ ಮೇಲುವರ್ಗದ 'ಜಾತೀಯತೆಯನ್ನು ಖಂಡಿಸುತ್ತಾನೆ ಹಾಗೂ ವಿರೋಧಿಸುತ್ತಾನೆ. ಹೊಲ್ಯಾರ ಸಿದ್ಧಿ ಮತ್ತು ಗೌಡರ ಕಿರಿಯ ಮಗ ಚಂದ್ರಪ್ಪ ಇವರ ಸಂಬಂಧದಲ್ಲಿ ಹೋಟೇಲು ನಾಗವ್ವ ಅಸ್ಪೃಶ್ಯರನ್ನು ಕಾಣುವ ರೀತಿ ರಂಗ ರಂಗಿಯ ಪ್ರಣಯ ಸಂದರ್ಭದಲ್ಲಿ ಹೋರಾಟಗಾರನಾಗಿ ಪ್ರತಿಭಟಿಸುತ್ತಾನೆ.

ಮೂಲವಾಗಿ ರಂಗ-ರಂಗಿಯರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕೆಂಬುದೇ ಬಸವರಾಜನ ಹೋರಾಟದ ಉದ್ದೇಶವಾಗಿರುತ್ತದೆ, ಅದಕ್ಕಾಗಿ ಅವನು ಶನಿದೇವರನ್ನು ನಂಬುವ ಆಯ್.ಬಿ.ಗೆ

ಬರಲಿರುವ ಮಂತ್ರಿಯನ್ನು ನೋಡಲು ಹೋಗುವ, ಕಾಡೂರಲ್ಲಿ ಅಂಬೇಡ್ಕರ್ ಸಂಘವನ್ನು ತಾನೇ ಕಟ್ಟಬೇಕೆಂದು ಯತ್ನಿಸುವ ಕ್ರಿಯೆಗಳು ಒಂದಕ್ಕೊಂದು ಡಿಕ್ಕಿ ಹೊಡೆಯುವಂತಿದೆ. ಚುಂಚನ ಹಳ್ಳಿಯ 'ಅಂಬೇಡ್ಕರ್ ಸಂಘ' ಎಂಬ ಬೋರ್ಡಿನ ಕೆಳಗೆ ನಡೆದ ಜೂಜು ಕುಡಿತಗಳನ್ನು "ನೋಡಿ ಈ ಸೂಳೆ ಮಕ್ಳ ಹೆಂಡ್ತೀರ ಆ ಗೌಡ್ರ ಕೇರೆವ್ರು ಹಿಡ್ಕಂಡು ಇವರೆದ್ರುಗೆ ಮಾಡುದ್ರುವಿ ಈ ನನ್ಮಕ್ಳು ಆಗಲೂ ಅಲ್ಲಾಡಲ್ವೋನ ಕನಪ್ಪ?"[೯] ಎಂದು ಸಂಘ ತಳೆದ ದುರಾಚಾರಕ್ಕೆ ಹೇಸಿ ಸಂಘದ ಯೋಚನೆ ಕೈಬಿಡುವ ಬಸವರಾಜನ ಪಾತ್ರ ತಾಕಲಾಟಗಳಲ್ಲಿಯೇ ಬೆಳೆಯುತ್ತದೆ.

ಕಾದಂಬರಿ ಕೊನೆ, ಹೊಸ ಆಸೆಯನ್ನು ಹುಟ್ಟಿಸುತ್ತದೆ. ಬಸವರಾಜ ಕಾಣುತ್ತಿರುತ್ತಾನೆ. "ಅದು ಆ ಜೀವಗೊಂಬವು ಗತಕಾಲದ ಹೊಲ್ಯಾರ ಸಂಗಯ್ಯನೂ ಆ ಅವಳು ಚಲುವಿ ಕುಲದ ಹಿರಿಮೆಯ ಕಾಲದಿಂದ ಒದ್ದು ಮಾನವಳಾದ ಆ ದೇವತೆಯೂ, ಆ ಮಾಳಗಮ್ಮನೂ ಸುಖದ ಸಿರಿಯಲ್ಲಿ ಕರಗಿ ಹರಿಯುವಾಗ, ಆ ಎಡಿಗೇಡಿಯೂ ಆ ಮಾಟಗಾರನೂ ಇವೆಲ್ಲಾಕ್ಕೂ ಸಾಕ್ಷಿಯಾಗಿ ನಕ್ಕುವಲ್ಲಾ, ವರ್ಣಸಂಕರದಿಂದಾಗಿ ಮನವು ಜಾತ್ಗೆಟ್ಟಾಗ, ನಕ್ಕು ನಕ್ಕು ಖುಷಿಪಟ್ಟು ಆ ಮನುವು ಕೋಟಿ ಕೋಟಿ ಸಲ ಕೊಂದು ನಕ್ಕು ಮಾಯಗಾರನೂ ಒಕ್ಕಡಲಿಂದ ಕಂಡ್ರ ಕಡಲಾಚೆ ನಿಂತ ಕವಿಯಾಗೂ, ಇನ್ನೊಕ್ಕಡಲಿಂದ ಕಂಡ್ರ ಜಾತಿಗಳಿಲ್ಲದ ಜಗದ ತಾಯಾಗೂ, ಮತ್ತೊಕ್ಕಡಲಿಂದ ಕಂಡ್ರ ಸಮತೆ ತುಂಬಿದ ಕ್ರಾಂತಿ ಚಿತ್ತವಾಗೂ ಕಂಡು ಬಳಾಗು ಮಾಡುತ್ತಿರಲೂ, ಕನಸು ಸಮಾಪ್ತವಾಯಿತಲ್ಲ"[೧೦] ಹೀಗೆ ಕಾದಂಬರಿ ಕೊನೆಗೊಂಡರೂ ದಲಿತರ ಹೋರಾಟ ಮಾತ್ರ ಮುಗಿಯುವುದಿಲ್ಲ. ಅದು ಗಟ್ಟಿಗೊಂಡು ಮುನ್ನಡೆಯುವ ಸೂಚನೆಯನ್ನು ಕೊಡುತ್ತದೆ. ಕನಸಿನೊಂದಿಗೆ ಮನುವನ್ನು ಕೋಟಿಸಲ ಕೊಂದು ಹಾಕುವ ಪ್ರತಿಭಟನೆ ಅಸಾಮಾನ್ಯವೆನಿಸುತ್ತದೆ. ಇದೂ ಒಂದು ಮಿಥ್ಮ್ ಆಗುತ್ತದೆ. ಆದರೂ ದಲಿತ ಚಳುವಳಿಯ ತಾತ್ವಿಕತೆ ಮತ್ತು ಕೃತಿಯೊಂದರಲ್ಲಿ ಮೂಡಿದ ತಾತ್ವಿಕತೆಗಳನ್ನು ಸಮ ಸಮವಾಗಿ ಅಳವಡಿಸಿಕೊಳ್ಳುವ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿ ಗಮನಾರ್ಹವಾಗುತ್ತದೆ.

### ಅರವಿಂದ ಮಾಲಗತ್ತಿ

ಅರವಿಂದ ಮಾಲಗತ್ತಿಯವರು ಕೆಳವರ್ಗದಿಂದ ಸಾಹಿತ್ಯ ವಲಯಕ್ಕೆ ಕಾಲಿಟ್ಟವರು. ಹಾಗಾಗಿ ಅವರ ಸಾಹಿತ್ಯದಲ್ಲಿ ಕೆಳವರ್ಗಗಳ ಒಟ್ಟು ಆಶಯವನ್ನು ಚಿತ್ರಿಸುತ್ತಾರೆ. ನಿರಂತರವಾಗಿ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಗಂಭೀರ ಚಿಂತಕರಾಗಿದ್ದಾರೆ. ಅರವಿಂದ ಮಾಲಗತ್ತಿಯವರು ಕಾವ್ಯ, ಕಾದಂಬರಿ, ನಾಟಕ, ಆತ್ಮಕಥೆ, ಜಾನಪದ ಸಂಶೋಧನೆ, ವಿಮರ್ಶೆ, ಸಂಪಾದನೆ, ಹೀಗೆ ಎಲ್ಲ ಕ್ಷೇತ್ರದಲ್ಲಿ ೨೪ ಕ್ಕೂ ಹೆಚ್ಚು ಕೃತಿಗಳನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಅದು ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇದರಂತೆ ನಿಖರವಾಗಿ, ನಿರಂತರವಾಗಿ ಬರೆದ ಬರಹಗಾರರಲ್ಲಿ

ಅರವಿಂದ ಮಾಲಗತ್ತಿಯವರ 'ಕಾರ್ಯ' ದಲಿತ ಸಂಸ್ಕೃತಿಯನ್ನು ಚಿತ್ರಿಸುವ ಮಹತ್ವದ ಕಾದಂಬರಿ. ಕೆಲವು ಹೊಸತನಗಳನ್ನು ಮೈಗೂಡಿಸಿಕೊಂಡ ಕೃತಿ ಇಟ್ಟುಕೊಂಡಿರುವ ಕಥೆ, ಅದು ಬಿಟ್ಟುಕೊಡುವ ಸತ್ಯ ಸಾಧ್ಯತೆಗಳು ವಸ್ತುವಿನ ಬಯಕೆ ಅದು ಒಳಗೊಳ್ಳುವ ಮೈಯಿಂದ ರೂಪ ಅವಸ್ಥೆ ಹಂತ ಹಂತವಾಗಿ ಹಂಚಲ್ಪಡುವ ಘಟನೆಗಳು-ಅವುಗಳ ಚಾಲನೆ ಬಂದು ಹೋಗುವ ಪಾತ್ರಗಳು ಅವು ಮೈದಾಳುವ ಜೀವನ ಸಂದರ್ಭ ಅಂಥದ್ದಕ್ಕೆ ಇದ್ದಿರಬಹುದಾದ ಇಲ್ಲವೆ ಸೃಷ್ಟಿಸಿಕೊಂಡಿರುವ ಜಾಲ, ಆ ಸ್ಥಿತಿಗೆ ಕಾರಣವಾಗಬಹುದಾದ ಪಾತ್ರಗಳ ನಡುವಳಿಕೆಗಳು, ಮೌಢ್ಯ ಇಲ್ಲವೇ ಅದರ ಪ್ರಭಾವಿತ ಮೌಲ್ಯಗಳು ಬೆಳೆಯುವ ರೀತಿ ಹೀಗೆ ಬೆಳೆದಂತಹ ಮೌಲ್ಯಗಳ ಅರ್ಥ ಇಲ್ಲವೇ ಅವುಗಳು ತೋರಬಹುದಾದ ನಿಜ ಅಥವಾ ಪೊಳ್ಳಾದ ಬದುಕು ಇವೆಲ್ಲವುಗಳನ್ನು ತನ್ನ ವಾಸ್ತವ ಸಮಾಜವೊಂದರ ಮುಖಾಂತರ ಪ್ರತಿಬಿಂಬಿಸುವ ಸಾಧ್ಯತೆಗಳು ಹೊಸ ಸಮಾಜದತ್ತ ಮುಖ ಮಾಡುವ ಕಡೆ ಹೊರಡಿದೆ.(ಪು.೪೧ ನಾಲ್ಕು ದಲಿತೀಯ ಕಾದಂಬರಿಗಳು) ಬಂಗಾರವ್ವ ಸತ್ತ ನಂತರ ಮೂರನೆಯ ದಿನದ ಕುರಿತು ಹೋಗುವ ಸಂದರ್ಭದಲ್ಲಿ ನಡೆಯುವ ಆಗು-ಹೋಗುಗಳನ್ನು ಕೃತಿ ದಾಖಲಿಸುತ್ತದೆ. ಆದ್ದರಿಂದ ಅದರ ವಸ್ತು ಸಂಪ್ರದಾಯವಾಗಿದೆ. ಬಂಗಾರವ್ವನ ಕ್ರಿಯೆಯ ನೆಪದಲ್ಲಿ ಮಚಗಾರ ಜನಾಂಗದ ಸಮಗ್ರ ಬದುಕು ಕಣ್ಣಿಗೆ ರಾಚುವಂತೆ ಬಿಚ್ಚಿಕೊಳ್ಳುತ್ತದೆ. ತನ್ನ ಸಹನಾ ಶಕ್ತಿಯನ್ನು ನಾಶಮಾಡುವಂತೆ ಸುಡುತ್ತಿದ್ದ ಕುಳ್ಳಗ್ಗಿಯನ್ನು ಘಟೇಗಾರ ಮಲ್ಲಪ್ಪ ಕೆಳಗೆ ಬಿಟ್ಟಿದ್ದೇ ಕಾರಣವಾಗಿ ಸಮಸ್ಯೆಗಳ ಜಾಲಗಳು ಸೃಷ್ಟಿಯಾಗತೊಡಗುತ್ತವೆ. ಕುಳ್ಳಗ್ಗಿಯನ್ನು ಯಾವುದೇ ಕಾರಣದಿಂದ ಕೆಳಗೆ ಬಿಳಿಸಬಾರದೆಂಬ ಸಂಪ್ರದಾಯ ಒತ್ತಡ ಹೇರಿರುತ್ತದೆ. ತೇಗಾರ ಮಲ್ಲಪ್ಪ ಕುಳ್ಳಗ್ಗೆಯನ್ನು ಕೆಳಗೆ ಬಿಟ್ಟಿದ್ದಕ್ಕೆ ಕಾರಣ ಹುಡುಕುತ್ತದೆ. ಇದು ಮೌಢ್ಯತೆಯಲ್ಲಿ ಮುಳುಗಿದ ಮಚಗಾರರ ಪ್ರಾಥಮಿಕ ಜಾಗೃತಿಯಾಗಿದೆ. ಈ ಜಾಗೃತಿಯೊಂದಿಗೆ ಮಲ್ಲಪ್ಪ ಶಾಂತೇಗೌಡರ ಎರಡನೇ ಹೆಂಡತಿ ಪದ್ಮಾವತಿಯೊಂದಿಗೆ ಹೊಂದಿದ ಸಂಬಂಧದ ಈ ರೀತಿಯಾಯಿತೆಂದೂ, ಇದರ ಪಂಚಾಯ್ತಿ ಇತ್ಯರ್ಥವಾದ ನಂತರ 'ಕಾರ್ಯ' ಮುಂದುವರಿಸಲಾಗುವುದೆಂದು ತೀರ್ಮಾನಿಸಲಾಗುತ್ತದೆ. ಕುಡಿತದ ಅಮಲಿನಿಂದ ಪದ್ಮಾವತಿಯನ್ನು ಮಚಗಾರರ ಪಂಚಾಯ್ತಿಯಲ್ಲಿ ಕರೆಕಳಿಸುವ ಧೈರ್ಯ ಮಾಡುತ್ತದೆ. ಅವರ ಎಲ್ಲ ಕಹಿ ಅನುಭವಗಳು ಮತ್ತು ಮತ್ತೆ ಅವರಿಗಾಗುವ ಅನ್ಯಾಯಗಳು ಅವರ ಜಾಗೃತ ಸ್ಥಿತಿಯಲ್ಲಿ ಮನಸ್ಸಿನಲ್ಲಿ ದಾಖಲು ಆಗುವುದರಿಂದ ಮಾತ್ರವೇ ಕುಡಿತದ ಅಜಾಗೃತ ಮನಸ್ಥಿತಿಯಲ್ಲಿ ಪ್ರತಿಭಟನೆಯ ಸೊಲ್ಲು ಇರಲು ಸಾಧ್ಯವಾಗುತ್ತದೆ.' ಹಾಗಾಗಿ ಎಲ್ಲರಿಗೂ ನ್ಯಾಯ ಸಮಾನವಾದುದು ಎಂಬ ಹಿನ್ನಲೆಯಲ್ಲಿ ಪದ್ಮಾವತಿಯನ್ನು ಕರೆಸಬೇಕೆಂಬ ನಿರ್ಣಯದಲ್ಲಿ ಸೇಡಿನ ಬೆಂಕಿ ಇದೆ. ಆದ್ದರಿಂದ ಮಲ್ಲಪ್ಪ ಕುಳ್ಳಗಿಯನ್ನು ಬಿಟ್ಟ ಎನ್ನುವುದಕ್ಕಿಂತ ಪದ್ಮಾವತಿಯ ವಿಷಯವೇ ಇಲ್ಲಿ ಮುಖ್ಯವಾಗಿ ಕಾಣುತ್ತದೆ. ಹೆಂಗಸರು ಭಯಪಟ್ಟುಕೊಳ್ಳುತ್ತ ಮಲ್ಲಪ್ಪನನ್ನು ಆರೋಪಿಯಾಗಿಸ ತೊಡಗುತ್ತಾರೆ.

ಹೆಣ್ಣಿನ ದೃಷ್ಟಿಯಲ್ಲಿ ಗಂಡಿನ ಜತೆ ಸೇರಿಕೊಂಡಿರುವ ಹೆಣ್ಣು ದೋಷರಹಿತಳಾಗಿ ಪಕ್ಕಕ್ಕೆ ಸರಿಯುತ್ತಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಈ ವಿವರಣೆ ಪೂರಕವಾದುದು. ಗರಡಿ ಪಟು ಮಲ್ಲಪ್ಪ ಕಿರಿವಯಸ್ಸಿನ ಪದ್ಮಾವತಿಗೆ ಗಂಡನಿಗಿಂತ ಸ್ವೀಕರಿಸಲು ಯೋಗ್ಯನಾಗಿರಬೇಕು, ಇಲ್ಲವಾದರೆ ಯಾವ ಹೆಣ್ಣು ತನ್ನ ಗಂಡನಿಗಿಂತ ಕೆಳಮಟ್ಟದ ಗಂಡನ್ನು ಕೂಡಲು ಇಚ್ಛಿಸುವುದಿಲ್ಲ. ಕೃತಿ ಕಾಣಿಸುತ್ತಿರುವ ಒಳನೋಟಗಳನ್ನು ಗಮನಿಸಿ ಹೇಳುವುದಾದರೆ, ವ್ಯವಸ್ಥೆಯು ನಿರ್ದೇಶಿಸಿ ಜಾರಿಗೆ ತಂದಿರುವ ನಿಯಂತ್ರಣಗಳಿಗಿಂತ, ಹೆಣ್ಣು ಗಂಡಿನ ಸಹಜ ತುಡಿತಗಳು ಇಲ್ಲಿ ಮುಖ್ಯವಾಗಿವೆ. ಹಾಗೆಯೇ ಮಲ್ಲಪ್ಪ ಪದ್ಮಾವತಿಯೊಂದಿಗೆ ಸಂಬಂಧಹೊಂದಲೂ ಕಾರಣವೂ ಇದೆ. ಘಟೇಗಾರ ಮಲ್ಲಪ್ಪ ಗರಡಿ ಕುಸ್ತಿಪಟುವಾಗಿ ದೇಹಸೌಷ್ಠತೆ ಹೊಂದಿದ್ದ. ಆತನ ದೈಹಿಕ ಸಾಮರ್ಥ್ಯ ನೋಡಿ ಶಾಂತೇಗೌಡ ತನ್ನ ತಮ್ಮನಾದ ರುದ್ರೇಗೌಡರ ತೋಟದ ಕಾವಲುಗಾರನಾಗಿ ನೇಮಿಸಿಕೊಂಡು ಮಲ್ಲಪ್ಪನ ಶಕ್ತಿಯನ್ನು ವಶಮಾಡಿಕೊಂಡಿದ್ದ. ಹಾಗಾಗಿ ಮಲ್ಲಪ್ಪ ಪದ್ಮಾವತಿಯೊಂದಿಗೆ ಸಂಬಂಧ ಹೊಂದಿ ದ್ವೇಷ ತೀರಿಸಿಕೊಂಡನೆಂಬುದು ಗ್ರಹಿಕೆಗೆ ಬರುತ್ತದೆ. ಪದ್ಮಾವತಿ ಮಲ್ಲಪ್ಪನೊಂದಿಗೆ ಸಂಬಂಧ ಹೊಂದುವುದು ಜಾತಿಯ ಪ್ರತಿಷ್ಠೆ ಮತ್ತು ಗಂಡಿನ ಕ್ರೌರ್ಯದ ವ್ಯವಸ್ಥೆಯ ಹಿಡಿತದಿಂದ ಕಿತ್ತುಕೊಂಡು ಹೊರ ಮುಖವಾಗಿ ಹರಿಯುತ್ತಿರುವ ಶ್ರೇಷ್ಠ ನಿದರ್ಶನ ಇದು.

ಮಲ್ಲಪ್ಪ ಕುಳ್ಳಗ್ಗಿಯನ್ನು ಬೀಳಿಸುವುದರ ಹಿಂದೆ ರಾಜಕೀಯ ಕೆಲಸಮಾಡುತ್ತದೆ. ಚಂದಪ್ಪ ಘಟೇಗಾರಿಕೆ ಸ್ಥಾನ ಪಡೆಯಲು ಶಾಂತೇಗೌಡನ ಕಾಲು ಹಿಡಿಯುತ್ತಾನೆ. ಶಾಂತೇಗೌಡ ಇದೇ ಸಮಯವನ್ನು ಉಪಯೋಗಿಸಿಕೊಂಡು ಘಟೇಗಾರ ಮಲ್ಲಪ್ಪ ಹಾಗೂ ಅವನ ಅಪ್ಪ ವರಗ ದಶರಥನನ್ನು ನಿರ್ವೀರ್ಯವನ್ನಾಗಿ ಮಾಡಲು ಸಜ್ಜಾಗುತ್ತಾನೆ. ಘಟೇಗಾರ ಮಲ್ಲಪ್ಪ ಶಾಂತೇಗೌಡನ ಗರಡಿ ಕುಸ್ತಿಪಟುವನ್ನು ಸೋಲಿಸಿದ್ದು ಅವನ ಮೇಲಿನ ದ್ವೇಷವಾದರೆ, ವರಗ ದಶರಥ ಮೀಸೆ ಬಿಟ್ಟು ತನ್ನ ಸಮ ಕಟ್ಟುತ್ತಿದ್ದಾನೆಂಬ ಕಾರಣದಿಂದ ಅವರ ಅಸ್ತಿತ್ವವನ್ನು ಕಸಿದುಕೊಳ್ಳುತ್ತಾನೆ. ಕೆಳವರ್ಗ ಮೇಲುವರ್ಗವನ್ನು ಆಶ್ರಯಿಸಿದಷ್ಟು ಅವರ ಶೋಷಣೆಗೆ ಗುರಿಯಾಗುತ್ತದೆ. ಹಾಗಾಗಿ ಶಾಂತೇಗೌಡ ಚಂದ್ರಪ್ಪನ ಪರವಾಗಿ ನಿಲ್ಲುತ್ತಾನೆ. ಆದ್ದರಿಂದ ಆತ ಕುಳ್ಳೂ ತರುತ್ತೇನೆಂದು ಭರವಸೆ ಕೊಟ್ಟು ಮೋಸಮಾಡುತ್ತಾನೆ. ಅಂದರೆ ನ್ಯಾಯಯುತವಾಗಿ ಹಕ್ಕುದಾರಿಕೆಯಿಲ್ಲದ ಅಧಿಕಾರ ಪಡೆಯಲು ಅನ್ಯಾಯದ ಮಾರ್ಗ ಹಿಡಿಯುವುದು ಅನಿವಾರ್ಯವಾಗಿದೆ. ಮಲ್ಲಪ್ಪ ಮಾಡಿದ ತಪ್ಪು ಚಂದ್ರಪ್ಪನಿಗೆ ವರವಾಗಿ ಪರಿಣಮಿಸುತ್ತದೆ. ಹಾಗಾಗಿ ಚಂದಪ್ಪನು ಮಲ್ಲಪ್ಪ ಮೈಲಿಗೆ ಮಾಡಿದನೆಂಬ ಕಾರಣವನ್ನು ಮುಂದಿಟ್ಟುಕೊಂಡು ಶೋಷಣೆ ಮಾಡುತ್ತಾನೆ. ಮಚಗಾರರ ಸಮುದಾಯ ಈ ಸಮಸ್ಯೆಯನ್ನು ಎದುರುಗೊಳ್ಳಲಾರದೇ ಹೆಂಡ ಕುಡಿದು ವಿರೋಧಿಸುತ್ತಾರೆ. ಅಂದರೆ ಇವರು ಕ್ರೌರ್ಯ ವ್ಯವಸ್ಥೆಯಡಿ ಗಂಭೀರ ಸ್ಥಿತಿಯಲ್ಲಿಲ್ಲವೆಂಬುದನ್ನು ಗಮನಿಸಬೇಕಾಗಿದೆ.

ಸಾಮಾನ್ಯವಾಗಿ ಹಳ್ಳಿಗಳಲ್ಲಿ ನ್ಯಾಯ ಪಂಚಾಯಿತಿಗಳಿರುವ ಹಾಗೇ ಮಚಗಾರರ ಪಂಚಾಯಿತಿಯೂ ಕೆಲಸ ಮಾಡುತ್ತದೆ. ಆ ಮಚಗಾರರ ಸಮುದಾಯ ತನ್ನ ಮುಖಂಡರನ್ನು ರೂಪಿಸಿಕೊಳ್ಳುತ್ತದೆ. ಆದ್ದರಿಂದ ಸಂಪ್ರದಾಯದಂಥ ವಿಚಾರಗಳಲ್ಲಿ ಒಲವು ತೋರಿಸದಿದ್ದರೂ, ಅನಾಯಾಸವಾಗಿ ದೊರೆತಿರುವ ಸ್ಥಾನವನ್ನು ಕಾಪಾಡಿಕೊಳ್ಳಲು ಸಮುದಾಯದ ಅಸ್ತಿತ್ವ ಉಳಿಸಿಕೊಳ್ಳಲು ಪ್ರಯತ್ನ ಮಾಡುತ್ತದೆ. ಆದರೆ ಗೌಡನ ದೌರ್ಜನ್ಯದ ಮುಂದೆ ನಲುಗಿಹೋಗುತ್ತದೆ. ಹಾಗಾಗಿ ಗೌಡರ ಕಡೆಯಿಂದ ದಂಡತೆಗೆದುಕೊಳ್ಳಬೇಕೆಂದು ಕಾದಿದ್ದ ವರ್ಗ, ತಾನೇ ಅವರಿಗೆ ದಂಡರೂಪವಾಗಿ ಒಂಟಿ ಚಪ್ಪಲಿ ಹೊಲಿದುಕೊಡುವ ಶಿಕ್ಷೆ ವಿಧಿಸುತ್ತದೆ. ಈ ಸಂದರ್ಭದಲ್ಲಿ ಗೌಡರ ಎರಡು ಕಾಲಿಗೂ ಮಚ್ಚೆ ಹೊಲಿದು ಕೊಡಬಹುದೆಂದು ಜನತೆ ಮನಸ್ಸಿನಲ್ಲಿ ಅಂದುಕೊಳ್ಳುವುದು ಶರಣಾಗುತ್ತಿರುವುದರ ಸೂಚನೆಯಾಗಿದೆ. ಇದನ್ನು ಬಹಿರಂಗವಾಗಿ ಹೇಳಿಕೊಂಡಿದ್ದರೆ ಗೌಡರನ್ನು ಮೆಚ್ಚಿಸಬಹುದಿತ್ತು ಎಂಬುದು ವ್ಯಕ್ತವಾಗುತ್ತಿತ್ತು. ಈ ಸಂದರ್ಭದಲ್ಲಿ ಮಚಗಾರರು ಗೌಡನನ್ನು ಓಲೈಸಲು ಪ್ರಯತ್ನ ಮಾಡುವ ಕ್ರಿಯೆ ಒಂದು ಕಡೆಯಾದರೆ, ಗೌಡ ಬಂಗಾರೆವ್ವನ ಕಾರ್ಯ ಮುಗಿದ ರಾತ್ರಿ ಮಚಗಾರರ ಗುಡಿಸಲುಗಳಿಗೆ ಬೆಂಕಿ ಇಡಲು ತಾನಾಗೆ ಆದೇಶ ನೀಡುತ್ತಾನೆ. ಹೀಗೆ ಮಚಗಾರರ ಸಾಂಸ್ಕೃತಿಕ ಆಶಯಗಳು ಧ್ವನಿ ಪೂರ್ಣವಾಗುತ್ತದೆ.

ಕಾದಂಬರಿಯ ಎಲ್ಲ ಪಾತ್ರಗಳಿಗಿಂತ ಘಟೇಗಾರಿಕೆ ಮಲ್ಲಪ್ಪ ಭಿನ್ನ ರೀತಿಯ ಸೌದಭಾವ ಹೊಂದಿರುತ್ತಾನೆ. ಮಚಗಾರ ಪಂಚಾಯ್ತಿಯಲ್ಲಿ ಅವನನ್ನ ಅಪರಾಧಿಯಾಗಿ ನಿಲ್ಲಿಸುವಾಗ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಪರ್ಯಾಯ ಮಾರ್ಗಗಳನ್ನು ಹುಡುಕಿಕೊಳ್ಳುತ್ತಾನೆ. ಪಂಚಾಯಿತಿಯಲ್ಲಿ ಪದ್ಮಾವತಿಯೊಂದಿಗೆ ಸಂಬಂಧ ಹೊಂದಿದ್ದಕ್ಕಾಗಿ ಪಂಚರರು ದಂಡ ಕೇಳುವಾಗ ಮುಖಂಡರನ್ನು ವಿರೋಧಿಸುತ್ತಾನೆ. ಆಕೆಯೇ ಬಂದು ತನ್ನೊಡನೆ ಸಂಬಂಧವಿತ್ತು ಎಂದು ಹೇಳಿದರೆ ತಪ್ಪು ಕೊಡುವುದಾಗಿ ಪಟ್ಟು ಹಿಡಿಯುತ್ತಾನೆ. ಈ ಮಾತಿನಲ್ಲಿ ಹಲವಾರು ಹೊಳುಹುಗಳಿವೆ. ಪದ್ಮಾವತಿ ಮೇಲುಜಾತಿಗೆ ಸೇರಿದ್ದರಿಂದ ಕೆಳಜಾತಿಯ ಪಂಚಾಯ್ತಿಗೆ ಬರಲಾರಳು, ಹಾಗೂ ಮೇಲ್ವರ್ಗದ ಹೆಣ್ಣು ಬಹಿರಂಗವಾಗಿ ಇಂಥ ಸಂಬಂಧ ಹೊಂದಿರುವೆನೆಂದು ಒಪ್ಪಿಕೊಳ್ಳಲಾರಳು ಎಂಬ ಪ್ರಜ್ಞೆಯಿಂದ ಜಾಣ್ಮೆಯನ್ನು ಉಪಯೋಗಿಸುತ್ತಾನೆ.

ಮಾರಕವಾಗುವ ಸಂಪ್ರದಾಯಗಳು ಅನಿವಾರ್ಯವಲ್ಲ ಎಂದು ಹಲವಾರು ಘಟಕಗಳು ಸಾಬೀತುಪಡಿಸುತ್ತದೆ. ಕಾರ್ಯಕ್ಕೆ ಹೋಗುತ್ತಿರುವ ಅಕ್ಕವ್ವ ಮೂರು ತಿಂಗಳ ಹಿಂದೆ ಕಳೆದು ಹೋಗಿದ್ದ ತನ್ನ ಎಮ್ಮೆಯನ್ನು ಕಂಡದ್ದೇ, ಕೈಯಲ್ಲಿದ್ದ ತಂಬಿಗೆಯನ್ನು ಪಕ್ಕದವಳಿಗೆ ವರ್ಗಾಯಿಸಿ ಬದುಕಿನ

ಬೆನ್ನೆಲುಬಾಗಿರುವ ಘಟಕಕ್ಕೆ ಅನಾಯಾಸವಾಗಿ ಚಲಿಸುತ್ತಾಳೆ. ಇಲ್ಲಿ ಅವಳಿಗೆ ಯಾವ ಗೊಂದಲವೂ ಉಂಟಾಗಿಲ್ಲ ಎಂಬುದನ್ನು ಗಮನಿಸಬೇಕು. ವ್ಯವಸ್ಥೆಯನ್ನು ತಿರಸ್ಕರಿಸುತ್ತಿಲ್ಲ. ತನ್ನ ಬದುಕಿಗೆ ಮೊದಲ ಆದ್ಯತೆ ನೀಡಬೇಕೆಂಬುದು ಅವಳ ಆಶಯವಾಗಿದೆ. ಕುಳ್ಳಗ್ಗಿಯು ಸುಡುತ್ತಿರುವ ಮಲ್ಲಪ್ಪನ ನೆರವಿಗೆ ಧಾವಿಸುವ ಯುವಕ ಮತ್ತು ಶಿವಪ್ಪ ಮಾತ್ರ ಅಲ್ಪ ಪ್ರಮಾಣದಲ್ಲಿ ಮಾತ್ರ ಆಚರಣೆಯಲ್ಲಿ ಬದಲಿನೆಲೆಯಲ್ಲಿ ರೂಢಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ ಆದರೆ ಇವರದು ಗೊಂದಲದ ಅಭಿವ್ಯಕ್ತಿಯಾಗಿರುವುದರಿಂದ ವಿಫಲವಾಗುತ್ತದೆ. ಪಕ್ಕೀರಪ್ಪ ಕಾಳಮರವನ್ನು ಒಂದು ರಾತ್ರಿ ಹಗಲು ಹಿಡಿದುಕೊಂಡು ಅಸಹಾಯಕನಾಗಿರುವಾಗ ಹನುಮಂತ ಹಾಗೂ ದಶರಥ ಸಂಪ್ರದಾಯವನ್ನು ವಿರೋಧಿಸುತ್ತಾನೆ. ಬದುಕಿನಲ್ಲಿ ಮನುಷ್ಯನ ಅಸ್ತಿತ್ವ ಪ್ರಾಥಮಿಕವಾಗಿರಬೇಕು ನಂತರ ಸಂಪ್ರದಾಯ ಆಚರಣೆಗಳೆಂದು ಆತ ವಾದಿಸುವವನಾದರೂ ಯಶಸ್ವಿಯಾಗುವುದಿಲ್ಲ.

ಐದನೆಯ ದಿನ ಕಾರ್ಯ ಮಾಡಲು ಹೊರಟ ಜನಕ್ಕೆ ಬಂಗಾರೆವ್ವನ ಹೆಣ ನಾಪತ್ತೆಯಾಗಿರುವುದು, ಅವರ ಭ್ರಮೆಗಳಿಗೆ ದೊಡ್ಡ ಪೆಟ್ಟಾಗುತ್ತದೆ. ಹೀಗೆ ಒಂದು ಘಟಕದ್ದು ಬದುಕು ವಿರೋಧಿಯಾಗಿ ತಳವೂರುತ್ತಿದ್ದಂತೆ, ಪ್ರತಿ ಘಟಕವನ್ನು ಸೃಷ್ಟಿಸಿ ಯಾವ ಆಡಂಬರವೂ ಇಲ್ಲದೆ ವಿರೋಧಿಸುವುದು ಮಾಲಗತ್ತಿಯವರ ಕಲಾಪರಿಣಿತಿಯನ್ನು ತೋರಿಸುತ್ತದೆ. ಇಲ್ಲಿ ಸ್ಥಿತಿಯನ್ನು ಕಾಯ್ದುಕೊಳ್ಳಬೇಕು, ಹೇರಬೇಕು ಎಂಬ ಆಶಯ ಇರುವ ಹಾಗೆಯೇ ಅದನ್ನು ಬದುಕುವ ರೀತಿಗೆ ತಕ್ಕಂತೆ ಬದಲಾಯಿಸಿ ಕೊಳ್ಳಬೇಕೆಂಬುದೂ ಇದೆ. ಕಾರ್ಯದ ಕಾರ್ಯಾಚರಣೆಗೆ ಸಂಬಂಧಿಸಿದಂತೆ, ಮೌಢ್ಯತೆಯ ಮೇಲೆ ಮೌಢ್ಯತೆ ಬೆಳೆದುಕೊಂಡು ಹೋಗುತ್ತದೆ. ಕುಳ್ಳಗ್ಗಿ ಕೈತಪ್ಪಿ ನೆಲಕ್ಕೆ ಬಿದ್ದದ್ದಕ್ಕೆ ಪ್ರಮುಖ ಕಾರಣ ಮಲ್ಲಪ್ಪ ಮುಡಚಟ್ಟು ಆದದ್ದು. ಮಲ್ಲಪ್ಪ ಮುಡಚಟ್ಟು ಆಗಲು ಕಾರಣ ಗೌಡರ ಹೆಂಡತಿ ಪದ್ಮಾವತಿ, ಹೀಗೆ ಒಂದರ ನಂತರ ಒಂದರ ಪ್ರಸ್ತಾಪ ಬಂದು ಮೂಲ ಸಮಸ್ಯೆಯೇ ಮರೆಯಾಗುತ್ತದೆ. ಈ ಅಂಶವನ್ನು ಕಾದಂಬರಿಯಲ್ಲಿ ಹೇಳುತ್ತಲೇ ದಲಿತರಲ್ಲಿ ಎಚ್ಚರ ಹುಟ್ಟಿಸುವ ಪರಿಣಾಮವನ್ನು ಉಂಟು ಮಾಡುತ್ತಾರೆ.

**ಜಂಬಣ್ಣ ಅಮರಚಿಂತ**

ಜಂಬಣ್ಣ ಅಮರಚಿಂತರು ಹೈದ್ರಬಾದ್ ಕರ್ನಾಟಕದ ಪ್ರಮುಖ ಲೇಖಕರಲ್ಲಿ ಒಬ್ಬರು, ವೇದನಾಭರಿತ ಮಾತುಗಳನ್ನು ರೂಪಕಗಳಲ್ಲಿ ಹೇಳುವ ಅನನ್ಯ ಶಕ್ತಿ ಪಡೆದಿರುವ ಪ್ರಮುಖ ದಲಿತ ಕವಿಯೂ ಹೌದು. ಇವರ ಸಾಹಿತ್ಯ ಸೃಜನಶೀಲತೆಯ ಧೋರಣೆ ಯಾವಾಗಲೂ ತುಳಿತಕ್ಕೊಳಗಾದವರ ಪರವಾಗಿದೆ.

ಜಂಬಣ್ಣ ಅಮರ ಚಿಂತರು 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯಲ್ಲಿ ಕೊರವ ಸಮುದಾಯದ (ಸಾಂಸ್ಕೃತಿಕ) ಬದುಕನ್ನು ಚಿತ್ರಿಸುತ್ತಲೇ ಫ್ಯೂಡಲಿಸ್ಟ್‌ಗಳ ಅಡಿಯಲ್ಲಿ ಬದುಕನ್ನು ಕಳೆದುಕೊಳ್ಳುವ ದಾರುಣ ಘಟನಗಳನ್ನು ಅನಾವರಣಗೊಳಿಸುತ್ತಾರೆ. ಈ ಕಾದಂಬರಿಯ 'ಕುರುಮಯ್ಯ' ಕೊರವರ ಸಮುದಾಯದ ಪ್ರಮುಖ ಪಾತ್ರವಾಗಿ ಗಮನಾರ್ಹವಾಗುತ್ತಾನೆ. ಯಾಕೆಂದರೆ ಕೊರವರ ಒಟ್ಟು ಸಂಸ್ಕೃತಿಯನ್ನು ಮುನ್ನಡೆಸುವ ಜವಾಬ್ದಾರಿ ಹೊತ್ತಿರುವ ಯಜಮಾನ. ಈ ಕಾದಂಬರಿ ಕುರಿತಾಗಿ ಚೆನ್ನಣ್ಣ ವಾಲೀಕಾರ ಹೀಗೆ ಅಭಿಪ್ರಾಯ ಪಡುತ್ತಾರೆ. " ಇದು ನಮ್ಮ ಬುಡಕಟ್ಟಿನ ಜನಾಂಗದಲ್ಲಿ ಒಂದಾದ ಕೊರವರ ಬದುಕಿನ ಸೂಕ್ಷ್ಮ ವಿವರಣೆಗಳೊಂದಿಗೆ ಕೂಡಿದೆ, ಇಲ್ಲಿ ಈ ಜನರ ನ್ಯಾಯ, ನಂಬುಗೆ, ಪ್ರೀತಿ ವಿಶ್ವಾಸ, ಪರಿಶ್ರಮ ಜೀವನ, ಹಾದರ, ಕುಡಿತ ಬೇರೆ ಬೇರೆ ಚಟ, ಹಟ ಎಲ್ಲ ವಿಷಯಗಳನ್ನೊಳಗೊಂಡ ಅವರ ಬದುಕಿನ ಕೋಶವಾಗಿದೆ. ಎಲ್ಲ ಬುಡಕಟ್ಟುಗಳಿಗೆ ಆಧುನಿಕತೆ ತಂದ ಕುತ್ತು ಇಲ್ಲಿ ಕಾಣಬಹುದು. ಹಿಂದಿನದು ಬಿಡಲೇಬೇಕು ಹೊಸದನ್ನು ಸ್ವೀಕರಿಸಲೇಬೇಕೆಂಬುದು ಎಲ್ಲ ಬುಡಕಟ್ಟುಗಳ ಮುಂದಿರುವ ಸವಾಲಾಗಿದೆ. ಎಂಬುದು ಈ ಕಾದಂಬರಿ ಧ್ವನಿಸುವುದು. ಈ ಮೂಲಕ ಈ ಕಾದಂಬರಿ ಪ್ರಾದೇಶಿಕವಾಗದೆ ಇಡೀ ದೇಶದ ಬುಡಕಟ್ಟುಗಳ ಮೇಲೆ ಬೆಳಕು ಚೆಲ್ಲುವ ಕೃತಿಯಾಗಿದೆ ಎಂದು ಯಾರಿಗಾದರೂ ಅನ್ನಿಸುವದು."[೧೧]

ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದಿರುವ ಸಂಸ್ಕೃತಿ ಹೊಸ ಸಾಧ್ಯತೆಯನ್ನು ಹುಡಕಲು ತನ್ನ ಸಂಸ್ಕೃತಿಯ ಮೂಲಕವೇ ಅನನ್ಯತೆಯನ್ನು ಪಡೆಯಲು ಹಂಬಲಿಸುತ್ತದೆ. ಇಂಥ ಚಲನೆಗೆ ಪ್ರತಿಷ್ಠಿತ ವರ್ಗ ಅಡ್ಡಗೋಡೆಯಾಗುತ್ತದೆ. ಇದರ ನಡುವೆಯೂ ಬದುಕುವ ಉಪಾಯಗಳನ್ನು ಕಂಡುಕೊಳ್ಳುತ್ತದೆ. ಇದಕ್ಕೆ ಈ ಕಾದಂಬರಿಯಲ್ಲಿ 'ಕುರುಮಯ್ಯ' ಮುಂದಾಳತ್ವದ ಕೊರವ ಸಮುದಾಯ ಗಮನಾರ್ಹವಾಗುತ್ತದೆ. ಕುಶಾಲಪ್ಪ ಬಂಡವಾಳ ಶಾಹಿಯು ಕೊರವರು ಬದುಕಿಗಾಗಿ ಆಶ್ರಯಿಸಿಕೊಂಡಿದ್ದ ಹಂದಿಗಳನ್ನು ನಾಶಮಾಡಲು ಸಜ್ಜಾಗುತ್ತಾನೆ. ಈ ಮುಂಚೆ ಕುಶಾಲಪ್ಪ ಹಂದಿಗೊಬ್ಬರ ವ್ಯಾಪಾರದಲ್ಲಿ ಕೊರವರನ್ನು ಆರ್ಥಿಕವಾಗಿ ದುರ್ಬಲಗೊಳಿಸುತ್ತಾನೆ. ಇದು ಕುರುಮಯ್ಯನ ಮಾತಿನಲ್ಲಿ ಸ್ಪಷ್ಟಗೊಂಡಿದೆ.

"ತಿನಬೇಕಾಂತ ಇಟುಕಂಡ್ರೆ
ಧಣಿ ಬಂದು ಧನ್ನಂತ ಎಲೆಗೆಂಡು ಹ್ವಾದ....ಹ್ವಾದ"[೧೨]

ಅನ್ಯಮಾರ್ಗವಿಲ್ಲದೆ ಬೇರೆ ಉದ್ಯೋಗದ ಕಡೆ ಸ್ಥಿತ್ಯಂತರಗೊಳ್ಳುತ್ತದೆ. ಉದ್ಯೋಗವನ್ನು ಕುಶಾಲಪ್ಪನ ಚಿಕ್ಕಪ್ಪನ ಮಗನಾದ ಸಂಶಾಲಪ್ಪನ ಹೊಲವನ್ನು ಗುತ್ತಿಗೆ ಪಡೆದು ದುಡಿಯುತ್ತದೆ. ಇದೇ ಸಂದರ್ಭವನ್ನು ಕಾಯುತ್ತಿದ್ದ ಸಂಶಾಲಪ್ಪ ಕೊರವರನ್ನು ಆತ್ಮೀಯವಾಗಿ ಸ್ವಾಗತಿಸಿಕೊಳ್ಳುತ್ತಾನೆ. ಸಂಶಾಲಪ್ಪ ಕೆಳಸಂಸ್ಕೃತಿಯನ್ನು ಇಷ್ಟು ಸುಲಭವಾಗಿ ಹೊಲ ಗುತ್ತಿಗೆ ಕೊಡಲು ಕಾರಣ ಕುಶಾಲಪ್ಪನ

ಮೇಲೆ ದ್ವೇಷವಿರುತ್ತದೆ. ಆ ದ್ವೇಷ ಕೊರವರನ್ನು ತನ್ನ ಅಡಿಯಾಳಾಗಿಸುವುದರ ಮೂಲಕ ಸಾಧಿಸುತ್ತಾನೆ. ಇವರುಗಳ ದ್ವೇಷಾಸೂಯೆಯಲ್ಲಿ ಕೊರವರು ಕತ್ತರಿಯಲ್ಲಿ ಸಿಕ್ಕಿಕೊಂಡ ಅಡಕೆಯಂತೆ ಬದುಕನ್ನು ಕಳೆದುಕೊಳ್ಳುತ್ತಾರೆ.

ಸಂಶಾಲಪ್ಪ ಬುದ್ಧಿವಂತಿಕೆಯನ್ನು ಉಪಯೋಗಿಸಿ ಕೊರವರ ಹಾಗೂ ಕುಶಾಲಪ್ಪನವರ ನಡುವೆ ಸಂಘರ್ಷಣೆಯನ್ನುಂಟು ಮಾಡುತ್ತಾನೆ. ಈ ಸಂಘರ್ಷಣೆ ಕೋರ್ಟಿನವರಿಗೂ ಹೋಗಿಬಿಡುತ್ತದೆ. ಇದರಲ್ಲಿ ಕುಶಾಲಪ್ಪ ನಿರ್ವೀರ್ಯವಾಗುತ್ತಾನೆ. ಸಂಶಾಲಪ್ಪ ಕೊರವರ ಪರ ಹೋರಾಡುವುದು ಕುಶಾಲಪ್ಪನ ಅಧಿಕಾರವನ್ನು ಸಡಿಲಗೊಳಿಸುವುದು ಒಂದು ಉದ್ದೇಶವಾದರೆ, ಕೊರವರು ನೆಲೆಯಾದ ಅಂಕುಶದೊಡ್ಡಿಯನ್ನು ವಶಪಡಿಸಿಕೊಳ್ಳೋದು ಮತ್ತೊಂದಾಗಿದೆ. ಅಂಕುಶದೊಡ್ಡಿ ನೈಸರ್ಗಿಕವಾಗಿ ಪ್ರಶಾಂತವಾದ ಸ್ಥಳ, ಅಲ್ಲಿ ಹೆಂಡದ ಡಿಪೋ ತೆರೆಯಲು ಸಂಶಾಲಪ್ಪ ಹಾಗೂ ಎಂ.ಎಲ್ .ಎ ಯಂಕನಗೌಡ ಆ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಆದರೆ ಅಲ್ಲಿ ವಾಸ ಹೂಡಿರುವ ಕೊರವರನ್ನು ಓಡಿಸುವುದು ಹೇಗೆ ಎಂಬ ಸಂಶಯಕಾಡುತ್ತದೆ. ಆಧುನಿಕ ಬಂಡಾವಾಳ ಶಾಹಿಯು ಮತ್ತೇ ತನ್ನ ಬುದ್ಧಿವಂತಿಕೆಯನ್ನು ಪ್ರದರ್ಶಿಸುತ್ತದೆ. ಅಲ್ಲಿ ಧಾರ್ಮಿಕತೆಯನ್ನು ಮುಂದಿಡುತ್ತಾರೆ.

ಕುಶಾಲಪ್ಪನ ಕ್ರೌರ್ಯದಿಂದ ತತ್ತರಿಸಿದ ಕೊರವ ಸಮುದಾಯ ತನ್ನ ಶ್ರಮದ ಮೂಲಕ ಸಾಮಾಜಿಕ ಚಲನೆಗೆ ಶಕ್ತಿ ಪಡೆದುಕೊಳ್ಳುತ್ತದೆ. ಇಂಥ ಚಲನೆಗೆ ಮಳೆಯಿಂದಾಗಿ ಅಂಕುಶದೊಡ್ಡಿ ಜಲಾವೃತವಾಗುತ್ತದೆ. ಹಾಗಾಗಿ ಬೆಟ್ಟದ ಲಿಂಗೇಶ್ವರ ದೇವಸ್ಥಾನದ ಆಶ್ರಯ ಪಡೆಯುತ್ತದೆ. ಇಂಥ ಸಂದರ್ಭವನ್ನೇ ಉಪಯೋಗಿಸಿಕೊಂಡ ಸಂಶಾಲಪ್ಪ, ದೇವಸ್ಥಾನವನ್ನು ಕೊರವರು ಮೈಲಿಗೆ ಮಾಡಿದ್ದಾರೆಂದು ಆರೋಪಿಸಿ, ರಾಯಪುರ ಮೇಲ್ಜಾತಿಯವರನ್ನು ಸಂಘಟಿಸುತ್ತಾನೆ. ಅ ಮೂಲಕ ಕೊರವರ ಬದುಕಿನ ಅವಿಭಾಜ್ಯವಾದ ಹಂದಿಗಳನ್ನು ನಾಶಮಾಡಿಸುತ್ತಾನೆ. ಆ ಹಂದಿಗಳು ಸಾಯಲು ಬೆಟ್ಟದ ಲಿಂಗೇಶ್ವರ ದೇವಾಲಯವನ್ನು ಅಪವಿತ್ರಗೊಳಿಸಿದ್ದಕ್ಕಾಗಿ ದೇವರು ಈ ರೀತಿ ಹಿಂಸೆ ನೀಡುತ್ತಿದ್ದಾನೆ. ಹಾಗಾಗಿ ಈ ಸ್ಥಳದಿಂದ ಬೇರೆ ಕಡೆ ಹೋದರೆ ನೀವು ಉಳಿಯಬಲ್ಲಿರೆಂಬ ತಂತ್ರ ಉಪಯೋಗಿಸುತ್ತಾನೆ. ಮೊದಲೇ ಮೌಢ್ಯತೆಯಲ್ಲಿ ಮುಳಿಗಿದ್ದ ಕೊರವ ಸಮುದಾಯ ಭಯಬಿದ್ದು ಓಡಿಹೋಗುತ್ತದೆ. ಆದರೆ, ಕುರುಮಯ್ಯ ಮುಂದಿನ ಬದಲಾವಣೆಯನ್ನು ನಿರೀಕ್ಷಿಸುತ್ತಾ ತನ್ನ ಸ್ಥಿತ್ಯಂತರ ನಿಲುವನ್ನು ಬದಲಾಯಿಸಿಕೊಂಡು ಅಲ್ಲೇ ಉಳಿಯಲು ಪ್ರಯತ್ನಿಸುತ್ತಾನೆ. ನಂತರದ ಬೆಳವಣಿಗೆಯಲ್ಲಿ ಯಂಕನಗೌಡ ಹಾಗೂ ಸಂಶಾಲಪ್ಪನ ಆಳುಗಳು ಬಲತ್ಕಾರ, ಹಿಂಸೆಯಿಂದ ಕುರುಮಯ್ಯನನ್ನು ಊರು ಬಿಡಿಸುತ್ತಾರೆ. ಅಂಕುಶದೊಡ್ಡಿಯಲ್ಲಿ 'ಹೆಂಡದ ಡಿಪೋ' ಸ್ಥಾಪಿತವಾಗುತ್ತದೆ. ಕೊರವರು ಅನ್ನ ಮಾರ್ಗವಿಲ್ಲದೆ ಬೇರೆ ಬೇರೆ ಪ್ರದೇಶಗಳಲ್ಲಿ ಸ್ಥಿತ್ಯಂತರಗೊಂಡು ಛಿದ್ರಗೊಳ್ಳುತ್ತಾರೆ.

ಆದರೆ ಕಾದಂಬರಿಯಲ್ಲಿ ಬಂಡವಾಳ ಶಾಹಿಗಳ ಕ್ರೌರ್ಯಗಳಿಗೆ ಕೊರವರು ಸುಲಭವಾಗಿ ಮಣಿಯುವುದಿಲ್ಲ, ಪ್ರತಿಹೆಜ್ಜೆಯಲ್ಲೂ ಬಲವಾದ ಪ್ರತಿಭಟನೆ ಮಾಡುತ್ತದೆ. ಆರ್ಥಿಕವಾಗಿ ದುರ್ಬಲರಾದವರ ಪ್ರತಿಭಟನೆ ಪ್ರತಿಷ್ಠಿತ ವರ್ಗದ ಮುಂದೆ ನೀರಸವಾಗಿ ಬಿಡುತ್ತದೆ. ನಿದರ್ಶನಕ್ಕಾಗಿ ಕುಶಾಲಪ್ಪನ ಕೈ ಕೆಳಗೆ ಕೆಲಸ ಮಾಡುತ್ತಿದ್ದ ಕೂಲಿಯಾಳುಗಳಿಗೆ ಕಡಿಮೆ ಕೂಲಿ ನೀಡುತ್ತಿರುವಾಗ; ಕೂಲಿಕಾರ್ಮಿಕ ಜಟಿಂಗಪ್ಪ "ಧಣಿ ನಮ್ಮ ಕೂಲಿ ಜಾಸ್ತಿ ಮಾಡಬೇಕು. ಈಗ ಕೊಡೋ ಕೂಲಿ ನಮಗ್ಯಾನು ಸಾಲವಲ್ದು. ನೀವೇ ನೋಡಾಕತ್ತೀರಿ ಕಾಳೀನ ಧಾರಣೆ ದಿನ ದಿನಕ ಏರ್ಲಿಕತ್ಯಾವ.... ಕೊಡೋ ಕೂಲಿ ಒಂದೊಪ್ಪತ್ತು ಅಂಬ್ಲಿಗೆ ಸಾಲವಲ್ದು"[೧]

ಎನ್ನುವ ಮಾತುಗಳು ಶ್ರಮ ಸಂಸ್ಕೃತಿಯ ಎಚ್ಚರದ ಪ್ರತೀಕವಾಗಿದೆ. ಅಧೀನ ಸಂಸ್ಕೃತಿ ತನ್ನ ಶ್ರಮ ಸಂಸ್ಕೃತಿಯ ಮೂಲಕ ಹೊಸ ಜೀವನ ಬದುಕಿಗೆ ಚಾಲನೆ ಪಡೆದುಕೊಳ್ಳುತ್ತಿದ್ದರೆ, ಪ್ರಬಲ ಸಂಸ್ಕೃತಿ ತನ್ನ ಹಿತಸಾಧನೆಗಾಗಿ ಶ್ರಮ ಸಂಸ್ಕೃತಿಯ ಬದುಕನ್ನೇ ನಾಶಮಾಡಲು ಪ್ರಯತ್ನಿಸುತ್ತದೆ. ವ್ಯವಸ್ಥೆಯ ಕ್ರೌರ್ಯದಿಂದ ಹಸಿವಿನಿಂದ ತತ್ತರಿಸಿ ಬದುಕಿಗಾಗಿ ಹೀನಮಟ್ಟದ ಉದ್ಯೋಗಗಳ ಕಡೆ ಮುಖಮಾಡುತ್ತದೆ. ಕಾದಂಬರಿಕಾರರು ಇಂಥ ಎಚ್ಚರವನ್ನು ಬಹಳ ಸೂಕ್ಷ್ಮವಾಗಿ ಗುರುತಿಸುತ್ತಾರೆ. ಕೊರವರ 'ಜುಂಗ್ಲಪ್ಪನ ಮಗಳು ಮಂಗಮ್ಮ ಕುಟುಂಬವನ್ನು ತೂಗಿಸಿಕೊಂಡು ಹೋಗಲು ಸಾಧ್ಯವಾಗದೇ ಅಡ್ಡದಾರಿ ಹಿಡಿದಳು. ರಾತ್ರಿ ಹೊತ್ತು ಮೆರವಣಿಗೆಗಳಲ್ಲಿ ಬಿಜಿರಿ ಹೊತ್ತು ಮನೆಗೆ ಹಿಂದಿರುಗಿ ಬರುವಾಗ ಎಲ್ಲರ ಕಣ್ಣು ತಪ್ಪಿಸಿ ದಲ್ಲಾಳಿಗಳ ಸಹಾಯದಿಂದ ರಾಯಪುರದ ಲಾಡ್ಜಿಂಗ್ ಗಳಲ್ಲಿ ಮಾನಮಾರಿಕೊಂಡು ಹಣ ಸಂಪಾದನೆ ಮಾಡಲು ಸುರುಮಾಡಿದ್ದಳು ಎಂಬುದು ವ್ಯವಸ್ಥೆ ಹೇರಿದ ಕ್ರೌರ್ಯಕ್ಕೆ ಕೆಳವರ್ಗ ಇಂಥ ಉದ್ಯೋಗ ಕಂಡುಕೊಳ್ಳುತ್ತವೆ. ಇದು ಬದುಕಿಗಾಗಿ ಹೋರಾಟವಾಗುತ್ತದೆ. ಮತ್ತೇ ಕೆಲವರು ಕಳ್ಳತನದ ದಂಧೆಗೆ ಇಳಿದು ಬಿಡುತ್ತಾರೆ.

ಕಾದಂಬರಿಯಲ್ಲಿ ಕೊರವ ಸಂಸ್ಕೃತಿಯಲ್ಲಿ ಹಾದರವನ್ನು ಚಿತ್ರಿಸುತ್ತಾರೆ. ಹಾದರಕ್ಕೆ ಇಳಿಯುವ ಸ್ತ್ರೀ ಪಾತ್ರಗಳೆಂದರೆ, ತಾಯೇರಿ, ಬುಡ್ಡಮ್ಮ, ಮಂಗಮ್ಮ, ಇವರು ಲೈಂಗಿಕ ತೃಷೆಗಾಗಿ ಈ ವೃತ್ತಿಗೆ ಇಳಿದರೆ, ಕೆಲವರು ಬಡತನದಿಂದ ಈ ವೃತ್ತಿಗೆ ಇಳಿದು ಬಿಡುತ್ತಾರೆ. ಹೀಗೆ ಇಂಥ ವೃತ್ತಿಗೆ ಇಳಿದವರ ಮೇಲೆ ಪುರುಷ ತನ್ನ ಅಧಿಕಾರ ಚಲಾಯಿಸಿದರೂ 'ಲಗೋಡ್ '(ಅಂದರೆ, ಹೆಣ್ಣನ್ನು ಬೇರೆಯವರಿಗೆ ಮಾರುವ ಪದ್ಧತಿ) ವಿಧಿಸುತ್ತಾರೆ. ಇದು ಕೊರವ ಸಂಸ್ಕೃತಿಯಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ.

ಪ್ರಮುಖವಾಗಿ ಗ್ರಹಿಕೆಗೆ ಬರುವ ಅಂಶವೆಂದರೆ, ಕುಶಾಲಪ್ಪನ ಅಡಿಯಾಳಾಗಿದ್ದ ಕೊರವರು ತಮ್ಮ ಮೇಲೆ ಆದ ಕ್ರೌರ್ಯದ ಮೂಲಕ ಜಾಗೃತಗೊಂಡು ಹೊಸ ಬದುಕಿನತ್ತ ಮುಖ ಮಾಡುತ್ತಾರೆ. ಆ ಮೂಲಕ ಬೇರೆ ಬೇರೆ ಉದ್ಯೋಗ ಕಂಡುಕೊಳ್ಳುತ್ತಾರೆ. ಮೇಲ್ಜಾತಿಯವರು ಬಾವಿಯಿಂದ ನೀರನ್ನು

ಕೊಡಲು ನಿರಾಕರಿಸಿದಾಗ ಸ್ವತಃ ಕೊರವರೇ ಭಾವಿ ತೋಡಿಕೊಳ್ಳುತ್ತಾರೆ. ಇದು ಕೊರವ ಸಂಸ್ಕೃತಿಯ ಬದಲಾವಣೆಯ ಸೂಚನೆಗಳನ್ನು ತೋರಿಸುತ್ತದೆ. ಲೇಖಕರ ಆಶಯವೂ ಕೂಡಾ ಇದೇ ಆಗಿದೆ.

**ಬರಗೂರು ರಾಮಚಂದ್ರಪ್ಪ**

ಊಳಿಗಮಾನ್ಯ ವ್ಯವಸ್ಥೆ ಗ್ರಾಮೀಣ ಪ್ರದೇಶಗಳಲ್ಲಿ ಹೆಪ್ಪುಗಟ್ಟಿಕೊಂಡಿದೆ. ಬಂಡವಾಳಶಾಹಿ ಮತ್ತು ದೇಶವನ್ನು ಆಳುವ ಸರಕಾರ ಅದರೊಡನೆ ರಾಜಿ ಮಾಡಿಕೊಂಡಿವೆ. ಆದ್ದರಿಂದ ಆ ಸರಕಾರದ ಶಕ್ತಿ ಜಮೀನುದಾರರ ರಕ್ಷಣೆಗೆ ನಿಲ್ಲುತ್ತವೆ. ಹಾಗಾಗಿ ಶೋಷಿತ, ಶೋಷಕ, ಬಂಡವಾಳಶಾಹಿ (ಜಮೀನ್ದಾರ) ಮತ್ತು ಶ್ರಮಿಕವರ್ಗ ನಿರ್ದಿಷ್ಟ ಚೌಕಟ್ಟಿನ ಸೂತ್ರದಿಂದ ಕೃತಿರಚನೆಗೆ ಕೈಹಾಕುವುದು ಬರಗೂರರ ಮಾದರಿ. ಬರಗೂರರ ಸಾಹಿತ್ಯ ಸೃಜನಶೀಲತೆ ಬಂಡಾಯ ಸಾಹಿತ್ಯ ಸಂಘಟನೆ ರೂಪಗೊಳ್ಳುವ ಮೊದಲೇ ಇವರು ಅನೇಕ ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಬರಗೂರರ ಸಾಹಿತ್ಯ ಸೃಜನ ಶೀಲತೆಯನ್ನು ಪುರುಷೋತ್ತಮ ಬಿಳಿಮಲೆಯವರು ಹೀಗೆ ಅಭಿಪ್ರಾಯ ಪಡುತ್ತಾರೆ "ಬರಗೂರರ ಗ್ರಹಿಕೆ ಮಾರ್ಕ್ಸ್‌ವಾದಕ್ಕೆ ಬದ್ಧವಾಗಿರುವುದರಿಂದ, ಅವರ ಕಾದಂಬರಿಗಳಲ್ಲಿ ಒಂದು ಸಿದ್ಧಾಂತ ಇರುತ್ತದೆ. ಇದರಿಂದಾಗಿ ಎಷ್ಟೋ ಬಾರಿ ಬರಗೂರರು ಸಿದ್ಧಾಂತ ಹೇಳಲೆಂದೇ ಕಾದಂಬರಿ ಪ್ರಕಾರವನ್ನು ಬಳಸಿಕೊಂಡಂತೆ ತೋರುವುದುಂಟು"[೧೪] ಹಾಗಾಗಿ ಈ ಸಿದ್ಧಾಂತಗಳ ಆಧಾರದ ಮೇಲೆ ಕೆಳಸಂಸ್ಕೃತಿಯ ಬದಲಾವಣೆಯ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಪ್ರಸ್ತುತ 'ಸೂರ್ಯ' ಕಾದಂಬರಿಯಲ್ಲಿ ಜಮೀನ್ದಾರ ಆತನ ಮನೆಯ ಜೀತದಾಳು ಕರಿಯನ ಸಂಬಂಧದಲ್ಲಿ ಬರಗೂರರ ಆಶಯ ಗುರ್ತಿಸಬಹುದು. ಕರಿಯ ಜಮೀನ್ದಾರನ ಹಿಂಸೆಯನ್ನು ಸಹಿಸಿಕೊಳ್ಳುತ್ತಾನೆ. ಜಮೀನ್ದಾರ ಕರಿಯನ ಹೆಂಡತಿ ಚೆನ್ನಿಯನ್ನೂ ಅತ್ಯಾಚಾರವೆಸಗಿ, ಕೊಂದು ಕರಿಯನಿಗೆ ಬಂದೂಕಿನಿಂದ ಹೆದರಿಸುವ ಸಂದರ್ಭದಲ್ಲೂ ಹಾಗೂ ಕಾದಂಬರಿಯ ಕೊನೆಯಲ್ಲಿ ಗೌಡತಿ ಸೀತಕ್ಕಳ ಮೇಲಿನ ಸೇಡನ್ನು ಕರಿಯನ ಮೇಲೆ ಕಾರಣವಿಲ್ಲದೇ ಹೊಡೆಯಲು ಬಂದಾಗ ಕರಿಯ ತನ್ನಲ್ಲೆ ಅಸಹನೆಯನ್ನು ಕೈಗೆ ತಂದು ಹೊಡೆಯಲು ಬಂದ ಜಮೀನ್ದಾರನ ಕೈಮೆಟ್ಟಿ ನಿಲ್ಲುತ್ತಾನೆ. ಆಗ ಕೆಳಗೆ ಬಿದ್ದ ಜಮೀನ್ದಾರನ 'ಚಾಟಿ' ಮತ್ತೇ ಕೈಗೆ ಬರಲಿಲ್ಲ, ಕುಸಿದು ಬಿದ್ದ. ಮೇಲೆಳಲಿಲ್ಲವೆನ್ನುವುದು ಈ ವ್ಯವಸ್ಥೆಯ ಹಿಡಿತ ಸಡಿಲಗೊಳ್ಳುತ್ತಿರುವ ಸಂಕೇತವಾದರೆ, ಕೆಳಗೆಬಿದ್ದ 'ಚಾಟಿ'ಯನ್ನು ಕೈಗೆ ತೆಗೆದು ಕೊಳ್ಳುತ್ತಾನೆ ಎನ್ನುವುದು ವ್ಯವಸ್ಥೆ ಇನ್ನೂ ಜೀವಂತವಿರುವುದರ ಸೂಚನೆಯಾಗಿದೆ. ಇದು ಬಂಡಾಯದ ಅಮಲಿನಲ್ಲಿ ವಾಸ್ತವವನ್ನು ಮರೆತಿಲ್ಲನೆಂಬ ಎಚ್ಚರಿಕೆಯನ್ನು ನಮಗೆ ತಿಳಿಸುತ್ತದೆ. ಜೀತದಾಳು ಕರಿಯ ಜಮೀನ್ದಾರನಿಗೆ ಎದುರುಗೊಳ್ಳುವುದು ಶ್ರಮ ಸಂಸ್ಕೃತಿಯ ಎಚ್ಚರದ ಸಂಕೇತವಾಗಿದೆ. ಆ ಎಚ್ಚರದ ಮೂಲಕ ಹೊಸವ್ಯವಸ್ಥೆಯ ಚಲನೆಗೆ ಕೆಳವರ್ಗ ತುಡಿಯುತ್ತದೆ.

ಇನ್ನೂ ಈ ಕಾದಂಬರಿಯಲ್ಲಿ ಪ್ರಧಾನವಾದ ಸಮಸ್ಯೆ ಜಾತಿ, ವರ್ಗಗಳದ್ದು. ಜೊತೆಗೆ ಲೈಂಗಿಕತೆ, ಹಸಿವು ಹುಟ್ಟಿಸುವ ವೈರುಧ್ಯಗಳು ಮುಖ್ಯವಾಗಿ ಶೋಷಣೆಯ ವಾತಾವರಣದಲ್ಲಿ ನಡೆಯುವ ಕ್ರಿಯೆಯೆಂದೇ ಬರಗೂರರು ತಿಳಿಯುತ್ತಾರೆ. ಕಾಮ ಮನುಷ್ಯನ ಅವಿಭಾಜ್ಯ ಅಂಗವಾದರೂ ಅದರ ಹಸಿವಿನಿಂದ ಕಾದಂಬರಿಯಲ್ಲಿ ಬರುವ ಸ್ತ್ರೀ ಪಾತ್ರಗಳು ನರಳುತ್ತವೆ ಮತ್ತು ಹಾಗೆಯೇ ಅದಕ್ಕಾಗಿ ಹೋರಾಟ ನಡೆಸುತ್ತವೆ. ಗೌಡತಿ ಸೀತಕ್ಕ ಹಾಗೂ ಕರಿಯನ ಅತ್ತಿಗೆ ಮಾರಕ್ಕ ಲೈಂಗಿಕ ತೃಷೆಗಾಗಿ ಹೋರಾಡುವ ಪಾತ್ರಗಳು. ಈ ಎರಡೂ ಪಾತ್ರಗಳು ಕರಿಯನ ದೇಹಸೌಷ್ಟತೆಯನ್ನು ಮೆಚ್ಚಿ ಅವನೊಂದಿಗೆ ಸಂಬಂಧ ಹೊಂದಲು ಹೋರಾಡುತ್ತವೆ. ಈ ಹೋರಾಟದಲ್ಲಿ ಸೀತಕ್ಕ ಸಫಲಳಾದರೆ, ಮಾರಕ್ಕ ವಿಫಲವಾಗುತ್ತಾಳೆ. ವಿಚಿತ್ರವೆಂದರೆ ಮಾರಕ್ಕ ಕರಿಯನ ಅತ್ತಿಗೆಯಾದುದು. ಹಿಂದೂ ಧರ್ಮದ ಪ್ರಕಾರ ಅತ್ತಿಗೆಯನ್ನು 'ತಾಯಿ' ಸಮಾನವಾಗಿ ಕಾಣುತ್ತೇವೆ. ಆದರೆ ಕೆಳವರ್ಗಗಳಲ್ಲಿ ಇಂಥ ಸಂಬಂಧಗಳು ವಾಸ್ತವದಲ್ಲಿ ರೂಢಿಯಲ್ಲಿದೆ. ಉದಾಹರಣೆಯಾಗಿ ಬುಡಕಟ್ಟು ಜನಾಂಗವಾದ ಲಂಬಾಣಿಗರಲ್ಲಿ ಅಣ್ಣ ಸತ್ತಾಗ, ಅತ್ತಿಗೆಯನ್ನು ಮದುವೆಯಾಗುವ ಸಂಸ್ಕೃತಿ ರೂಢಿಯಲ್ಲಿದೆ. ಒಂದು ವೇಳೆ ಅಣ್ಣ ಬದುಕಿದ್ದು ನಪುಂಸಕನಾಗಿದ್ದರೂ ತಮ್ಮ ಅತ್ತಿಗೆಯೊಂದಿಗೆ ಸಂಬಂಧ ಹೊಂದುತ್ತಾನೆ. ಇಂಥ ಒಂದು ಕೆಳವರ್ಗಗಳ ಸಂಸ್ಕೃತಿಯನ್ನು ಬರಗೂರರು ಸೂಕ್ಷ್ಮವಾಗಿ ಗುರುತಿಸುತ್ತಾರೆ.

ಇಂಥ ಸಂಬಂಧಗಳ ಮೂಲಕವೇ ದ್ವೇಷಾಸೂಯೆಗೆ ಕಾರಣವಾಗುತ್ತದೆ. ಇಲ್ಲಿ ಮಾರಕ್ಕಳ ಕಾಮ ತೃಷೆಯು ವಿಫಲವಾದ ಕರಿಯನನ್ನು ಮನೆಯಿಂದ ಆಚೆ ಹಾಕುತ್ತಾಳೆ. ಗೌಡತಿ ಸೀತಕ್ಕ ಹಾಗೂ ಕರಿಯನ ಸಂಬಂಧದಿಂದ ಜಮೀನ್ದಾರ ಕರಿಯನ ಹೆಂಡತಿ ಚೆನ್ನಿಯನ್ನು ಕೊಲ್ಲುತ್ತಾನೆ. ಈ ವೈರುಧ್ಯಗಳ ನಡುವೆ ಕರಿಯ ಶೋಷಣೆಗೆ ಒಳಗಾಗುತ್ತಾನೆ. ಆದರೂ ಸೀತಕ್ಕ ಕರಿಯನ ಜೊತೆಗೆ 'ಓಡಿ' ಹೋಗುತ್ತಾಳೆ. 'ಓಡಿ' ಹೋಗುವ ಕ್ರಿಯೆ ಕದ್ದು ಮುಚ್ಚಿ ನಡೆಯುವುದಿಲ್ಲ ಗೌಡನೆದುರೇ, ಪಂಚಾಯಿತಿಗೆ ಬಂದ ಜನರ ಎದುರೇ ಸೀತಕ್ಕ ಕರಿಯನ ಕೈಹಿಡಿದು ನಡೆದು ಬಿಡುತ್ತಾಳೆ. ಅಲ್ಲಿಯವರೆಗೂ ಗೌಡನನ್ನು ನೋಡಿ ಹೆದರಿಕೊಳ್ಳುತ್ತಿದ್ದ ಕರಿಯ ಗೌಡನೆದುರು ಎದೆ ಸೆಟೆಸಿಕೊಂಡು ಹೋಗಿ ಕ್ರಾಂತಿಗೆ ಕಾರಣನಾಗುತ್ತಾನೆ. ಜಮೀನ್ದಾರನನ್ನು ತೀಕ್ಷ್ಣ ನೋಟಗಳಿಂದ ನೋಡುತ್ತಾನೆ. ಆ ನೋಟದಲ್ಲಿ ಪ್ರತಿಭಟನೆಯ ಕಿಡಿಗಳು ಏಳುತ್ತವೆ. ಇದರಿಂದ ಗೌಡನಿಗೆ ಹಲವು ರೀತಿಯಿಂದ ಪ್ರಶ್ನೆಸಿದಂತಾಗುತ್ತದೆ. ಈ ಸಂದರ್ಭದಲ್ಲಿ ದೌರ್ಜನ್ಯ ಅಂತ್ಯವಾಗಿ ಪರಿವರ್ತನೆಗೆ ಕಾರಣನಾಗುತ್ತಾನೆ.

ಜೀತದಾಳು ಕರಿಯ ಜಮೀನ್ದಾರನ ಎದುರಲ್ಲೇ ಸೆಟೆದು ನಿಲ್ಲುವುದಕ್ಕೆ ಸೀತಕ್ಕ ಧೈರ್ಯ ತುಂಬುತ್ತಾಳೆ. ಹೀಗೆ ಶೋಷಿತವರ್ಗಕ್ಕೆ ಬೆಂಗಾವಲಾಗಿ ಧೈರ್ಯ ನೀಡುವಂತಿದ್ದರೆ ಎಂಥ ಸಾಹಸವನ್ನು ಮಾಡಬಲ್ಲರೆಂಬುದಕ್ಕೆ ಕರಿಯನೇ ಸಾಕ್ಷಿಯಾಗುತ್ತಾನೆ.

## ಕುಂಬಾರ ವೀರಭದ್ರಪ್ಪ

ಇವರು ಗ್ರಾಮೀಣ ಪರಿಸರದಿಂದ ಬಂದು ಅಲ್ಲಿಯ ಅನುಭವಗಳನ್ನು ಕೃತಿರೂಪದ ಮೂಲಕ ಅನಾವರಣಗೊಳಿಸುತ್ತಾರೆ. ಕೃತಿಯಲ್ಲಿ ಪ್ರಾದೇಶಿಕ ಭಾಷೆಯನ್ನು ನಿರೂಪಕನ ಭಾಷೆಯನ್ನಾಗಿ ಮಾಡಿಕೊಂಡೇ ಕೆಳವರ್ಗದ ಸಾಂಸ್ಕೃತಿಕ ಜಗತ್ತನ್ನು ತೆರೆದು ತೋರಿಸುತ್ತಾರೆ. ಅದರಲ್ಲಿಯೇ ಮಡುಗಟ್ಟಿದ ಪ್ರತಿಭಟನಾ ಚೈತನ್ಯವನ್ನು ಕಡೆದು ನಿಲ್ಲಿಸುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿನ ಊಳಿಗಮಾನ್ಯ ವ್ಯವಸ್ಥೆಯ ಮರುಗೊಳ್ಳುವ ಅನಾರೋಗ್ಯಕರವಾದ ಮತ್ತು ಅಮಾನುಷವಾದ ದೌರ್ಜನ್ಯವನ್ನು, ಬಡತನವನ್ನು ಭೀಕರತೆಯನ್ನು ಕುಂ.ವೀ.ಚಿತ್ರಿಸುತ್ತಾರೆ.

ಮೇಲ್ವರ್ಗ ಮತ್ತು ಕೆಳವರ್ಗದ ಸಮುದಾಯಗಳ ಸಂಬಂಧಗಳು ವರ್ಗಾಧಾರಿತ, ಜಾತಿಯಾಧಾರಿತ ವ್ಯವಸ್ಥೆಯಲ್ಲಿ ಹಲವಾರು ನಿಯಂತ್ರಣಗಳಲ್ಲಿ ರೂಪುಗೊಳ್ಳುತ್ತಿವೆ. ಮೇಲ್ವರ್ಗದ ಕ್ರೌರ್ಯದ ಮುಂದೆ ಅಸಹಾಯಕ ಕೆಳವರ್ಗ ಪ್ರತ್ಯೇಕವಾಗುವ ಅಂದರೆ ತನ್ನತನವನ್ನು ಅನಿವಾರ್ಯವಾಗಿ ಉಳಿಸಿಕೊಳ್ಳಬೇಕಾದ, ಬೆಳೆಸಿಕೊಳ್ಳಬೇಕಾದ ಒತ್ತಡಕ್ಕೆ ಒಳಗಾಗುತ್ತಿದ್ದಾನೆ. ಸಾಮಾಜಿಕ ಉದ್ದೇಶ ಅನ್ನುವುದು ಇದೆಯಾದರೂ, ಅದು ಸಮಗ್ರವಾಗಿ ನೆಲೆಯೂರಲು ಸಾಧ್ಯವಾಗುತ್ತಿಲ್ಲ. ಯಾಕೆಂದರೆ ಇರುವ ಮತ್ತು ಇಲ್ಲದ ಸ್ಥಿತಿಯು ಮನುಷ್ಯನನ್ನು ಹಲವು ಗುಂಪುಗಳಲ್ಲಿ ಒಡೆಯುತ್ತಿದೆ. ಇರುವ ಸ್ಥಿತಿ ತನ್ನ ನೆಲೆಯಿಂದ ಹೊರಮುಖವಾಗಿ ಹರಿಯುವುದನ್ನು ತಿರಸ್ಕರಿಸುತ್ತದೆ. ಇಲ್ಲದ ಸ್ಥಿತಿಯು ಅನುಮಾನ ಹಾಗೂ ಅವಮಾನದಲ್ಲಿ ಹಿಂಜರಿಯುತ್ತಿದೆ ಅಥವಾ ಪೂರ್ಣವಾಗಿ ಸಿಡಿಯುವ ಹಂತಕ್ಕೆ ನಡೆದುಬಿಡುತ್ತದೆ. ಇಂಥ ಕ್ರಿಯೆಯನ್ನು ಕುಂ.ವೀರಭದ್ರಪ್ಪನವರು ತಮ್ಮ 'ಕಪ್ಪು' ಕಾದಂಬರಿಯಲ್ಲಿ ಸೆರೆಹಿಡಿಯುತ್ತಾರೆ. ಕೆಳವರ್ಗಗಳ ಬದುಕಿನ ಹಲವು ಮುಖಗಳನ್ನು ಚಿತ್ರಿಸುತ್ತಲೇ ಊಳಿಗಮಾನ್ಯ ಜಮೀನ್ದಾರರ ದರ್ಪವನ್ನು ಇಲ್ಲವಾಗಿಸುವ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಅಸಹಾಯಕ ಜನತೆಯ ಪರವಾಗಿ ಅಧಿಕೃತವಾಗಿ ಬರೆಯುವ ಕುಂ.ವೀ.ಯವರು, ಭಯಂಕರ ಮಾದರಿಗಳನ್ನು ಕಾದಂಬರಿಗಳಲ್ಲಿ ಸೃಷ್ಟಿಸಿದ್ದಾರೆ. ಇವರು ತಮ್ಮ ಬರವಣಿಗೆಯಲ್ಲಿ ವಿಸ್ತೃತ ವಿವರಣೆಗೆ ಹೆಸರಾದರೂ, ಕಾದಂಬರಿಯಲ್ಲಿ ಅದೇ ಒಂದು ದೋಷವಾಗಿದೆ. ಇದಕ್ಕೆ ಅನಿಸಿದ್ದನ್ನು ಬೇಗನೆ ಹೇಳಿಬಿಡಬೇಕೆಂಬ ಅವಸರವೂ ಕಾರಣವಾಗಿರಬಹುದು. ಆದರೆ ಕುಂ.ವೀ.ಬರವಣಿಗೆಯಲ್ಲಿ ಇದು ಮಹತ್ವದ ದೋಷವಾಗುವುದಿಲ್ಲ. ಯಾಕೆಂದರೆ, ಚಲನೆಯನ್ನು ಸಂಗಾತಿಯಾಗಿ ಮಾಡಿಕೊಂಡಿರುವ ಲೇಖಕ ವ್ಯವಸ್ಥೆಯೊಡನೆಯ ಹೋರಾಟದಲ್ಲಿ ತನ್ನ ಅಂಥ ಮಿತಿಗಳನ್ನು ಗೆದ್ದುಕೊಂಡು ಬಿಡುತ್ತಾನೆ. ಈ ಮಿತಿಗಳನ್ನು 'ಕಪ್ಪು' ಕಾದಂಬರಿಯಲ್ಲಿ ಗುರ್ತಿಸಲು ಸಾಧ್ಯವಿದೆ.

ಬದುಕುವ ಅವಶ್ಯಕತೆಯನ್ನು ಮೂಲಭೂತವಾಗಿ ಪ್ರಶ್ನಿಸಿಕೊಳ್ಳುವ 'ಕಪ್ಪು' ಹೆಣ್ಣನ್ನು ಊಳಿಗಮಾನ್ಯ ವ್ಯವಸ್ಥೆಯ ಅಡಿಯಾಳಾಗಿ ಮಾಡಿಕೊಳ್ಳುವುದನ್ನು ನಿರಂತರ ವಿಷಾದದೊಡನೆ ಎದುರುಗೊಳ್ಳುತ್ತದೆ. ಯಾವುದಾದರೂ ಒಂದು ಭರವಸೆ ಕೊಟ್ಟು ಹೆಣ್ಣನ್ನು ಮರಳು ಮಾಡುತ್ತಲೇ ಶೋಷಿಸಿಕೊಂಡು ಬಂದ ಭಾರತೀಯ ಪುರುಷ ಪ್ರಧಾನ ಸಮಾಜವು, ಸಾಂಸ್ಕೃತಿಕವಾಗಿ ಅವಳ ಚೈತನ್ಯವು ಸಾರ್ವತ್ರಿಕಗೊಳ್ಳುವುದನ್ನು ನಿಷೇಧಿಸುತ್ತದೆ. ಕೃತಿಯ ಒಡಲಾದ ಗೌರಿಯ ಬದುಕಿನ ಆಶಯಗಳು ಯಾಕೆ ಈ ಸಮಾಜಕ್ಕೆ ಒಪ್ಪಿತವಾಗುವುದಿಲ್ಲವೆನ್ನುವುದಕ್ಕೆ ಈ ಹಿನ್ನಲೆಯಲ್ಲಿ ಕಾರಣಗಳು ದೊರೆಯುತ್ತವೆ. ಪ್ರಬಲವರ್ಗವು ಸಾಮಾಜಿಕ ಆಶಯಗಳನ್ನು ತನ್ನ ಒಳತಿಗಾಗಿ ದುಡಿಸಿಕೊಳ್ಳದೆ ವಿರೋಧಿಸುವ ಹಿವರಣವನ್ನು ನಾಶ ಮಾಡುವುದರ ಮೂಲಕ ಭವಿಷ್ಯವನ್ನು ತನ್ನ ಹಿಡಿತಕ್ಕೆ ತಂದುಕೊಳ್ಳುತ್ತದೆ. ಇಂಥ ಪ್ರಕ್ರಿಯೆಯಲ್ಲಿ ಸಮೂಹ ನಿರ್ವೀಯವಾಗುತ್ತದೆ. ಅಥವಾ ಪ್ರಬಲವಾದದ್ದರೊಡನೆ ತನ್ನ ಆಶಯಗಳನ್ನು ಗುರುತಿಸಿಕೊಳ್ಳುತ್ತದೆ.

ಹಿಂದೂ ಮತೀಯ ಆವರಣವು ಇಲ್ಲಿ ಲೇವಡಿಗೆ ಗುರಿಯಾಗುತ್ತದೆ. ಅದು ಉಂಟುಮಾಡುವ ಕೆಟ್ಟ ಪರಿಣಾಮಗಳು ಬದುಕನ್ನು ಪ್ರೀತಿಸುವ ಮತ್ತು ವಿರೋಧಿಸುವ ಎರಡೂ ನೆಲೆಗಳನ್ನು ನಾಶಮಾಡುತ್ತದೆ. ಯಾವುದೇ ಏರಿಳಿತ ಇಲ್ಲದೆ ಬದುಕುತ್ತಿದ್ದ ಕೆಳವರ್ಗದ ಭರಮಜ್ಜನ ಕುಟುಂಬ, ಪಾಳೆಯಗಾರನಂತೆ ಇರುವ ಕರೀಗೌಡನ ತೀರ್ಮಾನ ಕೇಳಿ ತನ್ನ ಸ್ಥಿರತೆಯನ್ನು ಕಳೆದುಕೊಳ್ಳುತ್ತದೆ. ಈ ಸ್ಥಿರತೆಯ ಚಲನೆಯು ಗೌಡನ ದೌರ್ಜನ್ಯವನ್ನು ಎದುರುಗೊಳ್ಳದೆಂಬ ಎಚ್ಚರದಿಂದ ಪರ್ಯಾಯ ಹುಡುಕಾಟಕ್ಕೆ ಪಲಾಯನ ಮಾಡಲು ಇಚ್ಛಿಸುತ್ತದೆ. ಪ್ರಬಲವಾದದ್ದರೊಡನೆ ಹೋರಾಡಿ ನಾಶವಾಗುವುದಕ್ಕಿಂತ ಆ ಕ್ರೂರ ಕಣ್ಣಿಗೆ ಮರೆಯಾಗಿ ಬದುಕುವುದನ್ನು ಭರಮಜ್ಜ ಆಯ್ಕೆ ಮಾಡಿಕೊಳ್ಳುತ್ತಾನೆ. ಭರಮಜ್ಜನ ಆಯ್ಕೆಯು ತನ್ನ ಕುಟುಂಬ ಅಂಥ ಕ್ರೂರ ವ್ಯವಸ್ಥೆಯಿಂದ ತಪ್ಪಿಸಿಕೊಳ್ಳುವ ಸಾದಹಿತವಾದರೂ, ಲೇಖಕರು ಭರಮಜ್ಜನ ಪಲಾಯನದ ಮೂಲಕ ಹೊಸ ಸಮಾಜದ ಬದಲಾವಣೆಯೆಡೆಗೆ ಕೊಂಡೊಯ್ಯುವ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಆದರೆ ಭರಮಜ್ಜನ ಈ ಪ್ರಯತ್ನ ಸಫಲವಾಗದೆ, ಕರಿಗೌಡನಷ್ಟೇ ದುಷ್ಟನಾದ ಅವನ ವಿರೋಧಿ ಬಾಸೂರಿನ ಸಣ್ರುದ್ರನ ಬಲೆಯಲ್ಲಿ ಬೀಳುತ್ತಾರೆ. ಇಲ್ಲಿನ ವಿಪರ್ಯಾಸವೆಂದರೆ, ಕಣ್ಣಿಗೆ ಕಾಣುವ ಶೋಷಣೆಯನ್ನು ಸಂಬಂಧಪಟ್ಟ ಸ್ಥಿತಿಯು ಅರ್ಥಮಾಡಿಕೊಂಡು ಕಾರ್ಯ ಪ್ರವೃತ್ತವಾಗುವುದು ಸಾಧ್ಯವಿದೆ. ಆದರೆ ಸಣ್ರುದ್ರ ಹಿತವಾಗುವಂತೆ ವರ್ತಿಸುತ್ತ ಶೋಷಣೆ ಮಾಡುವುದು ಕರೀಗೌಡರಿಗಿಂತ ಸಾಂಸ್ಕೃತಿಕವಾಗಿ ಅಪಾಯಕಾರಿ. ಆದ್ದರಿಂದ, ಗೌಡನ ಆಶಯವನ್ನು ತನ್ನೊಳಗೇ ವಿರೋಧಿಸುವ

ಗೌರಿ, ಸಣ್ಣುದ್ರನ ವೈವಾಹಿಕ ಭರವಸೆಯ ಸ್ವೀಕಾರದಲ್ಲಿ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಅವಳಿಗೆ ಆ ಆವರಣದ ಅರಿವು ಮೂಡತೊಡಗಿದಂತೆ ಅವರಿಬ್ಬರಲ್ಲೂ ಯಾವುದೇ ವ್ಯತ್ಯಾಸವಿಲ್ಲ ಎಂಬುದನ್ನು ಗ್ರಹಿಸುತ್ತಾಳೆ. ಆರ್ಥಿಕವಾಗಿ ದುರ್ಬಲವಾದ ಕೆಳವರ್ಗ ಎಲ್ಲಿ ಹೋದರೂ ಪ್ರಬಲವರ್ಗ ಅವರನ್ನು ಅಡಿಯಾಳಾಗಿಸಿಕೊಂಡು ಒಟ್ಟು ಸ್ವಾತಂತ್ರ್ಯದ ಹಕ್ಕನ್ನು ಕಸಿದುಕೊಳ್ಳುತ್ತದೆ. ಗೌರಿಯ ಬದುಕು ಕೂಡ ಈ ನೆಲೆಯಲ್ಲಿ ನಡೆದದ್ದು. ಗೌರಿ ಸಣ್ಣುದ್ರನ ಮನೋ ಇಂಗಿತವನ್ನು ಗ್ರಹಿಸಿದರೂ ಕರೀಗೌಡನ ಸಮೂಹದ ಅತ್ಯಾಚಾರ, ಸಣ್ಣುದ್ರನ ಏಕೀಕೃತ ಅತ್ಯಾಚಾರವನ್ನು ಮೀರಿಸುತ್ತದೆ. ತನಗೆ ಸಂಬಂಧಪಟ್ಟ ಹೆಣ್ಣು ಅನ್ಯ ಸಂದರ್ಭಗಳಿಗೂ ಹರಿಯುವುದನ್ನು ಸಣ್ಣುದ್ರನ ಆಶಯ ತಿರಸ್ಕರಿಸುತ್ತದೆ. ಇಷ್ಟಾದರೂ, ಇವೆರಡರಲ್ಲಿ ಗೌರಿಯಂಥ ಅಸಹಾಯಕ ಹೆಣ್ಣಿಗೆ ಯಾವುದು ಸುಖ? ಅವಳು ಬದುಕಿದ ಬದುಕುತ್ತಿರುವ ಆವರಣ ಈ ಆಶಯವನ್ನು ತಿರಸ್ಕರಿಸುತ್ತದೆ. ಈ ಎರಡು ಸ್ಥಿತಿಗಳು ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಲೇ ಉದ್ಯುಕ್ತವಾಗಿದೆ. ಆದ್ದರಿಂದ ಕರಿಗೌಡ ಮತ್ತು ಸಣ್ಣುದ್ರರ ಅಸ್ತಿತ್ವ ಲಯವಾದರೂ, ಉಳಿದ ಆಶಯಗಳು ಅವಳನ್ನು ಅದರಂತೆ ಬಳಸಿಕೊಳ್ಳುವ ಕ್ರೌರ್ಯಕ್ಕೆ ಬದ್ಧವಾಗಿ ಬಿಡುತ್ತವೆ. ಈ ಎರಡು ಬಲಿಷ್ಠ ಪಂಗಡಗಳು ವೈಯಕ್ತಿಕ ದ್ವೇಷಾಸೂಯೆಗಳಲ್ಲಿ ಭರಮಜ್ಜನ ಕುಟುಂಬವನ್ನು ಕಾಲ್ಚೆಂಡಾಗಿ ಮಾಡಿಕೊಳ್ಳುತ್ತವೆ.

ಪ್ರೀತಿ ಮತ್ತು ಕ್ರೌರ್ಯ ಒಂದೇ ದಾರಿಯಲ್ಲಿ ಸಾಗಲಾರವು ಎಂಬುದನ್ನು ಕೃತಿಯು ತನ್ನ ಕೇಂದ್ರವಾಗಿಸಿಕೊಂಡು ಮುಖಾಮುಖಿಯಾಗಿದೆ. ಆದ್ದರಿಂದ ಪ್ರಬಲವಾಗಿರುವ ಕ್ರೌರ್ಯದ ಎದುರು ಏಕಘಟಕವಾಗಿರುವ ಪ್ರೀತಿ ನಾಶವಾಗುವುದಕ್ಕೆ ಗೌರಿಯ ಆತ್ಮಹತ್ಯೆ ನಿದರ್ಶನವಾಗುತ್ತದೆ. ಕ್ರೌರ್ಯದ ಘಟಕದಲ್ಲಿ 'ಪ್ರೀತಿ'ಯನ್ನು, ಏಕಘಟಕವಾಗಿರುವ 'ಪ್ರೀತಿ' ಸ್ಥಾನದಲ್ಲಿ ಕ್ರೌರ್ಯವನ್ನು ತುಂಬಬೇಕು. ಅಂದರೆ ಆಶಯಗಳು ಪ್ರಬಲಗೊಂಡು ಕ್ರೌರ್ಯವನ್ನು ನಿರ್ವೀರ್ಯಗೊಳಿಸುವತ್ತ ಸಾಗಬೇಕೆಂದು ಕಾದಂಬರಿ ಸೂಕ್ಷ್ಮವಾಗಿ ಗುರ್ತಿಸುತ್ತದೆ. ಹಾಗೆಯೇ ಶೋಷಿತ ಸಮುದಾಯಗಳು ಸಂಘಟಿತರಾಗಬೇಕೆಂಬ ಆಶಯವನ್ನು ಕಾದಂಬರಿಕಾರರು ವ್ಯಕ್ತಪಡಿಸುತ್ತಾರೆ.

ಕರೀಗೌಡವೆಸಗುವ ಕ್ರೌರ್ಯಕ್ಕೆ 'ಗೌರಿ' ಉಳಿದು, ಭರಮಜ್ಜನ ಕುಟುಂಬ ನಾಶಗೊಂಡರೂ, ಗೌರಿ ಏಕಾಂಗಿಯಾಗಿ ಗೌಡನ ಮುಂದಾಳತ್ವದ ಬಸವಿ ಬಿಡುವ ಸಂಪ್ರದಾಯವನ್ನು ತನ್ನ ಅಸಹಾಯಕತ 'ಯಿಂದಲೇ ನಿರಾಕರಿಸುವುದು ಅವಳ ಜೀವಪರಧೋರಣೆಯಾಗಿದೆ. ಅವಳ ಧೋರಣೆ ಸಾಮಾಜಿಕವಾಗಿ ಹೆಣ್ಣು ಚಲನಶೀಲಳಾಗುತ್ತಿರುವುದನ್ನು ಗ್ರಹಿಕೆಗೆ ತರುತ್ತದೆ. ಆ ಮೂಲಕ ಹೊಸ ಸಮಾಜದ ಕಡೆ ಮುಖಮಾಡಿಸುತ್ತದೆ.

## ಬಿ. ಟಿ. ಲಲಿತಾನಾಯ್ಕ

ಕನ್ನಡ ಮಹಿಳಾ ದಲಿತ ಲೇಖಕಿಯರಲ್ಲಿ ಬಿ.ಟಿ.ಲಲಿತಾ ನಾಯ್ಕರ ಹೆಸರು ಅಗ್ರಪಂಕ್ತಿಯಲ್ಲಿ ನಿಲ್ಲುವಂತಹದ್ದು. ಹಿಂದುಳಿದ ಲಂಬಾಣಿ ಜಾತಿಗೆ ಸೇರಿದ ಲಲಿತಾ ನಾಯಕ ತಮ್ಮ ಸಾಹಿತ್ಯ ಕೃಷಿಯನ್ನು ಕವಿತೆಗಳಿಂದಲೇ ಆರಂಭಿಸಿದರು. ಅನಂತರ ಸಣ್ಣ ಕತೆ, ಕಾದಂಬರಿ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ದಲಿತ-ಬಂಡಾಯಗಳ ಜೊತೆ ಬೆಳೆದು ಬಂದಿರುವುದರಿಂದ ಲಲಿತಾ ನಾಯಕರ ಕೃತಿಗಳಲ್ಲಿ ಹೋರಾಟದ ಕಿಚ್ಚು ಕಾಣುತ್ತದೆ. ಅವರ ಕಾವ್ಯವಾಗಲಿ ಅಥವಾ ಗದ್ಯವಾಗಲಿ ಎಂದೂ ತನ್ನ ಹೋರಾಟದ ಪ್ರಜ್ಞೆಯನ್ನು ಕಳೆದುಕೊಳ್ಳುವುದಿಲ್ಲ.

ಬಿ.ಟಿ.ಲಲಿತಾ ನಾಯ್ಕರು ಲಂಬಾಣಿ ಸಮುದಾಯದ ಮಹಿಳೆಯರ ಸಂವೇದನೆಯನ್ನು ಪ್ರಕಟಿಸುತ್ತಾರೆ. “ಡಾ.ಚೆನ್ನಣ್ಣವಾಲೀಕರ್ ಹೇಳುವಂತೆ ಬಿ.ಟಿ.ಲಲಿತಾ ನಾಯ್ಕ ತಮ್ಮ ಜನಾಂಗದ ನೋವು ನಿರಾಸೆಗಳನ್ನು ಉಳಿದೆಲ್ಲ ದಲಿತ ಮಹಿಳಾ ಲೇಖಕಿಯರಿಗಿಂತ ಸಮರ್ಥವಾಗಿ ಪ್ರಸ್ತುತಪಡಿಸುತ್ತಾರೆ.”[೧೫] ಅಂತೆಯೇ ತಮ್ಮ ‘ಗತಿ’ ಕಾದಂಬರಿಯಲ್ಲಿ ರಾಯಚೂರು ಜಿಲ್ಲೆಯ ಲಂಬಾಣಿ ಸಮಾಜದಲ್ಲಿ ಹೆಣ್ಣು ಅನುಭವಿಸುತ್ತಿರುವ ನಿರಂತರ ಶೋಷಣೆ, ಅವಹೇಳನ, ಅನ್ಯಾಯಗಳಂತಹ ವಸ್ತುವನ್ನು ಎತ್ತಿಕೊಳ್ಳುತ್ತಾರೆ. ಆದರೆ ಈ ವಸ್ತುವಿನ ಸಾರ್ವತ್ರಿಕ ಮಹತ್ವದ ಅರಿವು ಅವರಿಗಿದೆ. ಅವರೇ ಹೇಳುವಂತೆ “ಇದು ಬುಡಕಟ್ಟು ಜನಾಂಗಗಳಲ್ಲಿ ಇರಬಹುದಾದ ರೋಗವಲ್ಲ ಎಲ್ಲಾ ಹಳ್ಳಿಗಾಡುಗಳ(ಪಟ್ಟಣಗಳಲ್ಲಿಯೂ ಇರಬಹುದಾದ) ಕರ್ಮಕಥೆಯೂ ಹೌದು”[೧೬] ಈ ಮಾತಿಗೆ ಪುಷ್ಠಿ ಕೊಡುವ ಅನೇಕ ಅಂಶಗಳು ‘ಗತಿ’ಯಲ್ಲಿವೆ. ತಾವು ಹುಟ್ಟಿ ಬಂದಿರುವ ತಾಂಡದಿಂದಲೇ ‘ಗತಿ’ಯ ಕಥೆ ಆರಂಭವಾಗುತ್ತದೆ. ದಿಬ್ಬದ ತಾಂಡ್ಯ ಎಲ್ಲ ಅರ್ಥದಲ್ಲಿಯೂ ತನ್ನ ಸುತ್ತಲಿನ ಗ್ರಾಮೀಣ ಜೀವನದ ಸೂಕ್ಷ್ಮಕೃತಿ. ಉಳ್ಳವರ ವರ್ಚಸ್ಸು, ಧರ್ಮದ ಹೆಸರಿನಲ್ಲಿ ನಡೆಯುವ ಅನ್ಯಾಯ, ಮೂಢನಂಬಿಕೆಗಳು, ಹೆಣ್ಣಿನ ಶೋಷಣೆ ಮಾನವೀಯತೆಯ ಬರಡುತನ, ಗಂಡಿನ ಪ್ರಾಬಲ್ಯಗಳನ್ನು ಚಿತ್ರಸಿದ್ದಾರೆ.

ಮೇಲೆ ಹೇಳಲಾದ ಶೋಷಣೆಯಲ್ಲಿ ಸೋನಿ ಬಲಿಯಾಗುತ್ತಾಳೆ. ಸೋನಿಯ ಗಂಡ ಮಾನ್ಯ ಕೋಳಿ ಜಗಳದಲ್ಲಿ, ಸೋನಿಗೆ ರಕ್ತ ಬರುವಂತೆ ಹೊಡೆಯುತ್ತಾನೆ. ಅದನ್ನು ಪ್ರಶ್ನಿಸಲು ಬಂದ ಲಚ್ಮಿಗೆ ಮಾನ್ಯ ಹೀಗೆ ಉತ್ತರ ಕೊಡುತ್ತಾನೆ. ‘ಹೆಚ್ಚು ಕಮ್ಮಿ ಮಾತಾಡಬ್ಯಾಡದೇ ಕೂಳು ತಿಂಬಾಕ್ ಒಂದು ಹಲ್ಲು ಉಳಿಲಾದ್ದಂಗ ಉದರ್ಯಾವು ಮತ್ತ, ನನ್ನ ಹೆಂಡ್ತಿಗ ನಾನೇನು ಬೇಕಾದ್ದು ಮಾಡ್ತೀನಿ, ನೀ ಪೈಲಿ ಹೊಂಡೋಗ್ ನನ್ಮನಿಯಿಂದ’ ಇಲ್ಲಿ ಹೆಣ್ಣನ್ನು ಕೇವಲ ತನ್ನ ಉಪಭೋಗಕ್ಕೆ ಮಾತ್ರ ಎಂದು ಮಾನ್ಯ ನಂಬಿದ್ದಾನೆ. ಮಾನ್ಯನ ಅಪ್ಪ ಹರಸಿಂಗ್ ಸಹಿತ ಈ ಮೂರ್ಕಾಸಿನ ಲೌಡೀರು ನಾಲ್ಗಿ ಉದ್ದ ಮಾಡಿದರಂದ್ರ ತಲಿಗೂ ಒಡೀಬೇಕಾಗತ್ತೈತಿ, ಎಲ್ಲವೂ ಮುರಿಬೇಕಾಗತ್ತೈತಿ’ ಎಂದು ಹೇಳುತ್ತಾನೆ.

ಸೋನಿಯ ವೈವಾಹಿಕ ಜೀವನದಿಂದಲೇ ಅವಳ ಕಷ್ಟದ ಕಥೆಗಳು ಆರಂಭವಾಗುತ್ತವೆ. ಗಂಡ ಮತ್ತು ಮಾವ ಅವಳನ್ನು ಹಗ್ಗ ಕಟ್ಟಿ ಬಾವಿಗೂ ಬಿಡುತ್ತಾರೆ. ಹೊಡೆತ-ಬಡಿತವಂತೂ ದಿನನಿತ್ಯದ ಕಥೆ. ತಲೆಗೆ ಹೊಡೆತ ಬಿದ್ದಾಗ ಅವಳನ್ನು ದವಾಖಾನೆಗೆ ಹಾಕಿರುತ್ತಾರೆ. ಆಗ ಅವಳ ಗಂಡ ಸತ್ರ ಸಾಯ್ತಾಳ, ಬದುಕಿದಳಂದ್ರ ಮನಿಗ ಬರ್ತಾಳ, ಆ ಬೇವಾರ್ಸಿ ಮತ್ತೆಲ್ಲಾಗ್ರ ಓಡಿ ಹೊಕ್ಕಾಳೇನು? ಎಂದು ಹೇಳುತ್ತಾನೆ. ಸೋನಿಗೆ ಸಹಾಯ ಮಾಡಿದಕ್ಕೆ, ಪ್ರೀತಿ ತೋರಿಸಿದ್ದಕ್ಕೆ ಲಚ್ಮಿಗೆ ಛಡಿಯೇಟು ಶಿಕ್ಷೆ ವಿಧಿಸಲಾಗುತ್ತದೆ. ಹೆಣ್ಣಿನ ಕಣ್ಣೀರನ್ನು ಹೆಣ್ಣು ಗ್ರಹಿಸುವ ಸಂದರ್ಭ ನಮ್ಮಲ್ಲಿ ಇನ್ನೂ ವ್ಯವಸ್ಥೆಯ ಹಿಡಿತದಿಂದ ಬಿಡುಗಡೆ ಪಡೆದಿಲ್ಲವೆಂಬುದು ಗ್ರಹಿಕೆಗೆ ಬರುತ್ತದೆ.

ಮಾನ್ಯನ ಕ್ರೌರ್ಯ ಸೋನಿಗೆ ಮಾತ್ರ ಸಂಬಂಧಿಸಿಲ್ಲ, ಅವನು ಕಟ್ಟಿಕೊಳ್ಳುತ್ತಿರುವ ಬದುಕಿನ ಇಡೀ ಸಮಾಜ ಜೀವ ವಿರೋಧಿಯಾದದ್ದು. ಆದರೆ ಚಂದು ಅಂಥ ನೆಲೆಯನ್ನು ತಿರಸ್ಕರಿಸಿ ಸಮಾಜ ಮುಖಿಯಾಗಿ ಬೆಳೆಯುವ ಹಂಬಲ ವ್ಯಕ್ತಪಡಿಸುತ್ತಿದ್ದಾನೆ. 'ದಿಬ್ಬ' ತಾಂಡವು ಅವನತಿಯ ಮೌಲ್ಯಗಳನ್ನು ಒಪ್ಪಿಕೊಂಡಿದೆ. ಕಾಯುವ ಯಜಮಾನರು ಭ್ರಷ್ಟಗೊಳ್ಳುತ್ತಿದ್ದಾರೆ. ಹೆಣ್ಣು ಬದುಕಬೇಕೆಂಬ ಆಸೆಗೆ ಗಂಡು ಅಡ್ಡಗೋಲಾಗಿದ್ದಾನೆ. ಸಮಾಜವನ್ನು ಬದಲಾಯಿಸುವುದಕ್ಕೆ ಆ ಸಮಾಜದ ಯಜಮಾನರು ವಿರೋಧಿಸುತ್ತಾರೆ. ಕಾಶಪ್ಪ ದೈವದ ಪ್ರತಿನಿಧಿಯಾಗಿ ಜನರನ್ನು ವಂಚಿಸುತ್ತಿದ್ದಾನೆ. ಆರಂಭದಲ್ಲಿ ಈತ ಆ ಸಮಾಜ ವ್ಯವಸ್ಥೆಯ ವ್ಯಕ್ತಿಯಾಗಿದ್ದು, ನಂತರದ ಬೆಳವಣಿಗೆಯಲ್ಲಿ ಅದರ ಕ್ರೌರ್ಯಕ್ಕೆ ಬಲಿಯಾಗುತ್ತಾನೆ. ತನ್ನ ಜೀವಕ್ಕೆ ಕುತ್ತುಬಂದಾಗ ಆ ವ್ಯವಸ್ಥೆಯಿಂದ ಹೊರಬರಲು ಪ್ರಯತ್ನಿಸುತ್ತಾನೆ. ಅದನ್ನು ಪದಾರ್ ಮಾನ್ ಸಿಂಗ್ ರವರು ತಿರಸ್ಕರಿಸುತ್ತಾರೆ. ಅವನ ಮೂಲಕ ನಡೆಯುವ ಕುತಂತ್ರದ ಚಲನೆಯನ್ನು ಪೋಲಿಸು ತಡೆಯುತ್ತಾರೆ, ಅಲ್ಲದೆ ವ್ಯವಸ್ಥೆಯ ಪ್ರತಿನಿಧಿಗಳನ್ನು ಬಂಧಿಸುತ್ತಾರೆ. ಇಲ್ಲಿ ಚಂದು, ಸೋನಿ, ಲಚ್ಮಿಯವರಿಗೆ ಐಶ್ವರ್ಯ ಸಿಕ್ಕಷ್ಟು ಸಂತೋಷವಾಗುತ್ತದೆ. ಪೋಲಿಸು ಇಲ್ಲಿ ವ್ಯವಸ್ಥೆಯು ಚಲಿಸುವ ಸಾಧ್ಯತೆಗೆ ಒದಗುತ್ತಿದ್ದ ದುರಂತವನ್ನೇ ತಾತ್ಕಾಲಿಕವಾಗಿ ತಡೆಯುತ್ತದೆ. ಇದನ್ನು ಎಳೆಯ ಹುಡುಗಿ ಸೀತಾಳಲ್ಲಿ ಬದುಕು ಅರಳುತ್ತಿರುವ ಸ್ಥಿತಿಗೆ ಸಂಕೇತವಾಗಿ ಬಿ.ಟಿ.ಲಲಿತಾ ನಾಯ್ಕ ಸ್ವೀಕರಿಸುತ್ತಾರೆ. ಹಿರಿಯರ ನಡೆ ಕ್ರೂರವಾಗುತ್ತಿರುವುದನ್ನು ತಿರಸ್ಕರಿಸಿ ಎಳೆಯರು ವರ್ತಮಾನದ ವರ್ತುಲದೊಳಗೆ ಭವಿಷ್ಯವನ್ನು ಕಾಣುವ ಕನಸ್ಸು ಇದಾಗಿದೆ ಅನಿಸುತ್ತದೆ.

ಸಾಮಾಜಿಕ ಪರಿವರ್ತನೆಯ ಕ್ರಿಯೆಯಲ್ಲಿ ಸೋನಿಬಾಯಿಯ ಪಾತ್ರ ವಿಶಿಷ್ಟವಾಗಿ ಕಾಣುತ್ತದೆ. ತನ್ನ ಗಂಡ ಮತ್ತು ಮಾವ ತನ್ನ ಮೇಲೆ ನಡೆಸುವ ದಬ್ಬಾಳಿಕೆಯನ್ನು, ಪೂಜಾರಿ ಕಾಶಪ್ಪನ ಮೇಲೆ ಪವಾರರಂಥವರ ಕುತಂತ್ರಗಳನ್ನು, ಪಂಚರಿದಾದನ ಅನ್ಯಾಯವನ್ನು ಸೋನಿಬಾಯಿ ಅಸಹಾಯಕಳಾಗಿ ಒಪ್ಪಿಕೊಳ್ಳುವುದಿಲ್ಲ. ದೈಹಿಕ, ಮಾನಸಿಕ, ಯಾತನೆಯನ್ನು ಅನುಭವಿಸಿಯೂ ತನ್ನ ಸ್ವಾತಂತ್ರ್ಯವನ್ನು

ಕಾಯ್ದುಕೊಳ್ಳುತ್ತಾಳೆ. ಅವಳ ಈ ಹೋರಾಟದಲ್ಲಿ ಲಚ್ಮಿಯ ಅನುಕಂಪ, ಚಂದುವಿನ ಮಾರ್ಗದರ್ಶನ ದೊರೆಯುವುದು ನಮ್ಮ ಸಮಾಜವಿನ್ನೂ ಜೀವಹಿಡಿದಿರುವುದರ ಸಂಕೇತವಾಗಿದೆ.

ಒಟ್ಟು ದಲಿತ-ಬಂಡಾಯ ಕಾದಂಬರಿಗಳು ಹಾಗೂ ಕಾದಂಬರಿಕಾರರು ಶೋಷಿತ ಗ್ರಾಮೀಣ ಸಮಾಜವನ್ನು ಕೇಂದ್ರವಾಗಿಟ್ಟಕೊಂಡು, ಶೋಷಿತ ಜನರ ಬದುಕಿಗೆ ಭದ್ರತೆ ಒದಗಿಸುವ ಧೋರಣೆ ಹೊಂದಿದೆ. ದಲಿತೀಯ ಬಂಡಾಯ ಹಾಗೂ ದಲಿತೇತರ ಬಂಡಾಯದ ಕಾದಂಬರಿಗಳ ಧೋರಣೆಗಳು ಒಂದೇಯಾದರೂ ಅಸಮಾನತೆಯನ್ನು ಹೋಗಲಾಡಿಸಲು ವ್ಯವಸ್ಥೆಯೊಂದಿಗೆ ಪ್ರತಿಭಟಿಸುವ ಅಭಿವ್ಯಕ್ತಿಸುವ ಸ್ವರೂಪ ಭಿನ್ನವಾಗಿದೆ. ಬಂಡಾಯ ಕಾದಂಬರಿಗಳು ವರ್ಗಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡು ವ್ಯವಸ್ಥೆಗೆ ರೋಷ, ಸಿಟ್ಟುಗಳ ಮೂಲಕ ನೇರವಾಗಿ ಪ್ರತಿಭಟಿಸುತ್ತವೆ. ದಲಿತೇತರ ಬಂಡಾಯ ಕಾದಂಬರಿಗಳು, ಕಾದಂಬರಿಕಾರರಂತೆ ದಲಿತ ಕಾದಂಬರಿಗಳು ನೇರವಾಗಿ ಪ್ರತಿಭಟಿಸದೆ ಆ ವ್ಯವಸ್ಥೆಯೊಳಗಿದ್ದುಕೊಂಡು ತನ್ನ ಅಸಹಾಯಕತೆಯ ಮೂಲಕ ಹೋರಾಡುತ್ತವೆ. ಈ ಎರಡೂ ಕಾದಂಬರಿಗಳಲ್ಲಿ ಹೆಣ್ಣು ಕೇಂದ್ರವ್ಯಕ್ತಿಯಾಗುತ್ತಾಳೆ. ದಲಿತೀಯ ಕಾದಂಬರಿಗಳಲ್ಲಿ ದಲಿತ ಸಂಸ್ಕೃತಿಯ ಆಯಾಮ ದಾಖಲಾಗಿವೆ. ದಲಿತರ ಸಾಂಸ್ಕೃತಿಕ ವಿವರಗಳೇ ಪ್ರತಿಭಟನೆಯ ಸಾಧ್ಯತೆಗಳು ಮತ್ತು ಪರ್ಯಾಯ ಸಂಸ್ಕೃತಿಯ ಸೂಚನೆಗಳು. ಆ ವಿವರಗಳಿಂದ ಹಿಂದೂ ಮೌಲ್ಯಗಳನ್ನು ಸ್ಥಳಾಂತರಿಸುವುದೇ ಹೊಸ ಸಂಸ್ಕೃತಿ ಕಟ್ಟುವ ಸವಾಲಾಗಿದೆ. "ಮನುಷ್ಯನಿಗೆ ಕಾಯಿಲೆ ಬಂದಿದೆ ಆತನಿಗೆ ಔಷದ ನೀಡಬೇಕು. ಅದು ಕಹಿಯೆಂದು ಕೊಡದಿದ್ದರೆ ಮನುಷ್ಯ ಸಾಯುವುದು ಖಂಡಿತ. ಆದ್ದರಿಂದ ರೋಗಗ್ರಸ್ಥ ಸಮಾಜಕ್ಕೆ ಕಹಿಯಾದ ಔಷಧವನ್ನಾದರೂ ಕೊಡಬೇಕು"[೧೭] ಎಂದು ಬಿ.ಕೃಷ್ಣಪ್ಪರು ಅಭಿಪ್ರಾಯಪಟ್ಟಂತೆ, ದಲಿತ ಬಂಡಾಯ ಕಾದಂಬರಿಗಳು ಹಾಗೂ ಕಾಂದಬರಿಕಾರರು ಸೃಜನಶೀಲ ಗುಣವುಳ್ಳವರಾಗಿದ್ದಾರೆ. ಒಟ್ಟು ಕಾಂದಬರಿಗಳ ಹುಡುಕಾಟ ಹೊಸಬದುಕಿನ ಹೊಂಗನಸುಗಳನ್ನು ಕಟ್ಟಿಕೊಂಡು ಹೊರಬರುವುದು, ಪರ್ಯಾಯ ಬದುಕನ್ನು ಚಿಂತನೆಗಳನ್ನು ಕಟ್ಟಿಕೊಳ್ಳುವುದೇ ಅಗಿದೆ. ಈ ಕಟ್ಟಿಕೊಳ್ಳುವ ಕ್ರಿಯೆ ತುಂಬಾ ಸೃಜನಾತ್ಮಕವಾದದ್ದು ಮತ್ತು ಪ್ರಾಯೋಗಿಕವಾದದ್ದು ಎಂಬುದು ಗಮನಾರ್ಹ.

**ಕೊನೆಟಿಪ್ಪಣಿ**

೧. ಅರವಿಂದ ಮಾಲಗತ್ತಿ, ದಲಿತಜ್ಞ, ೨೦೦೦, ಪು.೨೪

೨. ಬಸವರಾಜ ಸಬರದ(ಸಂ), ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೧೦೫

೩. ಅರವಿಂದ ಮಾಲಗತ್ತಿ, ದಲಿತಜ್ಞ, ೨೦೦೦, ಪು.೧೮

೪. ತಿಮ್ಮೇಗೌಡ ನೋ., ಸಂ., ಬಂಡಾಯ ಸಾಹಿತ್ಯ ಮತ್ತು ಸಾಮಾಜಿಕ ನೆಲೆ, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೧೦೭

೫. ಜವರಯ್ಯ ಮ.ನ., ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ, ೧೯೯೪, ಪು.೩೦೦

೬. ಅರವಿಂದ ಮಾಲಗತ್ತಿ, ದಲಿತಜ್ಞ, ೨೦೦೦, ಪು.೮

೭. ಉದ್ಧೃತ : ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ, ೧೯೯೦ ಪು.೧೯.

೮. ಶಿವರಾಮಯ್ಯ, ಸಾಹಿತ್ಯ ಪರಿಸರ, ೧೯೯೩, ಪು.೧೫೦

೯. ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೨೯

೧೦. ಅದೇ,

೧೧. ಚೆನ್ನಣ್ಣ ವಾಲೀಕಾರ, ಕುರುಮಯ್ಯ ಮತ್ತು ಅಂಕುಶದೊಡ್ಡಿ ಕಾದಂಬರಿಯ ಬೆನ್ನುಡಿ, ೧೧೯೪

೧೨. ಜಂಬಣ್ಣ ಅಮರ ಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೧೭

೧೩. ಅದೇ, ಪು.೭೧

೧೪. ಪುರುಷೋತ್ತಮ ಬಿಳಿಮಲೆ : (ಸಂ), ಸಾಹಿತ್ಯದ ಪುನರ್‌ಮೌಲ್ಯೀಕರಣ, ಸಂ.೧, ೧೯೯೩, ಪು.೩೩೫

೧೫. ಉದ್ಧೃತ : ಸರಜೂ ಕಾಟ್ಕರ್, ಕನ್ನಡ ಮರಾಠಿ ದಲಿತ ಸಾಹಿತ್ಯ, ೧೯೯೭, ಪು.೧೬೦

೧೬. ಲಲಿತಾನಾಯ್ಕ ಬಿ.ಟಿ., ಗತಿ ಕಾದಂಬರಿಯಲ್ಲಿ ಲೇಖಕರ ಮಾತು, ೧೯೯೩, ಪು.I

೧೭. ಉದ್ಧೃತ : ಚಾಂಡಾಳ ; ಕರ್ನಾಟಕ ದಲಿತ ಚಳವಳಿ ಮತ್ತು ಅಂಬೇಡ್ಕರ್ ; ೧೯೯೨, ಪು.೧೨೭.

ಸೃಷ್ಟಿ ಮತ್ತು ನಾಶದ ದ್ವಂದ್ವದ ಪ್ರಕ್ರಿಯೆಯಲ್ಲಿ ಹೊಸ ಪರಂಪರೆಯೊಂದು ಹುಟ್ಟಿಕೊಳ್ಳುತ್ತದೆ. ಸಾಹಿತ್ಯದಲ್ಲಿ ಯಾವುದೇ ಹೊಸ ಸಂಪ್ರದಾಯಗಳು ಸೃಜನ ಕ್ರಿಯೆಯ ಸ್ವಾಭಾವಿಕ ಅವಶ್ಯಕತೆಯಾಗಿದೆ. ಕಾರಣ ಸುತ್ತಲಿನ ಬದುಕು ಇದಕ್ಕೆ ಕಾರಣವಾದಂತೆ, ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವುದೂ ಆಗಿದೆ. ಈ ಬದಲಾವಣೆಗಳು ಉಗ್ರವಾಗಿಯೂ, ಸೌಮ್ಯವಾಗಿಯೂ ನಡೆಯಬಹುದಾದರೂ ಒಳಗಿನಿಂದಲೇ ನಮ್ಮ ಸಂವೇದನೆಗಳನ್ನು ಪ್ರಭಾವಿಸುತ್ತವೆ. ಪ್ರತಿಯೊಂದು ಹೊಸ ಸಾಹಿತ್ಯ ಮಾರ್ಗ ಬದುಕು ಹಾಗೂ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳ ಶೋಧನೆಯೇ ಆಗಿದೆ. ಬದುಕಿನಲ್ಲಿ ಕಾಣಿಸಿಕೊಳ್ಳುವ ಇಂತಹ ಬದಲಾವಣೆಗಳೇ ಸಾಹಿತ್ಯದ ರೂಪ, ಶೈಲಿ, ಧೋರಣೆ, ಸಂವೇದನೆಯ ಪ್ರೇರಣೆಗಳು.

ದೇಶದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ರಂಗದಲ್ಲಿನ ತಾಕಲಾಟಗಳು, ಏರು ಪೇರುಗಳು ಇಂಥ ಸಾಹಿತ್ಯಾಭಿವ್ಯಕ್ತಿಗಳ ಮೇಲೂ ಪ್ರಭಾವ ಬೀರುತ್ತವೆ. ದೇಶದ ಸಂದಿಗ್ಧ ಮತ್ತು ಕರಾಳ ಸ್ಥಿತಿಯಲ್ಲಿ ಹುಟ್ಟಿಕೊಂಡ ಕ್ರಾಂತಿಗಳು, ದಲಿತ ಸಂಘರ್ಷ ಸಮಿತಿಗಳಂತಹ ಆಂದೋಲನಗಳು ಸಾಹಿತ್ಯವನ್ನು ಪ್ರೇರೆಪಿಸಿದ್ದುಂಟು. ಇಂತಹ ಅಮಾನವೀಯ ವ್ಯವಸ್ಥೆಯ ವಿರುದ್ಧ ಪ್ರತಿಭಟನಾತ್ಮಕವಾಗಿ ಸಾಮಾಜಿಕ ಸಮಾನತೆಗಾಗಿ ಹೋರಾಟಕ್ಕಿಳಿದವೆಂದರೆ ೧೯೭೦ಳರ ಬರಹಗಾರರ ಮತ್ತು ಕಲಾವಿದರ ಒಕ್ಕೂಟ. ೧೯೭೬ರ ಪ್ರಗತಿಪಂಥ, ೧೯೭೭ರ ಬಂಡಾಯ ಸಾಹಿತ್ಯ ಸಂಘಟನೆ ಮುಂತಾದ ಸಾಹಿತ್ಯ ಚಳುವಳಿಗಳು ಪರಸ್ಪರ ಸಂಬಂಧಿಯಾದ, ಸಾಹಿತ್ಯ ಸೃಷ್ಟಿಯ ಅಗತ್ಯವನ್ನು ಒತ್ತಿ ಹೇಳುತ್ತಲೇ ಕಾರ್ಯರೂಪಕ್ಕೆ ಬಂದವು.

ಮಾನವನ ಖಾಸಗೀತನವನ್ನು ಪೂರ್ಣವಾಗಿ ಕಿತ್ತು ಹಾಕುವ ಇಂದಿನ ತಂತ್ರಜ್ಞಾನದ ಬೆಳವಣಿಗೆ ಪ್ರತಿಭಟನೆಗೆ ಬಲವಾದ ಪ್ರೇರಣೆಯನ್ನೇ ಒದಗಿಸಿದೆ. ಇಂಥ ಕಡೆ ಪ್ರತಿಭಟನೆಯು ಮಾನವ ಸಾಧ್ಯತೆಗಳ ಪರ್ಯಾಯವೂ ಆಗಿದೆ. ಸೃಜನಶೀಲ ಬರಹಗಾರನಲ್ಲಿ ಕಾಣಿಸಿಕೊಳ್ಳುವ ಕ್ರಾಂತಿಕಾರಿ ಪ್ರಜ್ಞೆ, ಪ್ರತಿಭಟನಾ ಮನೋಭಾವ ಮತ್ತು ಸಾಮಾಜಿಕ ಅಸಮಾಧಾನಗಳಿಗೂ, ಸಮಕಾಲೀನ ರಾಜಕೀಯ, ಸಾಮಾಜಿಕ ಘಟನೆಗಳಿಗೂ ಆಂತರಿಕ ಸಂಬಂಧವಿರುತ್ತದೆ. ನರೇಂದ್ರ ಮೋಹನ ಎನ್ನುವವರು ಹೇಳುವಂತೆ ಕಲೆ ಮತ್ತು ಪ್ರತಿಭಟನೆಯು ಸಾಂಸ್ಕೃತಿಕ ಆಶೋತ್ತರಗಳೊಡನೆ ಅಥವಾ ಸಾಂಸ್ಕೃತಿಕ ಕ್ರಾಂತಿಯೊಡನೆ ಸೂಕ್ಷ್ಮ ಸಂಬಂಧ ಹೊಂದಿದೆ. ಸಾಂಸ್ಕೃತಿಕ ಕ್ರಾಂತಿಯು ರಾಜಕೀಯ ಪ್ರಜ್ಞೆಯ ಫಲವಾಗಿರುವಂತೆ ಸಮಾಜದ ಆಶೋತ್ತರಗಳ ಪ್ರತಿಬಿಂಬವೂ ಹೌದು.

ಎಪ್ಪತ್ತರ ದಶಕದಲ್ಲಾದ ಪ್ರಗತಿಪರ ಮತ್ತು ಕ್ರಾಂತಿಕಾರಿ ಚಟುವಟಿಕೆಗಳು ದಲಿತ ಬಂಡಾಯದಂತಹ ಚಳುವಳಿಗಳಿಗೆ ಪ್ರೇರಣೆ ಒದಗಿಸಿದವು. ಇದರಿಂದಾಗಿ ಬ್ರಾಹ್ಮಣರ ವಿರುದ್ಧ ಬ್ರಾಹ್ಮಣೇತರರು ಮೊದಲ ಬಾರಿಗೆ ಸಿಡಿದೆದ್ದು ಹೊಸ ಬಗೆಯ ಜೀವನ ಕ್ರಮವನ್ನು ಕಟ್ಟಿಕೊಂಡರು. ವಿದ್ಯೆ, ಉದ್ಯೋಗಗಳನ್ನು ಪಡೆದುಕೊಂಡು ಸಾಮಾಜಿಕ, ರಾಜಕೀಯವಾಗಿ ಪ್ರಬಲ ಶಕ್ತಿಗಳಾಗಿ ಬೆಳೆದರು. ಅಲ್ಲದೆ ಶೂದ್ರ ಬಡವರು ಶ್ರೀಮಂತರ ವಿರುದ್ಧ ಘರ್ಷಣೆಗಿಳಿದು ಆರ್ಥಿಕ ಸಮಾನತೆಗಾಗಿ ಕ್ರಾಂತಿಕಾರಿ ಸಾಹಿತ್ಯ ರಚಿಸಲಾರಂಭಿಸಿದರು. ಅಸ್ಪೃಶ್ಯರಿಗೂ, ಸವರ್ಣೀಯರಿಗೂ ನಡೆದ ಸಂಘರ್ಷಗಳು ದಲಿತರಲ್ಲಿ ಒಂದು ಬಗೆಯ ರಾಜಕೀಯ ಎಚ್ಚರವನ್ನು ತಂದಿತು. ಮೇಲ್ಜಾತಿ ಶ್ರೀಮಂತ ಮತ್ತು ಬಡವರಿಗೂ ಇವರು ಅಸ್ಪೃಶ್ಯರು. ದಲಿತರಲ್ಲಿನ ಅಪಾಯವೆಂದರೆ ಅಕ್ಷರ ಮಾಧ್ಯಮದಲ್ಲಿ ವ್ಯವಹರಿಸುವ ಅವರು ಮೂಲದಿಂದ ಬೇರ್ಪಟ್ಟು ಕ್ರಿಯಾಹೀನ ಸ್ಥಿತಿಯಿಂದ ಪ್ರತಿಭಟನಾತ್ಮಕ ಸಾಹಿತ್ಯ ಮಾತ್ರ ಬರೆದದ್ದು, ಸಂಸ್ಕೃತೀಕರಣದ ಸೆಳೆತಕ್ಕೊಳಗಾಗಿ ಆಳುವ ವರ್ಗದ ಸ್ನೇಹ ಪಡೆದು ದಲಿತ ವಿರೋಧಿಗಳಾಗೇ ಮಾರ್ಪಡುವುದು. ದಲಿತರಲ್ಲೇ ಮೂಡಿದ ವರ್ಗ ಪ್ರಜ್ಞೆಯಿಂದಾಗಿ ದಲಿತ ಸಂಘರ್ಷ ಸಮಿತಿಯೇ ಇಬ್ಭಾಗವಾದದ್ದನ್ನೇ ಕಾಣಬಹುದು. ದಲಿತರಲ್ಲಿಯೇ ಹುಟ್ಟಿಕೊಳ್ಳುತ್ತಿರುವ ಬಲಪಂಥೀಯ ಬೂರ್ಜ್ವಾಗಳು ಪ್ರತಿಭಟಿಸದೆ ಹೋದರೆ ಹೋರಾಟಗಳಿಗೆ ಅರ್ಥವೇ ಬರುವುದಿಲ್ಲ.

ಹೀಗೆ ವಿವಿಧ ಮುಖವಾಡಗಳೊಂದಿಗೆ ವಿಜೃಂಭಿಸುತ್ತಿರುವ ಜನವಿರೋಧಿ ನಿಲವುಗಳನ್ನು ಎದುರಿಸುವ ಸಲುವಾಗಿ ಪರ್ಯಾಯ ಹುಡುಕಾಟದ ಮಾರ್ಗವನ್ನು ಚಳುವಳಿಗಳ ಮೂಲಕ ಎರಡೂ ಸಂಘಟನೆಗಳು ಕಂಡುಕೊಂಡವು. ಶೋಷಿತ ಜನತೆಯ ಪರವಾದ ನಿಲುವುಗಳನ್ನುಸಾಂಸ್ಕೃತಿಕ ಕ್ಷೇತ್ರದಲ್ಲಿ ಗಟ್ಟಿಯಾಗಿ ಬೇರು ಬಿಡಿಸುವುದು ಇವುಗಳ ಉದ್ದೇಶವಾಗಿತ್ತು. ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟ ಇವರ ಮುಖ್ಯ ನೆಲೆಯಾಗಿತ್ತು. ಹೀಗೆ ಜನಪರ ಸಾಹಿತ್ಯದ ನಿರ್ಮಾಣ ಜನವಿರೋಧಿ ಮೌಲ್ಯಗಳ ವಿರುದ್ಧ ಹೋರಾಟ, ಪ್ರತಿಭಟನೆ ಕ್ರೂರ ವ್ಯವಸ್ಥೆಯೊಳಗಿನ ಜಡತ್ವದಿಂದ ಹೊರಬಂದು ಹೊಸ ಮನ್ವಂತರದ ಹುಡುಕಾಟ ದಲಿತ ಬಂಡಾಯ ಸೃಜನಶೀಲತೆಯ ಮುಖ್ಯ ಕಾಳಜಿ. ಹೀಗಾಗಿ ಸಿಟ್ಟು, ಸಮಾಧಾನ, ಆಕ್ರೋಶ, ಕನಸುಗಳೇ ಇಲ್ಲಿನ ಆಕೃತಿಗಳು. ಬದುಕಿನ ಭ್ರಮೆಗಳನ್ನು ನೀಗಿ ಚರಿತ್ರೆಯ ನಿರ್ದಯತೆಯ ಒಡಲಿನಿಂದಲೇ ಮಾನವೀಯತೆಯನ್ನು ಹುಡುಕಿ ಕಟ್ಟಿಕೊಳ್ಳುವ ಕ್ರಿಯಾತ್ಮಕ ವಿಧಾನ ಇಲ್ಲಿನದು. ಕೆಡಹುವ ಮತ್ತು ಕಟ್ಟುವ ಕ್ರಿಯೆಯೇ ಇಲ್ಲಿ ಪ್ರಧಾನ.

ಇಡೀ ಕರ್ನಾಟಕದುದ್ದಕ್ಕೂ ಎಪ್ಪತ್ತರ ದಶಕದಲ್ಲಿ ವ್ಯವಸ್ಥೆಯ ಬದ್ಧ ವಿರೋಧಿಗಳ ದೊಡ್ಡಗುಂಪೇ ನಿರ್ಮಾಣವಾಯಿತು. ಸಾಂಪ್ರದಾಯಿಕ ಜೀವನ ಕ್ರಮದಿಂದ ಹೊರಬಂದು ತನ್ನ ಅಸ್ತಿತ್ವಕ್ಕಾಗಿ ಸಂಘಟನೆಯನ್ನು ಕಟ್ಟಿದರು. ಅಸ್ತಿತ್ವಕ್ಕಾಗಿ ತಡಕಾಡಿದರು. ಬರೆದರು. ಇಂಥ ಬರವಣಿಗೆಯಲ್ಲಿ

ತನ್ನನ್ನು ಅಮಾನವೀಯವಾಗಿ ಕಂಡ ವ್ಯವಸ್ಥೆಯ ಬಗ್ಗೆ ಆಕ್ರೋಶ,ಸಿಟ್ಟು, ವ್ಯಂಗ್ಯ ಇರುತ್ತದೆ. ಎರಡನೆಯದು ಬರಹಗಾರ ತನ್ನದೇ ವರ್ಗದಿಂದ ಬೇರ್ಪಟ್ಟು ತನ್ನವರ ಕಡೆಗೆ ಆಕೃತಿ ಹೇಳುವುದು. ಇಲ್ಲಿ ಸಿಟ್ಟು, ಆಕ್ರೋಶವಿಲ್ಲ.

## ಗ್ರಾಮ ಬದುಕಿನ ಸಮಸ್ಯೆಗಳು ಹಾಗೂ ಸ್ಥಿತ್ಯಂತರಗಳು

ಭಾರತ ಹಳ್ಳಿಗಳ ದೇಶ. ಅಧಿಕ ಮಾನವ ಸಂಪತ್ತು ಹೊಂದಿರುವುದು ಹಳ್ಳಿಗಳು. ಅಲ್ಲದೇ ಅದು ಆರ್ಥಿಕತೆಯ ಮೂಲವಾದಂತೆ, ಸಮಸ್ಯೆಗಳ ತವರೂ ಆಗಿದೆ. ಕೆಳವರ್ಗಗಳು ಎಲ್ಲಾ ಬಗೆಯಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿವೆ. ಆರ್ಥಿಕವಾಗಿ ಸಾಮಾಜಿಕವಾಗಿ, ರಾಜಕೀಯವಾಗಿ ಅನವರತ ಸಮಸ್ಯೆಗೆ ಸಿಲುಕಿಕೊಂಡಿವೆ. ಇವರ ಒಟ್ಟು ಸಮಸ್ಯೆಗೆ ಬಡತನ ಮೂಲ ಕಾರಣವಾಗಿದೆ. ಬಡತನದ ಬವಣೆಯಿಂದ ಕೆಳ ಸಮುದಾಯಗಳು ಸಮಾಜದ ಒಳಗಿನ ಹಾಗೂ ಹೊರಗಿನ ಒತ್ತಡಗಳಿಂದ ಸಮಸ್ಯೆಗಳನ್ನು ಅನುಭವಿಸುತ್ತಿವೆ. ಒಳಗಿನ ಒತ್ತಡವೆಂದರೆ, ತಾನು ನಂಬಿಕೊಂಡು ಬಂದಿರುವ ಸಂಪ್ರದಾಯ, ಆಚರಣೆ, ಮೌಢ್ಯತೆ, ಅಜ್ಞಾನ, ಮುಗ್ಧತೆ, ಹೊರಗಿನ ಒತ್ತಡವೆಂದರೆ, ಸಮಾಜದ ಶ್ರೀಮಂತರು, ಮೇಲ್ಜಾತಿಗಳು.

ಕೆಳವರ್ಗ ತನ್ನ ಮುಗ್ಧತೆಯ ಕಾರಣದಿಂದಾಗಿ ಒಂದು ವ್ಯವಸ್ಥೆಯ ಒಳಗೆ ಎಲ್ಲವನ್ನು ಕಳೆದುಕೊಳ್ಳುತ್ತಾರೆ. ಕೆಳವರ್ಗಗಳ ಮುಗ್ಧತೆ ಜನಪದ ಜಗತ್ತಿನಲ್ಲಿ ಒಂದು ಮೆಚ್ಚುಗೆಯ ಮೌಲ್ಯವಾದರೆ, ಶಿಷ್ಟ ಪ್ರಪಂಚದಲ್ಲಿ ಶೋಷಣೆಗೆ ಒಳಗಾಗುವ ಒಂದು ದೌರ್ಬಲ್ಯವಾಗುತ್ತದೆ. ಈ ದೌರ್ಬಲ್ಯದಿಂದಾಗಿಯೇ ಮೇಲುವರ್ಗಗಳ ಅಡಿಯಾಳಾಗಿ ಅವರ ಮೇಲೆ ಪೂಜ್ಯತೆ ಹಾಗೂ ವಿಧೇಯತೆಯನ್ನು ಬೆಳೆಸಿಕೊಂಡಿದೆ. "ದಲಿತ ಸಂಸ್ಕೃತಿ ಪೂಜ್ಯತೆಯ ಬದಲು ಪ್ರಜ್ಞೆಯನ್ನು, ವಿಧೇಯತೆಯ ಬದಲು ವಿನಯವನ್ನು ಸ್ಥಾಪಿಸಬೇಕಾಗಿದೆ".[೧] ಆ ಮೂಲಕ ಪ್ರಜ್ಞೆಯನ್ನು ಬೆಳೆಸಿಕೊಂಡು ಸ್ವಾವಲಂಬಿಗಳಾಗಬೇಕಾಗಿರುವುದು ಜರೂರಾಗಿದೆ. ಶ್ರೇಣೀಕೃತ ಸಮಾಜದಲ್ಲಿ ಸ್ವಾವಲಂಬಿಗಳಾಗಿ ಸ್ವತಂತ್ರ ಬದುಕನ್ನು ಸಾಗಿಸುವುದು ಕಷ್ಟಸಾಧ್ಯ. ಇದನ್ನು ಅಂಬೇಡ್ಕರ್‌ರವರ ಮಾತಿನಲ್ಲಿ ಹೇಳುವುದಾದರೆ, "ದಲಿತರ ಸಮಸ್ಯೆ ಅನಾಥ ಶವ. ಅದನ್ನು ಯಾರೂ ಮುಟ್ಟುವುದಿಲ್ಲ ತನ್ನಿಂದಲೂ ದೂರವಾಗುತ್ತಿಲ್ಲ"[೨]

ಗ್ರಾಮೀಣ ಬದುಕಿನಲ್ಲಿ ಸಮಸ್ಯೆಗಳು ಭೀಕರರೂಪದಲ್ಲಿರುತ್ತವೆ. ಕೆಳವರ್ಗ 'ಹೆಣ್ಣು, ಮಣ್ಣು, ಹಸಿವು' ಇವುಗಳ ವರ್ತುಲಗಳಲ್ಲಿಯೇ ಸಮಸ್ಯೆಗಳನ್ನು ಅನುಭವಿಸುತ್ತವೆ. ಇವುಗಳನ್ನು ಪಡೆಯಲು ಹೆಣಸಾಧಿಸುತ್ತವೆ. ಇಲ್ಲಿ 'ಮಣ್ಣು' ಎಂದರೆ ಭೂಮಿ ಹೊಂದುವುದೆಂದು ಗ್ರಹಿಸಿದರೂ ಮೇಲು ನೋಟಕ್ಕೆ ಸರಳೀಕರಣವಾಗುತ್ತದೆ. 'ಮಣ್ಣು' ದಲಿತರ ಆರ್ಥಿಕ ಸಮಸ್ಯೆಯನ್ನು ಪರಿಹರಿಸುವ

ವಸ್ತುವಾಗಿದೆ. ಆ ಮೂಲಕ ಹಣ ಸಂಪಾದನೆಗಾಗಿ ದೈಹಿಕ ಶ್ರಮವನ್ನು ವ್ಯಯಿಸಿ ಭೂ ಒಡೆಯನ ಜಮೀನುಗಳಲ್ಲಿ ಕೃಷಿ ಕೂಲಿಯಾಳಾಗಿ ಬದುಕು ಸಾಗಿಸುತ್ತವೆ.

ಹೀಗೆ ಕೃಷಿಕೂಲಿಯಾಳಾಗಿ ತೊಡಗಿದರೂ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗದೇ ಜಾಗತಿಕ ಉದಾರೀಕರಣದ ಪ್ರಭಾವದಿಂದ ದಿನವಸ್ತುಗಳ ಬೆಲೆಗಳು ಗಗನಕ್ಕೇರಿದ್ದರಿಂದ ಭೂ ಒಡೆಯನು ಕೊಡುವ ಕೂಲಿ ಒಂದೊತ್ತಿನ ಊಟಕ್ಕೆ ಸಾಲದಾಗುತ್ತಿದೆ. ಅಲ್ಲದೆ ತಮ್ಮ ವಂಶ ಪರಂಪರೆಯಿಂದ ಬಂದ ವೃತ್ತಿಯಿಂದಲೂ ಬದುಕು ಸಾಗಿಸುವುದು ಕಷ್ಟವಾಗಿದೆ. ಈ ಇಕ್ಕಟ್ಟುಗಳ ನಡುವೆ ಸಿಲುಕಿಕೊಂಡು ಅಸಹಾಯಕರಾಗಿ ಭೂ ಒಡೆಯರ ಕೂಲಿಯಾಳಾಗಿ ಅವರ ದೌರ್ಜನ್ಯಕ್ಕೆ ಒಳಗಾಗಿ,ಬದುಕುವ ಸಮಸ್ಯೆಯನ್ನು ಒಂದೆಡೆ ಅನುಭವಿಸುತ್ತಿದ್ದರೆ, ಸಮಾಜದಲ್ಲಿ ಗಂಡು ಹೆಣ್ಣುಗಳ ಅನೈತಿಕ ಸಂಬಂಧ ಮತ್ತಷ್ಟು ಸಮಸ್ಯೆಯನ್ನು ಉಲ್ಬಣಗೊಳಿಸಿವೆ. ಮೇಲುವರ್ಗದ ಪುರುಷ ಮೇಲೆ ಕೆಳವರ್ಗದ ಸ್ತ್ರೀಯರ ಅತ್ಯಾಚಾರವೆಸಗಲು ಮುಂದಾದರೆ, ಮೇಲುವರ್ಗದ ಸ್ತ್ರೀಯರು ತಮ್ಮ ದೈಹಿಕ ಸುಖಕ್ಕಾಗಿ ಕೆಳವರ್ಗದ ಪುರುಷರನ್ನು ಬಳಸಿಕೊಳ್ಳುತ್ತಾರೆ. ಈ ರೀತಿಯ ಸಂಬಂಧಗಳ ಗುಪ್ತ ವಿಷಯ ಬಯಲಾದರೆ, ಕೆಳವರ್ಗದ ಸ್ತ್ರೀಯರ ಹಾಗೂ ಪುರುಷರ ಮೇಲೆಯೇ ಹೆಚ್ಚು ಪರಿಣಾಮ ಬೀರುತ್ತದೆ. ಆ ಮೂಲಕ ಕೆಳವರ್ಗದ ಸ್ತ್ರೀ ಪುರುಷರು ಶೋಷಣೆಗೊಳಗಾಗಿ ಸಾವಿನಲ್ಲಿ ಪರ್ಯಾವಸನಗೊಳ್ಳುತ್ತಾರೆ. ಇಲ್ಲವೇ ಅತ್ಯಾಚಾರ ದೌರ್ಜನ್ಯಕ್ಕೆ ಒಳಗಾಗಿ ಊರನ್ನೇ ಬಿಡುವ ಪ್ರಸಂಗ ಎದುರಾಗುತ್ತವೆ. ಇಂಥ ಸಮಸ್ಯೆಗಳು ಉದ್ಭವಿಸಲು ಪ್ರತಿಷ್ಠಿತ ವರ್ಗ ಮೂಲ ಕಾರಣವಾಗಿದೆ. ಅವನ ಅತಿಯಾದ ದುರಾಸೆಗೆ ಕೆಳವರ್ಗಗಳನ್ನು ಬಲಿ ತೆಗೆದುಕೊಳ್ಳುತ್ತಾನೆ. ಇಂಥ ಸಮಸ್ಯೆಗಳು ದಲಿತ ಬಂಡಾಯ ಕಾದಂಬರಿಗಳಲ್ಲಿ ಉದ್ದಕ್ಕೂ ಚಿತ್ರಣಗೊಂಡಿವೆ.

ಇಂಥ ಸಂದರ್ಭದಲ್ಲೆಲ್ಲಾ ಮೇಲುವರ್ಗ ತನ್ನ ಹಿತಾಸಕ್ತಿಯನ್ನು ಕೆಳವರ್ಗಗಳ ಮೂಲಕ ಸಾಧಿಸುತ್ತಿರುತ್ತದೆ. ಆ ಮೂಲಕ ದಲಿತರ ನಡುವೆ ಸಂಘರ್ಷವೇರ್ಪಡಿಸಿ, ನಂತರ, ಅವರುಗಳ ಸಂಘರ್ಷದಲ್ಲಿ ಸಂಧಾನಕಾರನಾಗಿ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳುತ್ತದೆ. ಹಾಗಾಗಿ ಕೆಳವರ್ಗಗಳಿಗೆ ಅಧಿಕಾರವಿಲ್ಲದೇ ಪ್ರತಿಷ್ಠಿತ ವರ್ಗಗಳ ರಾಜಕೀಯ ಅಡಿಯಲ್ಲಿ ಸಿಲುಕಿ ನಲುಗುತ್ತಿವೆ. ಅಂಬೇಡ್ಕರ್‌ರ ಮಾತಿನಲ್ಲಿ ಹೇಳುವುದಾದರೆ,

> "ಅಸ್ಪೃಶ್ಯತೆಯ ಬೇರು ಜಾತಿ ವ್ಯವಸ್ಥೆಯಲ್ಲಿದೆ. ಜಾತಿವ್ಯವಸ್ಥೆಯ ಬೇರು ಧರ್ಮಾವಲಂಬಿಯಾದ ವರ್ಣಾಶ್ರಮದಲ್ಲಿದೆ ಮತ್ತು ವರ್ಣಾಶ್ರಮದ ಬೇರು ಬ್ರಾಹ್ಮಣ ಧರ್ಮದಲ್ಲಿದೆ ಮತ್ತು ಬ್ರಾಹ್ಮಣರ ಧರ್ಮದ ಬೇರು ಅಧಿಕಾರ ಅಥವಾ ರಾಜಕೀಯ ಶಕ್ತಿಯಲ್ಲಿದೆ"[೬]

ವಿಚಿತ್ರವೆಂದರೆ, ಹಿಂದೂ ಧರ್ಮದ ಅಡಿಯಲ್ಲಿಯೇ ದಲಿತರು, ಕೆಳವರ್ಗಗಳು, ಮೇಲ್ಜಾತಿ, ಮೇಲ್ವರ್ಗ ಸೋದರತ್ವವಾಗಿದ್ದರೂ, ಜಾತಿಸಮಸ್ಯೆ, ವರ್ಗಸಮಸ್ಯೆಯನ್ನು ಅನುಭವಿಸುತ್ತಿವೆ.

ದಲಿತ ಬಂಡಾಯ ಕಾದಂಬರಿಗಳು ಇಂಥ ಸಮಸ್ಯೆಗಳನ್ನು ಹಿಡಿದಿಡುತ್ತಲೇ ವ್ಯವಸ್ಥೆ ಬದಲಾವಣೆಯ ಸಾಧ್ಯತೆಯನ್ನು ಸೂಚಿಸುತ್ತವೆ. ಅಂಧತೆ, ಮೌಢ್ಯತೆಯಲ್ಲಿ ಮುಳುಗಿದ ಕೆಳವರ್ಗ, ಇಂದು ಅಕ್ಷರ ಸಂಸ್ಕೃತಿಯ ಪ್ರಭಾವದಿಂದ, ಆಧುನೀಕತೆಗೆ ತಮ್ಮನ್ನು ಒಡ್ಡಿಕೊಂಡು ಪ್ರಜ್ಞಾವಂತನಾಗಿ ತನ್ನ ಮೈಯ ಮೇಲಿನ ಧೂಳು ಕೊಡವಿಕೊಂಡಂತೆ ತನ್ನಲ್ಲಿ ಹುದುಗಿದ್ದ ಸಂಕೋಚ, ಮುಗ್ಧತೆ, ಕೀಳು ಭಾವನೆಗಳನ್ನು ಕಳಚಿಹಾಕಿ, ಕಾಲ ಪರಿಸ್ಥಿತಿಯೊಂದಿಗೆ ಸ್ಪಂದಿಸುತ್ತಿವೆ. ಒಬ್ಬ ದಲಿತ ಬದಲಾವಣೆಯಾಗುತ್ತಿದ್ದಾನೆಂದರೆ, ಅವನಲ್ಲಿ ಎಚ್ಚರ ಮೂಡುತ್ತಿದೆ ಎಂದರ್ಥ. "ಯಾವುದೇ ಕೆಳಜಾತಿ ಹಾಗೂ ಆದಿವಾಸಿ ಸಂಸ್ಕೃತಿಗೆ ವಿಚಿತ್ರವಾದ ಅಂತರ್‌ವಾಹಿನಿಯಾದ ಗ್ರಹಿಕೆ ಹಾಗೂ ತಾಳ್ಮೆ, ತಾಳಿಕೆಯ ಗುಣವಿರುತ್ತದೆ. ಕಳೆದುಕೊಳ್ಳುವ ಪ್ರಕ್ರಿಯೆಯಲ್ಲೇ ತನಗೆ ಬೇಕಾದ್ದನ್ನು ಮತ್ತೊಂದು ರೂಪಗಳಲ್ಲಿ ಪಡೆದುಕೊಳ್ಳುವ ಸಾಮರ್ಥ್ಯ ಅವರಿಗೆ ಇರುವುದರಿಂದಲೇ ಅವುಗಳ ಅನನ್ಯತೆ ತೀರ್ಮಾನವಾಗಿದೆ."[೪] ಹಾಗಾಗಿ ಸಮಾಜ ಮುಖಿಯಾಗಿ ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕ-ರಾಜಕೀಯವಾಗಿ ಇಂದು ಕೆಳವರ್ಗಗಳು ಸ್ಥಿತ್ಯಂತರಗೊಳ್ಳುತ್ತಿವೆ. "ಜಾತಿ ಸಮಾಜದೊಳಗಿನ ಸಂಘರ್ಷಗಳು ಗ್ರಾಮೀಣ ಪ್ರದೇಶಗಳಲ್ಲಿ ಭೀಕರ ರೂಪದಲ್ಲಿರುತ್ತವೆ. ದಲಿತರ ಪಾಲಿಗಷ್ಟೇ ಅಲ್ಲ. ಆಸ್ತಿಗಳಿಲ್ಲದ ಎಲ್ಲ ಜನರ ಪಾಲಿಗೆ ಹಳ್ಳಿಗಳು ನರಕಗಳಾಗಿ ಪರಿಣಮಿಸುತ್ತಿವೆ. ಹೀಗಾಗಿ ಹತ್ತಿರದ ಪಟ್ಟಣಗಳು ಆರ್ಥಿಕ ಭದ್ರತೆಯನ್ನು ಕೊಡದಿದ್ದರೂ ಅಸ್ಪೃಶ್ಯತೆಯ ಅಪಮಾನಗಳಿಂದ ರಕ್ಷಿಸುತ್ತವೆ. ಯಾವತ್ತೂ ಅಂತರ್‌ಜಾತಿಯ ಮದುವೆಯಾದ, ಜಾತಿ ಪಂಚಾಯಿತಿಗಳಿಂದ ಬಹಿಷ್ಕಾರಕ್ಕೆ ಒಳಗಾದ ದಲಿತರು ವಲಸೆ ಹೋಗುತ್ತಾರೆ. ಭೂಮಿ ಇಲ್ಲದಾಗ ವಲಸೆ ಹೋಗುವುದು ಸುಲಭ ಕೂಡ, 'ಕೆಟ್ಟು ಪಟ್ಟಸೇರು' ಎಂಬಂತೆ ಹಳ್ಳಿಯ ಬದುಕು ದುರ್ಭರವಾದಾಗ ಅದರ ಕೆಟ್ಟ ಕನಸ್ಸುಗಳಿಂದ ಪಾರಾಗಲು ಮಹಾವಲಸೆ ನಡೆಯುತ್ತದೆ."[೫]

ಹೀಗೆ ವಲಸೆ ಹೋಗುವಾಗ ಮೂಲ ಸಂಸ್ಕೃತಿಯನ್ನು ಜೀವಂತವಾಗಿಡುವ ದೃಷ್ಟಿಯೂ ಕೆಳವರ್ಗಗಳಿಗಿದೆ. ವಾಸ್ತವದಲ್ಲಿ ಕೆಳವರ್ಗ ವರ್ತಮಾನದ ಒತ್ತಡಗಳನ್ನು ಸ್ವೀಕರಿಸುತ್ತಲೇ ಬದುಕಿನ ಅನನ್ಯತೆಯನ್ನು ಕಂಡುಕೊಳ್ಳುತ್ತಿರುತ್ತವೆ. ಆ ಮೂಲಕ ರಾಜಕೀಯ, ಶೈಕ್ಷಣಿಕ ರಂಗದಲ್ಲಿ ತನ್ನನ್ನು ತೊಡಗಿಸಿಕೊಂಡು, ಸಮಾನತೆಗಾಗಿ ಹಂಬಲಿಸುತ್ತಿವೆ. ತಾನು ಎಷ್ಟೋ ಕಾಲದಿಂದ ಅನುಭವಿಸಿದ ಬಡತನವನ್ನು ಓಡಿಸಲು ಇಚ್ಛೆಪಡುವುದು ಸ್ವಾಭಾವಿಕವಾಗಿದೆ. ಹಾಗಾಗಿ ಕೆಳವರ್ಗಗಳು ತಾತ್ಕಾಲಿಕವಾಗಿ ವಲಸೆ ಹೋಗುವುದು ಅನಿವಾರ್ಯವೆನಿಸುತ್ತದೆ. ಕೆಳವರ್ಗಗಳ ಸ್ಥಿತ್ಯಂತರಕ್ಕೆ ಕಾರಣಗಳನ್ನು ಹೀಗೆ ಕ್ರೂಢೀಕರಿಸಬಹುದು.

೧. ಭೂಮಿ-ಸಂಪತ್ತಿನ ವಿಷಮ ವಿತರಣೆ.

೨. ವರ್ಗ ವಿಭಜನೆ, ವರ್ಣ ದ್ವೇಷಗಳು.

೩. ಸುಲಿಗೆ ದಬ್ಬಾಳಿಕೆ.

೪. ಬಡತನ.

೫. "ಹುಟ್ಟೂರಿನಿಂದ ಹೊರಗೆ ದಬ್ಬುವ ಸಂಗತಿಗಳು.

- ದುಡಿಮೆ ಬೇಕಾದ ಪ್ರಮಾಣದಲ್ಲಿ ಇಲ್ಲದಿರುವುದು

- ಪ್ರಾದೇಶಿಕ ಉತ್ಪತ್ತಿಯಲ್ಲಿ ಕಡಿತದಿಂದ ಉಂಟಾಗುವ ಕೊರತೆ.

ದಬ್ಬಾಳಿಕೆ, ಮತ್ತು ದುರ್ವ್ಯವಹಾರದಿಂದ ಹತಾಶತೆ.

ಜಾತಿ ಬಾಂಧವ್ಯದಿಂದ ಹೊರಗೆ ಹಾಕುವ ಕೂಟ ನೀತಿ."[೬]

ಈ ಬಗೆಯ ಸಂಗತಿಗಳು ಕಾದಂಬರಿಗಳಲ್ಲಿ ಕಾಣಬಹುದು. ಈ ಅಂಶಗಳನ್ನು ತಾತ್ವಿಕವಾಗಿ ಮುಂದೆ ಚರ್ಚಿಸಲಾಗಿದೆ.

**ಆರ್ಥಿಕ ಸಮಸ್ಯೆ**

"ಕೆಳವರ್ಗಗಳ ಮೂಲ ಸಮಸ್ಯೆ ಭೂಮಿಯ ಒಡೆತನದ ಸಮಸ್ಯೆ. ಇದನ್ನು ಅವಲಂಬಿಸಿಯೇ ಅವರ ಸಾಮಾಜಿಕ ಸ್ಥಾನಮಾನಗಳು ನಿರ್ಧಾರವಾಗುತ್ತವೆ. ಅವರಿಗೆ ಬೇಕಾಗಿರುವುದು ಊಟ, ಬಟ್ಟೆ, ಭೂಮಿ, ಮಳೆ ಬಂದರೂ ಸಹ ಬೀಳದಿರುವ ಮನೆಗಳು ಇದು ಬದುಕಿಗಾಗಿ ನಡೆಯುವ ಹೋರಾಟ."[೭] ಮ.ನ. ಜವರಯ್ಯನವರ "ಮಾಗಿ" ಕಾದಂಬರಿಯ 'ಮಾಗವ್ವ' ಇಂತಹ ಬದುಕಿಗಾಗಿ ನಿರಂತರವಾಗಿ ಹೋರಾಡುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಮಾಗಿ ಗಿರಿಯಪ್ಪನನ್ನು ಮದುವೆಯಾದಾಗಿನಿಂದ ತನ್ನ ಭಾವ ಚಾಮನ ದುರಾಸೆಯ ಮೂಲಕ ಸಮಸ್ಯೆಗಳು ಉದ್ಭವವಾಗಲು ಕಾರಣವಾಗುತ್ತವೆ. ಚಾಮನು ತನ್ನ ತಮ್ಮ ಗಿರಿಯಪ್ಪನನ್ನು ಕುಡುಕನನ್ನಾಗಿಸಿ, ತನ್ನ ಅಡಿಯಾಳಾಗಿ ಮಾಡಿಕೊಂಡು, ತಂದೆ ಯಾಜಮಾನ್ ದಾಸಪ್ಪನವರ ಒಟ್ಟು ಆಸ್ತಿಯನ್ನು ತಾನೇ ಲಪಟಾಯಿಸುವ ಹುನ್ನಾರದಿಂದ ಪಂಚಾಯಿತಿಯಲ್ಲಿ ಹೀಗೆ ಹೇಳುತ್ತಾನೆ. "ನೋಡ್ರಪ್ಪಾ ಇದೇ ಕ್ಯನೇ (ಕೊನೆ) ಮಾತು ಮಡಿಕಂಡ್ ಬಂದಿರುವಳಿಗೆ ಆಸ್ತಿಯ ಹಕ್ಕಿಲ್ಲ ಅನ್ನೋ ಕುಲದ ಕಾನೂನು ನಾಯೇನು ಕುಲೇಸ್ತರಿಗೆ ಹೇಳಿ ಕೊಡಬೇಕಾಗಿಲ್ಲ. ಆದ್ರಿಂದ ಅದು ಮಾತ್ರ ಸಾಧ್ಯವಿಲ್ಲ. ನನ್ನ ಮಾತ್ನಂಗೆ ಗಿರಿಯ ಅವಳ ಬಿಟ್ಟು... ಬಂದು, ಬ್ಯಾರೆ ಯೆಣ್ಣಾ ಮದ್ವೇ ಆಗ್ಲೀ ಆಮ್ಯಾಕ್ ಪಾಲ್ ಕೇಳಕ ಬರ್ಲಿ"[೮] ಎಂದು ಹೇಳುವಲ್ಲಿ ತನ್ನ ಸಮರ್ಥನೆಗೆ ಸಂಪ್ರದಾಯವನ್ನು ಬಂಡವಾಳವನ್ನಾಗಿ ಬಳಸಿಕೊಳ್ಳುವುದನ್ನು ಇಲ್ಲಿ ಕಾಣುತ್ತೇವೆ. ಗಿರಿಯಪ್ಪ ಹಾಗೂ ಮಾಗಿಯ ಮದುವೆಯು ಸಂಪ್ರದಾಯಬದ್ಧವಾಗಿ ನಡೆದಿಲ್ಲವೆಂದ ಪಂಚಾಯಿತಿಯ

ಸಮ್ಮುಖದಲ್ಲಿ ಹೇಳಿ ಗಂಡ ಗಿರಿಯನ ಮೂಲಕ ಮಾಗಿಯನ್ನು ಬೀದಿಗೆ ನೂಕಿಸುತ್ತಾನೆ. ಅಸಹಾಯಕಳಾದ ಮಾಗಿ ಪಂಚಾಯಿತಿಯ ತೀರ್ಮಾನ ಆಗುವವರೆಗೆ ಆಸ್ತಿಯಿಲ್ಲ, ಮನೆಯಿಲ್ಲ, ಗಂಡನ ಅಶ್ರಯವೂ ಇಲ್ಲದಂಥ ದಾರುಣ ಪರಿಸ್ಥಿತಿಯಲ್ಲಿ ಬೆಂದು ಹೋಗಿ, ಹಸಿವಿನಿಂದ ಕಂಗಾಲಾದಳು. ಸಮಾಜದಲ್ಲಿ ಹೆಣ್ಣೊಬ್ಬಳು ಮಾಗಿ ಏಕಾಂಗಿಯಾಗಿ ಬದುಕುವುದು ಸುಲಭವಲ್ಲ. ಏಕಾಂಗಿಯಾಗಿ ತಾನು ಬದುಕುವುದರ ಜೊತೆಗೆ ತನ್ನ ಮಕ್ಕಳನ್ನು ಬದುಕಿಸುವುದು ಮುಖ್ಯವಾಗಿತ್ತು. ಹಾಗಾಗಿ ಅವಳು ಬದುಕಿಗಾಗಿ ನಿರಂತರ ಆರ್ಥಿಕ ಸಮಸ್ಯೆಯನ್ನು ಅನುಭವಿಸುತ್ತಾಳೆ. ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು 'ಎಲೆಕಟ್ಟು'ವ ವ್ಯಾಪಾರದ ಅನ್ಯ ಉದ್ಯೋಗ ಕಂಡುಕೊಳ್ಳುತ್ತಾಳೆ. ಎಲೆಕೊಯ್ದು, ಎಲೆಕಟ್ಟಿ ಕುಕ್ಕೆಗೆ ಹೊತ್ತುಕೊಂಡು ಆನಂದಪುರದಿಂದ ಪಾಂಡವಪುರಕ್ಕೆ ದಿನನಿತ್ಯ ವ್ಯಾಪಾರಕ್ಕೆ ಹೋಗುತ್ತಾಳೆ. ಆ ಉದ್ಯೋಗದಿಂದ ಬಂದ ಹಣ ಅಂದಂದಿನ ಹಸಿವಿನ ಸಮಸ್ಯೆಯನ್ನು ಪರಿಹರಿಸುತ್ತದೆ. ಹಸಿವಿನ ಅನಿವಾರ್ಯತೆಯಿಂದಾಗಿ ಕೆಳವರ್ಗ ಕಾಲ ಪರಿಸ್ಥಿತಿಯೊಂದಿಗೆ ಜಾಗೃತರಾಗಿ 'ದೇಹ' ಮತ್ತು 'ಮನಸ್ಸು'ಗಳನ್ನು ಸದಾ ಗಟ್ಟಿ ಮಾಡಿಕೊಂಡಿರುತ್ತದೆ. ಹಾಗಾಗಿ ಎಂತಹ ಶ್ರಮ ಆಧಾರಿತ ಕೆಲಸವನ್ನಾದರೂ ಮಾಡಲು ಹಿಂದೇಟು ಹಾಕುವುದಿಲ್ಲ. ಆ ಮೂಲಕ ಶ್ರಮ ಆಧಾರಿತ ಕೆಲಸಗಳನ್ನು ಹುಡುಕಿಕೊಂಡು ಬದುಕು ಸಾಗಿಸುತ್ತದೆ. ಎಲೆಕಟ್ಟುಗಳ ಬುಟ್ಟಿಯನ್ನು ತಲೆ ಮೇಲೆ ಹೊತ್ತುಕೊಂಡು ವ್ಯಾಪಾರ ವೃತ್ತಿ ಕೈಗೊಂಡು ದುಡಿದು ಬದುಕು ಸಾಗಿಸುವ ವಾಸ್ತವತೆಯನ್ನು 'ಮಾಗಿ'ಯ ಮೂಲಕ ಕಂಡುಕೊಳ್ಳಬಹುದಾಗಿದೆ. ಇಂದಿಗೂ ಕೆಳಸಮುದಾಯ ತಮ್ಮ ಮೂಲ ಉದ್ಯೋಗದ ಜೊತೆಗೆ ಉಪಜೀವನಕ್ಕಾಗಿ ಪರ್ಯಾಯ ಉದ್ಯೋಗಳನ್ನು ಅವಲಂಬಿಸಿರುವುದು ಕಾಣುತ್ತೇವೆ. ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕವಾಗಿ ದುರ್ಬಲರಾದ ಸ್ತ್ರೀಯರು ತಮ್ಮ ವೃತ್ತಿಯಿಂದ ಆದಾಯ ಕಾಣದೇ ಜೀವನ ಸಾಗಿಸುವುದು ದುಸ್ತರವಾಗಿದೆ. ಹಾಗಾಗಿ ಹಣ್ಣು-ಹಂಪಲು, ತರಕಾರಿ, ಉರುವಲು ಕಟ್ಟಿಗೆ ಮಾರುವಂತಹ ಉಪ-ಉದ್ಯೋಗ ಕಂಡುಕೊಂಡಿರುತ್ತವೆ. ಅವುಗಳನ್ನು ಹತ್ತಿರದ ನಗರ-ಪಟ್ಟಣಗಳ ಮನೆ-ಮನೆಗಳಿಗೆ ಹೋಗಿ ಮಾರಿ ಹಣ ಸಂಪಾದನೆ ಮಾಡಿಕೊಳ್ಳುತ್ತಾರೆ. ಹೀಗೆ ಅನ್ಯ ಉದ್ಯೋಗಗಳ ಕಡೆ ಮುಖ ಮಾಡುವಾಗ ತಮ್ಮ ಮೂಲ ಉದ್ಯೋಗ ಕಳೆದುಕೊಳ್ಳುತ್ತೇವೆಂದು ಆತಂಕಪಡುವುದು ಇಂದು ಅಗತ್ಯವಾಗಿ ಉಳಿದಿಲ್ಲ ಏಕೆಂದರೆ ಸರಕಾರದ ಉದಾರ ನೀತಿಗಳು ಮುಕ್ತ ಮಾರುಕಟ್ಟೆಗಳಿಂದಾಗಿ ತಮ್ಮ ಮೂಲ ವೃತ್ತಿಯಿಂದ ಬರುವ ಆದಾಯ ಒಂದೊತ್ತಿನ ಹೊಟ್ಟೆ ತುಂಬಿಸಲಾರದು. ಅಲ್ಲದೇ ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲರನ್ನಾಗಿ ಮಾಡುತ್ತದೆ. ಆದರೂ ಅನ್ಯ ಉದ್ಯೋಗಗಳಿಗೆ ಪರಿವರ್ತಿತವಾಗುವಾಗ ಎಚ್ಚರವಹಿಸಿ ತಮ್ಮ ಮೂಲ ಉದ್ಯೋಗವನ್ನು ಜೀವಂತವಾಗಿ ಉಳಿಸುವ ದೃಷ್ಟಿಯೂ ಕೆಳವರ್ಗಗಳಿಗಿವೆ. ಈ ದೃಷ್ಟಿಯಿಂದ ಮಾಗಿ ಪಾತ್ರ ಗಮನಾರ್ಹವಾಗಿದೆ. ಮಾಗಿ ತನ್ನ ಎಲೆಕಟ್ಟು ವ್ಯಾಪಾರದ ಜೊತೆ ಜೊತೆಗೆ

ಗಂಡನ ಪಾಲಿನ ಆಸ್ತಿ ಪಡೆಯಲು ನಿರಂತರವಾಗಿ ಹೋರಾಡುವುದು ಮುಖ್ಯವಾಗಿ ಕಾಣುತ್ತದೆ. ಆಸ್ತಿಪಾಲಿನ ಹೋರಾಟಕ್ಕೆ ತನ್ನ ದುಡಿಮೆಯ ಹಣ ಅಲ್ಪಮಟ್ಟಿಗೆ ಸಹಾಯಕವಾಗುತ್ತದೆ. ಆ ಮೂಲಕ ಭೂಮಿ ಹೊಂದಿ ಫಲ ಪಡೆಯುತ್ತಾರೆ. ಮಾಗವ್ವಳ ಪಾತ್ರದಂತೆ ದೇವನೂರ ಮಹಾದೇವರ 'ಕುಸುಮ ಬಾಲೆ' ಕಾದಂಬರಿಯ ಅಕ್ಕಮಾದೇವಮ್ಮನ ಪಾತ್ರ ಗ್ರಹಿಕೆಗೆ ಬರುತ್ತದೆ. ಈ ಎರಡೂ ಪಾತ್ರಗಳು ಇವರ ಭಾವರುಗಳ ಆಸ್ತಿಯ ದುರಾಸೆಯ ಅಡಿಯಲ್ಲಿ ದೌರ್ಜನ್ಯಕ್ಕೆ ಒಳಗಾಗುವುದು ಗಮನಾರ್ಹ ಅಂಶ. ಮಾಗಿ ಕುಡಕ ಗಂಡನನ್ನು ಕಟ್ಟಿಕೊಂಡೇ ಆಸ್ತಿಪಾಲಿಗೆ ಹೋರಾಡಿದರೆ, ಅಕ್ಕಮಾದೇವಮ್ಮ ಗಂಡನನ್ನು ತನ್ನ ಕಂದಯಾಡನೊಡನೆ ಬಂದು ತನ್ನ ಭಾವನಾದ ಬಸಪ್ಪ ಸೋಮಿಯಲ್ಲಿ ಆಸ್ತಿಪಾಲು ಕೇಳುತ್ತಾಳೆ.

ಅಕ್ಕಮಾದೇವಮ್ಮ ಗಂಡ ಸತ್ತ ಮಾರನೇ ದಿನಕ್ಕೆ ತವರು ಮನೆಗೆ ತೆರಳಿ, ಮತ್ತೇ ಹನ್ನೆರಡು ತಿಂಗಳ ನಂತರ ತನ್ನ ಕಂದನೊಡನೆ ಬಂದು ಬಸಪ್ಪಸೋಮಿಯ ಹತ್ತಿರ ತನ್ನ ಗಂಡನ ಪಾಲಿನ ಆಸ್ತಿಗಾಗಿ ಅಂಗಲಾಚುವಾಗ "ನಮ್ಮ ಬಾಯಿಂದ ಕೆಟ್ಟ ಮಾತುಗಳನ್ನು ನೀನು ಆಡಿಸಬಾರದಮ್ಮ, ಗಂಡ ಸತ್ತ ಹನ್ನೆರಡನೇ ತಿಂಗಳಿಗೆ ಯಾರಿಗಾದರೂ ಎಲ್ಲಾದರೂ ಈ ನರಲೋಕದ ರೂಢಾವಳಿಯಲ್ಲಿ ಮಕ್ಕಳಾಗಿರುವಂಥ ಪ್ರಸಂಗ ಏನಾದರೂ ಇದ್ದಲ್ಲಿ ಅದನ್ನು ನಮಗೆ ತೋರಿಸಿ ನೀನು ಬರುವಂತಳಾಗು. ಈಗ ನಡೆಯಾಚೆ"[7] ಎಂದ ಬಸಪ್ಪಸೋಮಿ ತನ್ನ ತಮ್ಮ ಸಿದ್ದೂರನ ಮೂಲಕ ಹೊಡೆತ ಹೊಡೆಸಿ ಕುತ್ತಿಗೆ ಹಿಡಿದು ನೂಕಿಸುತ್ತಾನೆ. ಅಕ್ಕಮಾದೇವಮ್ಮ ಹಟ್ಟಿ ಜೀತಗಾರನಿಗೆ ಗರ್ಭಿಣಿಯಾಗಿ 'ಯಾಡ'ನನ್ನು ಜನ್ಮವೆತ್ತಿರುವಳೆಂದು ಅಪವಾದವೆಸಗಿ ಒಟ್ಟು ಆಸ್ತಿಯನ್ನೆಲ್ಲಾ ತಾನೇ ವಶಮಾಡಿಕೊಂಡು, ಅಕ್ಕಮಾದೇವಮ್ಮಗೆ ದಿಕ್ಕು ದಿಸೆ ಇಲ್ಲದಂತೆ ದನದ ಹಟ್ಟಿಗೆ ತಳ್ಳುವುದು ಅಮಾನವೀಯ ಸಂಗತಿ. ಅಕ್ಕಮಾದೇವಮ್ಮ ಮಾನವೀಯತೆಗೆ ಹಂಬಲಿಸಿ ಬಸಪ್ಪಸೋಮಿಯ ದೌರ್ಜನ್ಯಕ್ಕೆ ಪ್ರತಿಭಟಿಸದೇ ಅಸಹಾಯಕಳಾಗುತ್ತಾಳೆ. ಅಸಹಾಯಕವಾದ ಕೆಳವರ್ಗ ಒಂದನ್ನು ಕಳೆದುಕೊಳ್ಳುವ ಪ್ರಕ್ರಿಯೆಯಲ್ಲಿಯೇ ಮತ್ತೊಂದನ್ನು ಪಡೆಯುವ ಶಕ್ತಿಯಿರುತ್ತದೆ. ಮತ್ತೊಂದನ್ನು ಪಡೆಯಲು ತಾಳ್ಮೆ, ಬಾಳಿಕೆಯನ್ನು ವಹಿಸುತ್ತವೆ. ಈ ತಾಳ್ಮೆಯಿಂದಲೇ ಉದ್ಯೋಗಗಳನ್ನು ಹುಡುಕಿಕೊಂಡು, ಮೇಲುವರ್ಗಗಳ ಶೋಷಣೆಗೊಳಗಾಗಿಯೂ ತಮ್ಮ ಸಂಸ್ಕೃತಿಯನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿವೆ. ತಾಳಿಕೆಯ ಶಕ್ತಿ ಇಲ್ಲದಿದ್ದರೆ ಎಂದೋ ನಾಶವಾಗಿ ಹೋಗಿ ಬಿಡುತ್ತಿದ್ದವು.

ಕೆಳವರ್ಗವು ಕರಿಕೆಯ ಹುಲ್ಲಿನ ಹಾಗೆ. ಕರಿಕೆಯ ಹುಲ್ಲಿನ ಮೇಲೆ ಎಷ್ಟೇ ಕಲ್ಲು, ಮುಳ್ಳುಗಳನ್ನು ಹಾಕಿದರೂ, ಆ ಕಲ್ಲು ಮುಳ್ಳುಗಳ ಸಂದುಗಳಲ್ಲಿ ಅದು ಮತ್ತೆ ಚಿಗುರುವಂತೆ ಕೆಳವರ್ಗಗಳು ಬದುಕಿಗಾಗಿ ಹವಣಿಸುತ್ತವೆ. ಅಕ್ಕಮಾದೇವಮ್ಮ ಬಸಪ್ಪಸೋಮಿಯ ಮೂಲಕ ಆಸ್ತಿ ಕಳೆದುಕೊಂಡು

ಅನಾಥಳಾದವಳು, ಬದುಕಿಗಾಗಿ ಬೀಡಿ, ಟೀ, ಇರುವಂಥ ಪುಟ್ಟದೊಂದು ಹೋಟಲ್ ತೆರೆದು ಬದುಕು ಸಾಗಿಸ ತೊಡಗುವುದು ಗಮನಾರ್ಹ ಅಂಶ.

ಸಂಕ್ರಮಣ ಕಾಲದಲ್ಲಿ ಕೆಳವರ್ಗಗಳ ಪಾಲಿಗೆ ಹೋಟಲ್ ಉದ್ಯಮ ಅನಿರೀಕ್ಷಿತವಾದದ್ದು. ಅದು ಬದುಕಿನ ಭದ್ರತೆಯನ್ನು ಒದಗಿಸುತ್ತದೆ. ಅಕ್ಕಮಾದೇವಮ್ಮಳು ಹೋಟಲ್ ತೆರೆದು ಬದುಕು ಸಾಗಿಸುವ ಪ್ರಸಂಗದಂತೆ ಆಲನಹಳ್ಳಿ ಕೃಷ್ಣರ 'ಭುಜಂಗಯ್ಯನ ದಶಾವತಾರ' ಕಾದಂಬರಿಯಲ್ಲಿ ಭುಜಂಗಯ್ಯನು ಹೋಟೆಲ್ ನಡೆಸುವುದು ಗ್ರಹಿಕೆಗೆ ಬರುತ್ತದೆ. "ಇಂದು ಚಿಕ್ಕವನು. ನಾಳ್ಗೆ ದೊಡ್ಡವ"[೧೦]ನೆಂದು ಕನಸ್ಸು ಕಾಣುವ ಅಕ್ಕಮಾದೇವಮ್ಮ ತನ್ನ ವೃಧ್ಧಾಪ್ಯದಲ್ಲಿ ಯಾಡ ಸಾಕಿ ಸಲುತ್ತಾನೆಂಬ ಭರವಸೆ ಇಡುತ್ತಾಳೆ. ಬಡವನಿಗೆ ಭರವಸೆಯೇ ಸಿದ್ಧೌಷಧ. ಅಕ್ಕಮಾದೇವಮ್ಮಳ ನಿರೀಕ್ಷೆಯಂತೆ, ಯಾಡ ಬೌದ್ಧಿಕವಾಗಿ ಬೆಳೆದು, ಹೋಟಲ್‌ನಲ್ಲಿ ವ್ಯಾಪಾರ ಕುದುರಿಸಿದಂತೆಯೇ ಅಲ್ಲಿಯೇ ಇದ್ದ ಸಕ್ಕರೆಗೆ ಇರುವೆಗಳು ಮುತ್ತಿಕೊಂಡು ಸಕ್ಕರೆ ಹರಳುಗಳನ್ನು ಎತ್ತಿಕೊಂಡು ಹೋಗುವ ಸಂದರ್ಭದಲ್ಲಿ ಯಾಡನ ಕೈಗೆ ಸಿಕ್ಕಿಬಿದ್ದ ಇರುವೆಯನ್ನು "ಬುಡು ಬಡ್ಡೆತ್ತದ ಈ ಗೊಟ್ಟಿನ ಕಾಲ್ದಲ್ಲಿ ಒಂದು ಸಕ್ರ ಅರಳಗ ಮುರ್ಕಾಸು ಆಯ್ತುದಕನ"[೧೧] ಎಂದು ಅವುಗಳಿಂದ ಬಿಡಿಸಿಕೊಳ್ಳುವ ಪರಿಯು ಯಾಡನ ಆರ್ಥಿಕ ಎಚ್ಚರವನ್ನು ತೋರಿಸುತ್ತದೆ. ವಾಸ್ತವವಾಗಿ ಯಾಡನ ಈ ಮಾತುಗಳು ಸಕ್ಕರೆಯ ಬೆಲೆ ಸೂಚಿಸಿದರೂ, ಇರುವೆಗಳು ಸಕ್ಕರೆಗೆ ಮುತ್ತಿಕೊಳ್ಳುವುದು ತನ್ನ ಅಸ್ತಿತ್ವದ ಪ್ರಶ್ನೆಯಾಗುತ್ತದೆ. ಸಕ್ಕರೆಯು ಮೂಲತಃ ಸಿಹಿಯಾಗಿರುತ್ತದೆ. ಸಿಹಿಯಾದ ಸಕ್ಕರೆಗೆ ಇರುವೆಗಳು ಆಕ್ರಮಣ ಮಾಡುವುದು ಸಹಜ. ದುರ್ಬಲರು ಇದನ್ನು ಸಹಿಸದೇ ದುರ್ಬಲರ ಮೇಲೆ ಆಕ್ರಮಣ ಮಾಡುವುದು ವಾಸ್ತವಿಕ ಸತ್ಯಾಂಶ. ಮೇಲುವರ್ಗ ಯಾವಾಗಲೂ ತನ್ನ ಪ್ರತಿಷ್ಠೆ ಮೆರೆಯಲು, ಅಧಿಕಾರ ಚಲಾಯಿಸಲು ದುರ್ಬಲರನ್ನು ಅಡಿಯಾಳಾಗಿ ಮಾಡಿಕೊಳ್ಳಲು ಸದಾ ಆಲೋಚಿಸುತ್ತಿರುತ್ತದೆ. ಈ ಇರಾದೆಯಿಂದ ಯಾಡನು ಇರುವೆಯ ಹಾಗೆ ಬಸಪ್ಪಸೋಮಿಯು ಮತ್ತೇ ತನ್ನ ಅಸ್ತಿತ್ವದ ಮೇಲೆ ಆಕ್ರಮಣವೆಸಗಬಹುದೆಂಬ ತಲ್ಲಣದಿಂದ ಇರುವೆಗಳಿಂದ ಸಕ್ಕರೆ ಹರಳನ್ನು ಬಿಡಿಸಿಕೊಳ್ಳುವನು. ಆ ಮೂಲಕ ಯಾಡ ಬೌದ್ಧಿಕವಾಗಿ, ದೈಹಿಕವಾಗಿ ಬೆಳೆದು ಆಕ್ರಮಣವನ್ನು ಪ್ರತಿರೋಧಿಸುವ ಶಕ್ತಿಯುಳ್ಳವನಾಗಿದ್ದಾನೆಂದು ಸೂಕ್ಷ್ಮವಾಗಿ ಗ್ರಹಿಸಬೇಕು. ಇಲ್ಲಿ ಮುಖ್ಯವಾದ ಸಂಗತಿಯೆಂದರೆ, ಈ ಇರುವೆಗಳನ್ನು ಯಾಡ ಸಾಯಿಸುವುದಿಲ್ಲ ಬದಲಾಗಿ ಬಿಡಿಸಿಕೊಳ್ಳುತ್ತಾನೆ. ಕೆಳವರ್ಗಗಳು ಯಾವಾಗಲೂ ಅಹಿಂಸಾ ಮಾರ್ಗವನ್ನು ಅನುಸರಿಸುತ್ತವೆ. ತಾನು ಬದುಕಿ ಮತ್ತೊಬ್ಬರಿಗೆ ಬದಕಲು ಬಿಡುವಂಥ ಮನೋಭಾವನೆಯನ್ನು ಹೊಂದಿರುತ್ತವೆ. ಉರುವಲು ಕಟ್ಟಿಗೆ ಮಾರಿ ಜೀವನ ಮಾಡುವವರನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅವರು ಅರಣ್ಯದೊಳಗಿನ ಮರಗಳನ್ನು ಕಡಿಯುವುದಿಲ್ಲ ಬದಲಾಗಿ ಒಣಗಿದ ಮರದ ರೆಂಬೆ, ಕೊಂಬುಗಳನ್ನು ಮಾತ್ರ ಕಡಿದು ಮರವನ್ನು

ಹಾಗೆ ಬೆಳೆಯಲು ಬಿಡುತ್ತಾರೆ. ಇದಕ್ಕೆ ಮಲೆನಾಡಿನ ಅರಣ್ಯಗಳಲ್ಲಿ ವಾಸ ಹೂಡಿರುವ ಬುಡಕಟ್ಟು ಜನಾಂಗ ಜೀವಂತ ಉದಾಹರಣೆ.[೧೨] ಮೇಲುವರ್ಗ ತನ್ನ ಹಿತಾಸಕ್ತಿ ಕಾಯ್ದುಕೊಳ್ಳಲು ಹಿಂಸೆಯನ್ನು ಮಾಡಲು ಹಿಂಜರಿಯುವುದಿಲ್ಲ. ಆ ಮೂಲಕ ದೌರ್ಜನ್ಯ, ಆಕ್ರಮಣವೆಸಗಿ, ತನಗೆ ಬೇಕಾದುದನ್ನು ಪಡೆಯುವ ಗುಣ ಹೊಂದಿದವರಾಗಿರುತ್ತಾರೆ. ಮೇಲುವರ್ಗ ತಾನು ಬದುಕುವುದರ ಜೊತೆಗೆ ಮತ್ತೊಬ್ಬರನ್ನು ಬದುಕಿಸುವ ಗುಣ ಹೊಂದಿದ್ದರೂ, ತನ್ನ ಅಡಿಯಾಳಾಗಿಯೇ ಅದನ್ನು ನಿರ್ವಹಿಸಿಕೊಳ್ಳುತ್ತದೆ ಎಂಬುದು ಸತ್ಯಾಂಶ. ಯಾಡ ಸ್ವತಂತ್ರ ನೆಮ್ಮದಿಯ ಬದುಕಿನಲ್ಲಿ ಸಕ್ಕರೆ ಹರಳುಗಳನ್ನು ಇರುವೆಗಳಿಂದ ಬಿಡಿಸಿಕೊಳ್ಳುವುದು ಆತನ ಪ್ರಜ್ಞೆಯ ಜಾಗೃತಿಯನ್ನು ಸೂಚಿಸುತ್ತದೆ.

ಯಾಡನಿಗೆ ವರ್ತಮಾನದ ಪ್ರಜ್ಞೆ ಬೆಳೆಯುತ್ತಿದ್ದಂತೆ "ಅವ್ವಾ ಅವ್ವ ಅದ್ಯಾಕನ ಈ ಕೆಲ್ಸ ಬ್ಯಾಸರಿಕ"[೧೩] ಎನ್ನುವ ಮಾತುಗಳು ಪ್ರಜ್ಞೆಯ ವಿಸ್ತಾರ ಹಾಗೂ ಉದ್ಯೋಗ ಬದಲಾವಣೆಯ ಸಂಕೇತವಾಗಿದೆ. ತಾನು ತೊಡಗಿಕೊಂಡಿದ್ದ ಹೋಟಲ್ ಉದ್ಯೋಗದಿಂದ ಅಧಿಕ ಲಾಭ ಕಾಣದೇ ಜೀವನ ಸಾಗುತ್ತಿತ್ತು. ಸಮಾಜದಲ್ಲಿ ಇತರರು ಬದುಕು ಸಾಗಿಸುವಂತೆ, ಆ ಮಾದರಿಯಲ್ಲಿ ತಾನು ಬದುಕು ಸಾಗಿಸುವ ಆಸೆಯಿಂದ, ಅನ್ಯ ಉದ್ಯೋಗದ ಕಡೆ ಹಂಬಲಿಸುವನು. ಆ ಮೂಲಕ ಎರಡೂ ಉದ್ಯೋಗದಿಂದ ಅಧಿಕ ಲಾಭ ಬರುವುದೆಂಬ ನಿರೀಕ್ಷೆಯಿಂದ 'ಈ ಕೆಲ್ಸ ಬ್ಯಾಸರಿಕ' ಎಂದು ಹೇಳುವ ಯಾಡನ ಮಾತು ಗಮನಾರ್ಹ ಸಂಗತಿಯಾಗಿದೆ. ಮತ್ತು ಪರ್ಯಾಯ ಹುಡುಕಾಟದ ಪ್ರತೀಕವಾಗಿದೆ.

ಕೆಳವರ್ಗ ಯಾವುದೇ ಒಂದು ಉದ್ಯೋಗಕ್ಕೆ ನೆಚ್ಚಿಕೊಂಡು ತಟಸ್ಥವಾಗಿರುವುದಿಲ್ಲ. ಬದಲಾಗಿ ತನ್ನ ದೈಹಿಕ ಶ್ರಮದ ಮೂಲಕ ಅನ್ಯ ಉದ್ಯೋಗಗಳ ಕಡೆ ಬದಲಾಗುತ್ತಿರುತ್ತವೆ. ತಾನು ತೊಡಗಿಕೊಂಡ ಉದ್ಯೋಗದಿಂದ ಪ್ರತಿಫಲ ಕಾಣದಿದ್ದಾಗ ಮತ್ತೊಂದು ಉದ್ಯೋಗದತ್ತ ಕ್ರಿಯಾಶೀಲವಾಗುತ್ತದೆ. ತಟಸ್ಥತೆ ಅಲ್ಲಿ ಕಾಣುವುದಿಲ್ಲ. ತನ್ನ ಸಮಸ್ಯೆಗಳ ಪರಿಹಾರಕ್ಕಾಗಿ ದೇವರಲ್ಲಿ ಹರಕೆ ಮಾಡುವ ಹಾಗೆ, ಯಾವುದೇ ಒಂದು ದೇವರಿಗೆ ಶ್ರದ್ಧೆ, ನಂಬಿಕೆಯನ್ನಿಟ್ಟು ಹರಕೆ ಹೊತ್ತರೂ ಫಲಕಾಣದಿದ್ದಾಗ, ಮತ್ತೊಂದು ದೇವರಿಗೆ ಹರಕೆ ಮಾಡುವುದು. ಹೀಗೆಯೇ ನಿರಂತರವಾಗಿ ಪ್ರತಿಫಲ ನೀಡುವ ದೇವರಿಗೆ ಹರಕೆ ಮಾಡುತ್ತಲೇ ಇರುತ್ತದೆ. ಪ್ರತಿಫಲ ಕೊಡುವ ದೇವರಿಗೆ ತಮ್ಮ ಜೀವಮಾನದವರೆಗೆ ನೆಚ್ಚಿಕೊಂಡು ಪೂಜಿಸುತ್ತವೆ. ಅದರಂತೆ ಉದ್ಯೋಗದಲ್ಲಿಯೂ ಇಂಥ ಗುಣವನ್ನು ಅಳವಡಿಸಿಕೊಂಡಿರುತ್ತದೆ. ಆದಾಯ ತರುವ ಉದ್ಯೋಗವನ್ನು ನೆಚ್ಚಿಕೊಂಡು ವಂಶಪರಾಂಪರ್ಯವಾಗಿ ವೃತ್ತಿಯನ್ನಾಗಿ ಆಶ್ರಯಿಸಿಕೊಳ್ಳುತ್ತವೆ. ಉದಾಹರಣೆಗೆ ಕಂಬಾರರು, ಕುಂಬಾರರು, ಮಡಿವಾಳ ಇತ್ಯಾದಿ. ಕಾತ ಚಿಕ್ಕಣ್ಣನವರ 'ಮುಂಜಾವು' ಕಾದಂಬರಿಯ ತಿಮ್ಮಾಜಿ ಕುಂಬಾರ ವೃತ್ತಿಯಲ್ಲಿ ತೊಡಗಿಸಿಕೊಂಡು, ಆ ವೃತ್ತಿಯನ್ನು ದೇವರೆಂದು ಪೂಜಿಸುವುದು ನೆನಪಿಸಬಹುದು.

ಹೀಗೆ ಕೆಳವರ್ಗ ತಮ್ಮ ವೃತ್ತಿಗಳಲ್ಲಿ ದೈಹಿಕ ಶ್ರಮ ಹಾಗೂ ಕ್ರಿಯೆಯ ಮೂಲಕ ಸ್ವಾವಲಂಬನೆಯ ಬದುಕನ್ನು ಕಂಡುಕೊಳ್ಳುತ್ತವೆ. ಅಂಬೇಡ್ಕರ್ ಹೇಳಿದ ಹಾಗೆ "ಸ್ವ ಪ್ರಯತ್ನದಿಂದ ತಮ್ಮ ಗುರಿ ಸಾಧಿಸುವೆನೆಂಬ ಹಠರಿಂದ, ಛಲದಿಂದ ಮುನ್ನುಗ್ಗಿ ತಮ್ಮ ಕಾಲ ಮೇಲೆ ತಾವು ನಿಲ್ಲಬಲ್ಲವೆಂಬ ದೃಢ ವಿಶ್ವಾಸದಿಂದ ದುಡಿದಾಗ ಮಾತ್ರ, ಹೋರಾಟ ನಡೆಸಿದಾಗ ಮಾತ್ರ ಅವರ ಉದ್ಧಾರ ಕಾರ್ಯ ಯಶಸ್ವಿಯಾದೀತು"[೯೪] ಎಂಬಂತೆ 'ಯಾಡ'ನು ಹೋಟೆಲ್ ಉದ್ಯೋಗ ತನ್ನ ತಾಯಿಗೆ ವಹಿಸಿ ತಾನು ಕುರಿಮರಿಗಳನ್ನು ಸಾಕುವ ಕಾಯಕಕ್ಕೆ ತೊಡಗಿಕೊಂಡು, ದನಕರುಗಳ ಕಳ್ಳತನ ಮಾಡಿ ಹತ್ತಿರದ ಪೇಟೆಯಲ್ಲಿ ಮಾರಿ ಹಣ ಸಂಪಾದನೆ ಮಾಡುತ್ತಾನೆ. ಈ ಉದ್ಯೋಗದಿಂದ ಆರ್ಥಿಕವಾಗಿ ಸಾಮಾಜಿಕವಾಗಿ ಪ್ರಬಲನಾಗುತ್ತಾ ಯಾಡ, ಯಾಡೇ-ಗೌಡನಾಗಿ ಪರಿವರ್ತಿತವಾಗುವುದನ್ನು ಕಾದಂಬರಿ ಗುರ್ತಿಸುತ್ತದೆ. ಯಾಡನ ಈ ತಿರುವು ಇಡೀ ಕೆಳ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಎಚ್ಚರದ ಪ್ರತೀಕವಾಗಿ ಕಾಣುತ್ತದೆ.

ದಲಿತ ಬಂಡಾಯ ಕಾದಂಬರಿಗಳಲ್ಲಿ ಮೇಲೆ ಹೆಸರಿಸಿದ ಉದ್ಯೋಗಗಳಲ್ಲದೆ ತೀರಾ ಕೆಳಮಟ್ಟದ ಉದ್ಯೋಗಗಳಲ್ಲಿ ನಿರತಗೊಂಡಿರುವ ಜನವರ್ಗವನ್ನು ಕಾಣುತ್ತೇವೆ. ದೇವನೂರು ಮಹಾದೇವರ 'ಕುಸುಮ ಬಾಲೆ'ಯಲ್ಲಿ ಅಮಾಸ ಸ್ತ್ರೀಯರ ಮುಟ್ಟಿನ ಸ್ವಾಲೆಗಳನ್ನು ಶುಚಿಗೊಳಿಸಿ ಸಾಬರಿಗೆ ಮಾರುವ ಮೂಲಕ ಹಣ ಸಂಪಾದನೆ ಮಾಡುವುದು ಗ್ರಹಿಕೆಗೆ ಬರುತ್ತದೆ. ಲೇಖಕ ನಿರೂಪಿಸುವಂತೆ

"ಅಮಾಸನ ಈ ಕಾಯಕವು ಕೂಲಿ ಕೆಲಸಕ್ಕಿಂತ ಹೆಚ್ಚು ಲಾಭದಾಯಕವಾಗಿಯೂ ಅನಿಶ್ಚಯತೆ ಇಲ್ಲದಾಗಿಯೂ ಹಾಗೂ ಯಾರ್ಗಾರು ಮುಟ್ಟುನಿಂತು ಸಂಭವಿಸೋಲುಕ್ಕಾನಿಗ ಪ್ರಕೃತಿಯು ಹೊಸ ಗಿರಾಕಿ ಕೊಡಸ್ತ ಅದು ಅಲ್ಲಲ್ಲಿಗೆ ಸಮನಾಗಿ ಇದು ಅಮಾಸನ ಹೊಟ್ಟೆ, ಬಟ್ಟೆ, ಬೀಡಿ, ಸಿನಿಮಾ, ಸೈಕಲ್ ಬಾಡ್ಗಿಗೂ ಉಳುದುದು ಇವನ ನೆಚ್ಚಿ ಮಾರಿ ಗುಡಿ ನೆಲಕಂಟಿ ಬಾಯ ಬುಡ್ಕಂಡಿದ್ದ ಕುರಿಯಯ್ಯಾಗ ಗಂಜಿ ನೀರ ಕಾಣಿಸ್ತಿತ್ತು"[೯೫]

ಹೀಗೆ ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಂಡರೂ ಸಮಾಜದಲ್ಲಿ ಇಂಥ ವೃತ್ತಿ ಕೈಗೊಂಡವರನ್ನೂ ತಿರಸ್ಕಾರ ಮನೋಭಾವದಿಂದ ನೋಡಲಾಗುತ್ತದೆ. ಈ ಪ್ರಜ್ಞೆ ಅಮಾಸನಲ್ಲಿ ಮೂಡಿರುವುದರಿಂದಲೇ ತೊಡಗಿಸಿಕೊಂಡಿರುವ ತನ್ನ ಕಾಯಕವನ್ನು ಬಹಿರಂಗಗೊಳಿಸಿಕೊಂಡಿರಲಿಲ್ಲ. ಮುಟ್ಟಿನ ಸ್ವಾಲೆಗಳನ್ನು ಚೀಲದಲ್ಲಿಟ್ಟುಕೊಂಡು ಸೈಕಲ್ ಮೇಲೆ ಹೋಗುತ್ತಿದ್ದರೆ ಯಾರಾದರೂ 'ಏನುಡಾ' ಎಂದು ಕೇಳಿದರೆ "ಐ ಚರ್ಮ ಕನ್ನಿ ಬುದ್ಧೆ"[೯೬] ಎಂದು ಸ್ವಾಭಿಮಾನ ವ್ಯಕ್ತಪಡಿಸುತ್ತಿದ್ದನು. ಕೆಳವರ್ಗ ತಾನು ಎಂಥ ಕನಿಷ್ಠ ಮಟ್ಟದ ಉದ್ಯೋಗದಲ್ಲಿ ತೊಡಗಿಕೊಂಡರೂ ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿರುತ್ತದೆಂಬುದನ್ನು

ಗಮನಿಸಬಹುದು. ಅಮಾಸನಿಗೆ ತಾನು ಮಾಡುತ್ತಿರುವ ವೃತ್ತಿ ಹೀನಮಟ್ಟದ್ದೆಂಬ ಅರಿವು ಮೂಡುತ್ತಿದ್ದರೂ ಬದುಕಿನ ಅನಿವಾರ್ಯತೆಯಿಂದಾಗಿ 'ಚರ್ಮ' ಎಂದು ಸುಳ್ಳು ಹೇಳುವುದರ ಮೂಲಕ ತನ್ನ ಕೆಲಸವನ್ನು ಮುಂದುವರಿಸುತ್ತಾನೆ. ಈ ವೃತ್ತಿಗೆ ತೊಡಗಿಕೊಳ್ಳುವ ಮೊದಲು ಕುರಿಯಯ್ಯನ ನೆರಳಲ್ಲಿ ಬೆಳೆದು ದೊಡ್ಡವನಾಗಿ ಕುಟ್ಟ್ಯೋ ತಮ್ಮಟೆ ಮುಂದೆ ಕುಣೀವ ಕಾಯಕ ಮಾಡುತ್ತಿದ್ದ ಹಾಗೆ ಕುಣಿಯುವುದರಿಂದ ಅವರಿವರ ಮನೆಗಳಿಂದ ನಿತ್ಯವೂ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಆರ್ಥಿಕವಾಗಿ, ದುರ್ಬಲರಾದ ಕೆಳಸಮುದಾಯ ಮನೆ ಮನೆಗಳಿಗೆ ಅಲೆದು ಹಾಡಿ, ಕುಣಿದು ಹೊಟ್ಟೆ ತುಂಬಿಸಿಕೊಳ್ಳುವುದನ್ನು ಅಮಾಸನ ಮೂಲಕ ಗುರ್ತಿಸುತ್ತದೆ. ಉದಾಹರಣೆಗೆ ಆಂಜನೇಯನ ವೇಷಧರಿಸಿ, ತಾಳಕ್ಕೆ ತಕ್ಕಂತೆ ಕುಣಿಯುವವರು, ಬೀದಿ ಬೀದಿಗಳಲ್ಲಿ ಸರ್ಕಸ್ ಪ್ರದರ್ಶನ ಮಾಡುವವರು, ಗೆಜ್ಜೆ ಕಟ್ಟಿಕೊಂಡು ಸಿನಿಮಾ ಹಾಡಿಗೆ ತಕ್ಕಂತೆ ಕುಣಿಯುವುದರ ಮೂಲಕ ತಮ್ಮಲ್ಲಿ ಅಡಗಿರುವ ಪ್ರತಿಭೆಯನ್ನು ಪ್ರದರ್ಶಿಸುತ್ತಾರೆ. ಕುಣಿಯುವ ಕಾಯಕ ಸಾಮಾಜಿಕವಾಗಿ ಕನಿಷ್ಠವಾದರೂ, ತಮ್ಮ ಅಸ್ತಿತ್ವವನ್ನು ಒಪ್ಪದ ವ್ಯವಸ್ಥೆಯ ಎದುರು ತಮ್ಮ ಅಸ್ತಿತ್ವವನ್ನು ತೋರಿಸಲು ತಮ್ಮ ಸೃಜನಶೀಲತೆಯನ್ನು, ಪ್ರತಿಭೆಯನ್ನು ಮೆರೆಸಲು ದಲಿತವರ್ಗವು ಬಳಸಿಕೊಳ್ಳುವ ಅವಕಾಶವೂ ಆಗಿದೆ. ಕೋಣ ಕಡಿಯುವ ಮೂಲಕ, ಹೆಂಡ ಕುಡಿದು ಬಯ್ಯುವ ಮೂಲಕ, ವ್ಯವಸ್ಥೆಯ ಮೇಲಿನ ತಮ್ಮ ಅಸಹನೆಯನ್ನು ಹೊರ ಚೆಲ್ಲುವ ಸಂದರ್ಭವೂ ಆಗಿದೆ. ಹುಲಿಯಾಗಿ ಕನಸಿನಲ್ಲಿ ಬಂದು, ಧಣಿಗಳ ನಿದ್ದೆಗೆಡಿಸುವ ಸಂದರ್ಭವೂ ಆಗಿದೆ. 'ಅಮಾಸ ಕತೆ'ಯಲ್ಲಿ ಅಮಾಸ ಮಾರಿದೇವತೆಯ ಜಾತ್ರೆಯ ಸಂದರ್ಭದಲ್ಲಿ ಹುಲಿವೇಷ ಹಾಕಿಕೊಂಡು ಕುಣಿದು ಗೌಡರಿಗೆ ಆಶ್ಚರ್ಯವನ್ನುಂಟು ಮಾಡಿದ್ದನ್ನು ಇಲ್ಲಿ ನೆನಪಿಸಬಹುದು. ಇಂಥ ಪ್ರತಿಭೆಯುಳ್ಳವರು ಬೀದಿಯನ್ನೇ ವೇದಿಕೆ ಮಾಡಿಕೊಂಡರೆ, ಕೆಲವರು ವೇದಿಕೆಯಲ್ಲಿ ಕುಣಿಯುವ ಅವಕಾಶವನ್ನು ಪಡೆದವರೂ ಇದ್ದಾರೆ. ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ರಂಗಭೂಮಿ ನಟಿ ಮರಿಯಮ್ಮನ ಹಳ್ಳಿ ನಾಗರತ್ನಮ್ಮರಂತವರು ಬೀದಿ ಕುಣಿತದಿಂದ ರಂಗಭೂಮಿ ಪ್ರವೇಶಿಸುವ ಮೂಲಕ ತಮ್ಮ ಪ್ರತಿಭೆಯನ್ನು ಹೊರಗೆಡವಿ ಖ್ಯಾತಿಯನ್ನೂ ಪಡೆದಿದ್ದಾರೆ.

ಕಾಲ ಬದಲಾದಂತೆ ಅಮಾಸನು ಬದಲಾಗಿ ನಾಗರೀಕತೆಯ ಬದುಕಿನ ಸ್ಥಿತ್ಯಂತರಕ್ಕೊಳಗಾಗುತ್ತಾನೆ. ಹಾಗಾಗಿ ಆ ಬದುಕಿಗೆ ತಕ್ಕಂತೆ ಹಣ ಮುಖ್ಯವಾದಾಗ ಆಯಾಸವಿಲ್ಲದೆ ಸ್ತ್ರೀಯರ ಮುಟ್ಟಿನ ಸ್ಯಾಲೆಗಳನ್ನು ಶುಚಿಗೊಳಿಸಿ ಸಾಬರಿಗೆ ಮಾರುವ ಕೆಲಸ ಸ್ವತಃ ತಾನೇ ಕಂಡುಕೊಂಡಿದ್ದ. ಈ ಉದ್ಯೋಗ ಮುಂದುವರಿಯುತ್ತಿರುವಂತೆಯೇ ನಂಜನಗೂಡಿನಲ್ಲಿ ದಲಿತ ಸಂಘ ಸ್ಥಾಪನೆಯಾಯಿತು. ಹಾಗಾಗಿ ಅವರ ಪ್ರಭಾವಕ್ಕೆ ಒಳಗಾಗಿ ತನ್ನ ಉದ್ಯೋಗವನ್ನು ಕೈ ಬಿಡುತ್ತಾನೆ. ಲೇಖಕ ನಿರೂಪಿಸುವಂತೆ,

“ದಲಿತ ಸಂಘ ಕೂಡಿದ ಅಮಾಸ ತಿಂಗಳ ಕಾಯಕದಲ್ಲೂ ಮೂರ್‍ಬ್ಬಿನ ಕೋತವಾಗ್ತ ದುಡ್ಡು ಕಾಸು ಓಡಾಡುವುದು ನಿಲುಗಡೆಯಾಗಿ ಅಮಾಸನ ಆರ್ಥಿಕ ಸ್ಥಿತಿಯು ಡಲ್ ಹೊಡೀತಾ ಬೀಡಿಗೂ ಭಂಗ ಪಡಬೇಕಾದ ಸ್ಥಿತಿಗೆ ತಲುಪಿದನು.”[೧೭]

ಹಾಗಾಗಿ ಅಮಾಸ ತನ್ನ ಉದ್ಯೋಗ ಬದಲಾಯಿಸಿಕೊಂಡನು.

ಬದುಕಿಗಾಗಿ ದುರ್ಬಲವಾದ ಕೆಳವರ್ಗಗಳು ಎಂಥ ಕನಿಷ್ಠಮಟ್ಟದ ಉದ್ಯೋಗವನ್ನಾದರೂ ಸ್ವಾಭಿಮಾನದಿಂದ ಮಾಡಲು ಸಿದ್ಧವಿರುತ್ತವೆಂದು ಅಮಾಸನ ಮೂಲಕ ಗ್ರಹಿಕೆಗೆ ಬರುತ್ತದೆ. ಆ ಮೂಲಕ ನಗರ-ಪಟ್ಟಣಗಳಲ್ಲಿಯ ಶೌಚಾಲಯ ಶುಚಿಗೊಳಿಸುವ, ಚರಂಡಿ (Drainage) ದುರಸ್ತಿ ಮಾಡುವ, ಬೀದಿ-ಬೀದಿಗಳಲ್ಲಿ ಕಸಗುಡಿಸುವ ಕೆಲಸವನ್ನು ದುರ್ಬಲರಾದ ಕೆಳವರ್ಗಗಳು ವೃತ್ತಿಯಾಗಿ ಆಶ್ರಯಿಸಿಕೊಂಡಿವೆ. ವೃತ್ತಿಯೇತರ ಸಮುದಾಯಗಳು ಇಂಥ ವೃತ್ತಿಗೆ ಕೀಳಾಗಿ ಹೇಸಿಗೆ ಪಡುವುದು ಸಹಜ. ಆದರೆ ಅದೇ ವೃತ್ತಿಯಲ್ಲಿ ತೊಡಗಿಕೊಂಡವರಿಗೆ ಅದು ಶ್ರದ್ಧೆಯಿಂದ ಕೂಡಿದ್ದಾಗಿರುತ್ತದೆ. ಇವರೂ ಸಹ ಹೇಸಿಗೆ ಪಡುವಂತಿದ್ದರೆ, ಪರಿಸ್ಥಿತಿ ಹೇಗಿರುತ್ತಿತ್ತು ಎಂಬುದು ಪ್ರಶ್ನೆಯಾಗುತ್ತದೆ. ಪ್ರಶ್ನಾತೀತ ವೃತ್ತಿಯನ್ನು ಸಮರ್ಥವಾಗಿ ನಿರ್ವಹಿಸುವ ವರ್ಗಗಳಿಗೆ ಸಮಾಜ ಗೌರವಿಸುವುದಿರಲಿ, ಕೆಲಸಕ್ಕೆ ತಕ್ಕಂತೆ ಹಣವನ್ನು ನೀಡಲು ಹಿಂಜರಿಯುತ್ತದೆ. ಇವರಿಗೆ ಬೇಕಾಗಿರುವುದು ಬದುಕಿಗಾಗಿ ಹಣ, ಆ ಮೂಲಕ ಬದುಕಿನ ಅನನ್ಯತೆಯನ್ನು ಕಂಡುಕೊಳ್ಳುತ್ತವೆ. ಕೆಳವರ್ಗದ ವಚನಕಾರರು ಕೂಡಾ ತಮ್ಮನ್ನು ಗುರ್ತಿಸಿಕೊಂಡಿದ್ದು, ತಮ್ಮ ವೃತ್ತಿಯ ಮೂಲಕವೆಂಬುದು ಸತ್ಯ ಸಂಗತಿ. ಆ ಮೂಲಕ ಆಧ್ಯಾತ್ಮವನ್ನು ಕಂಡುಕೊಂಡು, ತಮ್ಮ ವೃತ್ತಿಯಲ್ಲಿ ಶ್ರದ್ಧೆ, ನಿಷ್ಠೆಯಿಂದ ದುಡಿದು ಮಾದರಿಯಾಗಿದ್ದಾರೆ. ಉದಾಹರಣೆಗೆ ಡೋಹರ ಕಕ್ಕಯ್ಯ, ಸೂಳೆ ಸಂಕವ್ವ, ಬಾಚಿಕಾಯಕದ ಬಸವಯ್ಯ, ಅಂಬಿಗರ ಚೌಡಯ್ಯ ಮೊದಲಾದವರು.

ಇಂಥ ಪ್ರಸಂಗವನ್ನುಳ್ಳ ಡಿ.ಎ. ಶಂಕರರವರ ಅನುವಾದಿತ ಕಾದಂಬರಿ ‘ಅಸ್ಪೃಶ್ಯ’ ಗಮನಾರ್ಹ. ಈ ಕಾದಂಬರಿಯ ‘ಬಾಕ’ ಎನ್ನುವ ದಲಿತ ಯುವಕ ನಿಷ್ಠೆಯಿಂದ ಶೌಚಾಲಯವನ್ನು, ಊರನ್ನು, ಗುಡಿಯನ್ನು ಸ್ವಚ್ಛಗೊಳಿಸುವ ಕಾಯಕದಲ್ಲಿ ನಿರತನಾಗಿರುತ್ತಾನೆ. ಆ ಮೂಲಕ ತನ್ನ ಕುಟುಂಬವನ್ನು ನಿಭಾಯಿಸುತ್ತಿರುವಾಗ ಒಮ್ಮೆ ಹೆಚ್ಚು ಕೆಲಸದ ಒತ್ತಡವಿರುವುದರಿಂದ ತನ್ನ ತಂಗಿ ‘ಸೋಹಿನಿ’ ಅವನ ಸಹಾಯಕ್ಕೆ ಬರುತ್ತಾಳೆ. ರೂಪವಂತೆಯಾದ ಸೋಹಿನಿಯನ್ನು ಆ ಗುಡಿಯ ಪೂಜಾರಿ ಅತ್ಯಾಚಾರ ಮಾಡಲು ಪ್ರಯತ್ನಿಸುತ್ತಾನೆ. ಸೋಹಿನಿ ಅಸಹಾಯಕಗಳಾಗಿ, ಕಣ್ಣೀರಿಡುತ್ತಾ ಬಾಕನಿಗೆ ತಿಳಿಸುವ ಸಂದರ್ಭದೊಳಗೆ ಬಾಕ “ಲೇ ನಾಯಿ ಬ್ರಾಹ್ಮಣ! ಕೊಂದು ಹಾಕುವೆ”[೧೮] ನೆಂದು ಸೋಹಿಯ ಎದುರಿಗೆ

ಉದ್ಗರಿಸಿ, ಸಿಡಿದು ಗುಡಿಯ ಅಂಗಳಕ್ಕೆ ನುಗ್ಗಿ ಅರ್ಚಕನನ್ನು ಹುಡುಕುವ ಪರಿಯು ಶ್ರಮಸಂಸ್ಕೃತಿಯ ರೋಷ ಸ್ವಾಭಿಮಾನ ಮತ್ತು ಎಚ್ಚರವನ್ನು ಪ್ರತಿನಿಧಿಸುತ್ತದೆ. ದೇವಾಲಯದ ಅಂಗಳದೊಳಗೆ ಆವೇಶ ಭರಿಸಿಕೊಂಡು ನಿಂತಿರುವಾಗ, ದೌರ್ಜನ್ಯವೆಸಗಿದ ಅರ್ಚಕ ಕಾಣದೆ ಅಲ್ಲಿ ಯಾರ ಸುಳಿವೂ ಇಲ್ಲದೇ ನಿಶ್ಶಬ್ದವಾಗಿತ್ತು. ದೇವಾಲಯದ ಗೋಪುರ ಮೇಲಿನ ವಿಗ್ರಹಗಳು ಮಾತ್ರ ಕಾಣಿಸುತ್ತಿದ್ದವು. ಆ ವಿಗ್ರಹಗಳನ್ನು ಒಂದೊಂದಾಗಿ ನೋಡುತ್ತಿರುವಂತೆಯೇ ಒಮ್ಮಲೆ ಮೇಲ್ಜಾತಿಯ ಸಮೂಹ ಸ್ಮೃತಿ ಪಟಲಕ್ಕೆ ಬಂದು ತನ್ನಲ್ಲಿ ಆವರಿಸಿಕೊಂಡಿದ್ದ ಸಿಟ್ಟು, ಆವೇಶ, ಕ್ರಮೇಣವಾಗಿ ಇಳಿದು ಹೋಗುತ್ತದೆ. ಹೀಗೆ ಇಳಿಯಲು ತನ್ನ ಬದುಕು ಮೇಲು ವರ್ಗವನ್ನೇ ಅವಲಂಬಿಸಿರುವುದು ಕಾರಣವಾಗಿದೆ. ಬಾಕ ದೈಹಿಕವಾಗಿ ಮಾನಸಿಕವಾಗಿ ಸದೃಢನಾಗಿದ್ದರೂ ಆರ್ಥಿಕವಾಗಿ, ಸಾಮಾಜಿಕವಾಗಿ ದುರ್ಬಲನಾಗಿರುತ್ತಾನೆ. ಈ ದುರ್ಬಲತೆಯು ನಿರ್ವೀರ್ಯನನ್ನಾಗಿ ಮಾಡುತ್ತದೆ. "ಬೆಳಿಗ್ಗೆ ಅವರು ನನಗೆ ಅವಮಾನ ಮಾಡಿದರು. ನಾನು ನಡೆಯುತ್ತಿದ್ದಾಗ ಯಾರೋ ಒಬ್ಬನನ್ನು ಮುಟ್ಟಿ ಬಿಟ್ಟೆ. ಅವನು ನನ್ನನ್ನು ಹೊಡೆದ. ಜನ ನನ್ನ ಸುತ್ತ ಗುಂಪು ಕಟ್ಟಿ ಬಯ್ದರು"[೧೯] ಇಂಥ ಸಾಮಾಜಿಕ ಅಸಮಾನತೆಗೆ ಬಲಿಯಾಗಿ ಅಪಮಾನಕ್ಕೊಳಗಾಗಿ ಅನ್ಯ ಉದ್ಯೋಗಕ್ಕೆ ಬದಲಾಗಲು ನಿರ್ಧರಿಸುತ್ತಾನೆ. ತನ್ನ ನಿರ್ಧಾರವನ್ನು ತಂದೆ 'ಲಾಕ'ನಲ್ಲಿ ಪ್ರಸ್ತಾಪಿಸುತ್ತಾನೆ. ಇದಕ್ಕೆ ತಂದೆಯು ಪ್ರತಿರೋಧ ವ್ಯಕ್ತಪಡಿಸಿ, "ಬ್ರಾಹ್ಮಣರು ಪುರಾತನಕಾಲದಿಂದ ವೇದಪುರಾಣಗಳನ್ನು ಓದಿ ಕರಗತ ಮಾಡಿಕೊಂಡ ಮೇಧಾವಿಗಳು. ಅವರ ಸೇವೆ ಮಾಡಲು ಹಿಂಜರಿದರೆ ದೇವರು ನಮಗೆ ಶಿಕ್ಷಿಸದೇ ಬಿಡಲಾರ" ಎಂದು ಹೇಳಿ ಬಾಕನ ಆಸೆಗೆ ಅಡ್ಡಗೋಡೆಯಾಗುತ್ತಾನೆ. ಲಾಕನ ಅಸಹಾಯಕ ಸ್ಥಿತಿ ಇಡೀ ಅಸ್ಪೃಶ್ಯರನ್ನು 'ಗುಲಾಮಗಿರಿ'ಗೆ ಒಡ್ಡುವತ್ತ ಆಸಕ್ತಿವಹಿಸುತ್ತದೆ. ಪ್ರಜ್ಞೆಯ ಜಾಗೃತಿಯನ್ನು ತಡೆಯುತ್ತದೆ. ಈ ಶರಣಾಗತಿಯ ಸ್ಥಿತಿ ತಲುಪಲು ಮೇಲು ವರ್ಗಗಳ ಮೇಲೆ ತಾವು ಇಟ್ಟಿರುವ 'ಪೂಜ್ಯತಾತೆ' ಭಾವನೆಯೇ ಮುಖ್ಯಕಾರಣವಾಗುತ್ತದೆ.' ಇದನ್ನು ಸದುಪಯೋಗಪಡಿಸಿಕೊಂಡ ಮೇಲುವರ್ಗ ದಲಿತರನ್ನು ಶೋಷಣೆ ಮಾಡುತ್ತಿದೆ. ದಲಿತರು ಪೂಜ್ಯತೆಯ ಬದಲು ಪ್ರಜ್ಞೆಯನ್ನು ಮೂಡಿಸಿಕೊಳ್ಳಬೇಕಾಗಿರುವುದು ಇಂದು ಜರೂರಾಗಿದೆ. ಒಬ್ಬ ಅಸ್ಪೃಶ್ಯ ಬದಲಾವಣೆಯಾಗುತ್ತಿದ್ದಾನೆಂದರೆ, ಅವನಲ್ಲಿ ಪ್ರಜ್ಞೆ ಮೂಡುತ್ತಿದೆಯಂತಲೇ ಅರಿಯಬೇಕಾಗಿದೆ. ಬಾಕನು ಉದ್ಯೋಗ ಬದಲಾವಣೆಗೆ ಎಷ್ಟೇ ಹಾತೊರೆದರೂ ಸ್ವತಃ ತಂದೆಯೇ ನಿರಾಕರಿಸುತ್ತಾನೆ. ಈ ನಿರಾಕರಣೆಯಿಂದ ಬೇಸತ್ತ ಬಾಕ ಊರು ಬಿಟ್ಟು ಹೋಗುವಾಗ ಅದೇ ಊರಿನಲ್ಲಿ ಗಾಂಧೀಜಿಯವರ "ಅಸ್ಪೃಶ್ಯತಾ ನಿವಾರಣಾ" ಭಾಷಣ ನಡೆಯುತ್ತಿರುತ್ತದೆ. ಗಾಂಧೀಜಿಯವರ ಭಾಷಣ ಆಲಿಸಿದ ಬಾಕ "ಯಾವ ಊರಲ್ಲಿ ಅವರು ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಬಂದಿದ್ದರೋ ಅದೇ

ಊರಿನ ಮನುಷ್ಯನೊಬ್ಬ ತಾನು ಅಕಸ್ಮಾತ್ ಅವನನ್ನು ಮುಟ್ಟಿದ್ದಕ್ಕೆ ಹೇಗೆ ಹೊಡೆದ ಎಂದು ಹೇಳುತ್ತಿರುವ ಚಿತ್ರ ಕಲ್ಪಿಸಿಕೊಂಡ. ಬಹುಶಃ ಮಹಾತ್ಮರು ಆ ಮನುಷ್ಯನನ್ನು ಶಿಕ್ಷಿಸಬಹುದು. ಅಥವಾ ಕಡೇ ಪಕ್ಷ ಈ ಊರಿನ ಜನರನ್ನು ಬೈಯಬಹುದು. ಈ ಜನ ತನ್ನನ್ನು ಇಂದು ಬೆಳಿಗ್ಗೆ ಕಂಡಂತೆ ಇನ್ನು ಮುಂದೆ ಕಾಣದಿರಬಹುದು'[೨೦] ಎಂಬ ಆಶಾಗೋಪುರ ಕಟ್ಟಿಕೊಂಡ. ಆದರೆ, ಗಾಂಧೀ 'ಬಾಕ' ಭಾವಿಸಿಕೊಂಡಂತೆ ಮಾಡದೇ ಅಸ್ಪೃಶ್ಯರು ಹಿಂದೂಗಳ ಅವಿಭಾಜ್ಯ ಅಂಗ. ಹಾಗಾಗಿ ಅವರನ್ನು ಸಮಾನರಾಗಿ ಕಾಣುವಂತೆ ಹೇಳಿದ್ದು. ಬಾಕನಿಗೆ ಗಾಂಧಿಯ ಮೇಲೆ ಅಪೂರ್ವ ವಿಶ್ವಾಸ ಮೂಡುತ್ತದೆ. ಈ ಊರಿನಲ್ಲಿ ಅಸ್ಪೃಶ್ಯರ ಪರವಾಗಿ ಮಾತನಾಡಿದ್ದು ಇದೇ ಮೊದಲಿಗೆ. ಆ ಮೂಲಕ ಸ್ಫೂರ್ತಿ ಭರಿಸಿಕೊಂಡು "ಗಾಂಧಿ ಹೇಳಿದ್ದನ್ನೇ ಮಾಡುತ್ತಾ ಹೋಗುತ್ತೇನೆ; ಆದರೆ ನಾನೆಂದೂ ಕಕ್ಕಸು ತೊಳೆಯುವುದನ್ನು ಬಿಡುವಂತೆಯೇ ಇಲ್ಲವೇ"[೨೧] ಎಂಬ ಆತಂಕ ಮತ್ತೇ ಮತ್ತೇ ತನ್ನ ಮನಸ್ಸಿನಾಳದಲ್ಲಿ ಹೋರಾಟ ಮಾಡುತ್ತಿತ್ತು. ಶಿವರಾಮ ಕಾರಂತರ 'ಚೋಮನದುಡಿ'ಯ ಚೋಮನು ಭೂಮಿ ಊಳುವ ಕನಸು ಕಂಡು, ಭೂಮಿ ಊಳದೇ ಸಾವನ್ನಪ್ಪುತ್ತಾನೆ. ಜಾತಿ ವ್ಯವಸ್ಥೆಯಲ್ಲಿ ದಲಿತರು ಎಷ್ಟೇ ಸದೃಢವಾಗಿದ್ದರೂ, ಸಮಾಜ ಅವರ ಕನಸುಗಳನ್ನು ಚಿವುಟಿ ಹಾಕಿ ಬಿಡುತ್ತವೆ. ವಯಸ್ಸಾದ ಚೋಮ ಕನಸ್ಸನ್ನು ಕಂಡು ಸಾವನ್ನಪ್ಪಿದರೆ, ಇನ್ನೂ ಹರೆಯದ ಯುವಕ ಬಾಕ ತನ್ನ ಆಸೆಯ ಕನಸ್ಸನ್ನು ಹೊತ್ತು, ಮನಸ್ಸಿನಲ್ಲಿಯೇ ಹೋರಾಡುತ್ತಲೇ ಅದೇ ಕಾಯಕದಲ್ಲಿ ಮುಂದುವರಿಯುತ್ತಾನೆಂದು ಕಾದಂಬರಿ ಗುರ್ತಿಸುತ್ತದೆ. ಬಾಕನ ಹಾಗೆ ಎಷ್ಟೋ ಅವಮಾನಿತ ಸಮುದಾಯಗಳು ಕನಸ್ಸನ್ನು ಹೊತ್ತು ಅವಕಾಶಗಳಿಗಾಗಿ ಕಾಯುತ್ತಿವೆ. ಅಲ್ಲಲ್ಲಿ ಅವಕಾಶಗಳು ಒದಗಿ ಬಂದರೂ ತಮ್ಮ 'ಸಂಪ್ರದಾಯ' ಜಡತ್ವದಿಂದಾಗಿ ಹಿಂದುಳಿದಿದ್ದಾರೆ. ಆ ಮೂಲಕ ತಮ್ಮಲ್ಲೇ ಆಂತರಿಕವಾಗಿ ಕೀಳು ಭಾವನೆ ಬೆಳೆಸಿಕೊಳ್ಳುತ್ತಿದ್ದಾರೆ.

ತಮ್ಮಲ್ಲಿ ಆಧರಿಸಿಕೊಂಡಿರುವ ಕೀಳು ಭಾವನೆಯಿಂದಲೇ ಸಮಾಜದೊಂದಿಗೆ ಮುಖಾಮುಖಿಯಾಗಲು ಪರದಾಡುತ್ತಿವೆ. ದೈಹಿಕವಾಗಿ ಸದೃಢವಾದರೂ ದುಡಿಮೆಗೆ ತಕ್ಕ ಪ್ರತಿಫಲ ಕಾಣದೇ ಆರ್ಥಿಕ ಸಮಸ್ಯೆಯನ್ನು ಅನುಭವಿಸುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಇಂಥ ಸಮಸ್ಯೆಗಳು ತೀವ್ರವಾಗಿವೆ. ಹೀಗಾಗಿ ಆರ್ಥಿಕವಾಗಿ ದುರ್ಬಲವಾಗಿರುವ ವರ್ಗ ತನ್ನ ಸಮಸ್ಯೆಗಳ ಪರಿಹಾರಕ್ಕೆ ಮೇಲುವರ್ಗಗಳನ್ನು ಅವಲಂಬಿಸಿರುತ್ತವೆ. ಹೀಗೆ ಅವಲಂಬಿತವಾಗುವುದರಿಂದ ಬದುಕು ದುರ್ಬಲವಾಗುವ ಪ್ರಸಂಗವನ್ನು ಕಾದಂಬರಿಯು ಚಿತ್ರಿಸುತ್ತದೆ. ಈ ಕಾದಂಬರಿಯ 'ಲಕ್ಷ್ಮಿ' ನಪುಂಸಕ ಗಂಡನನ್ನು ಕಟ್ಟಿಕೊಂಡು ಬಡತನದ ಬವಣೆಯಲ್ಲಿ ಬೆಂದು ಹೋಗಿರುತ್ತಾಳೆ. ಒಟ್ಟು ಸಂಸಾರದ ಹೊಣೆಯನ್ನು ತಾನೇ

ನಿರ್ವಹಿಸುತ್ತಿರುತ್ತಾಳೆ. ಸಾಹುಕಾರ ಸೀನಪ್ಪನ ಹೊಲದಲ್ಲಿ ಕೃಷಿ ಕೂಲಿಯಾಳಾಗಿ ಹಣ ಸಂಪಾದನೆ ಮಾಡುತ್ತಾಳೆ. ಲಕ್ಷ್ಮೀ ಆ ಮೂಲಕ ಹಸಿವಿನ ಸಮಸ್ಯೆಯನ್ನು ಪರಿಹರಿಸಿಕೊಂಡರೂ ಸಾಹುಕಾರನ ದುರಾಸೆಯ ಮೂಲಕ ಗಂಡನನ್ನು ಕಳೆದುಕೊಳ್ಳುವ ದಾರುಣ ಪರಿಸ್ಥಿತಿಯನ್ನು ಕಾದಂಬರಿ ಬಿಚ್ಚಿ ತೋರಿಸುತ್ತದೆ.

ಸೋತ ಸಮುದಾಯಗಳು ಮೇಲುವರ್ಗಗಳನ್ನು ಎಷ್ಟು ಅವಲಂಬಿಸುತ್ತವೆಯೋ ಅಷ್ಟೇ ಶೋಷಣೆಗೆ ಒಳಗಾಗುತ್ತವೆಂಬುದಕ್ಕೆ ಲಕ್ಷ್ಮಿಯು ಸಾಕ್ಷಿಯಾಗುತ್ತಾಳೆ. ಸಾಹುಕಾರ ಸೀನಪ್ಪ ಲಕ್ಷ್ಮಿಯನ್ನು ಒಲಿಸಿಕೊಳ್ಳುವ ಹುನ್ನಾರದಿಂದ ಲಕ್ಷ್ಮಿಗೆ ಇತರ ಆಳುಗಳಿಗೆ ನೀಡುವ ಕೂಲಿಗಿಂತ ಹೆಚ್ಚಾಗಿ ಕೂಲಿ ಕೊಡುವುದು ಹಾಗೂ ಲಕ್ಷ್ಮಿ ಗಂಡನಿಗೆ ತನ್ನ ಹೊಲದಲ್ಲಿ ಕೆಲಸ ಕೊಡದೇ ಇರುವುದು ಸೀನಪ್ಪನ ಶೋಷಣೆಯ ಕುರುಹುಗಳಾಗಿವೆ. ಇಂಥ ಶೋಷಣೆಗೆ ಒಳಗಾಗುವ ಕೆಳವರ್ಗಗಳ ದುರ್ಬಲ ಆರ್ಥಿಕ ಸ್ಥಿತಿಯೇ ಕಾರಣವಾಗಿದೆ. ಅನ್ಯಮಾರ್ಗವಿಲ್ಲದೆ ಲಕ್ಷ್ಮಿ ಹೊಟ್ಟೆಪಾಡಿಗಾಗಿ ಜಮೀನ್ದಾರನ ಹೊಲದಲ್ಲಿ ದುಡಿಯುತ್ತಿದ್ದಳು. ಉದಾರ ದಯಾಪರತೆಯನ್ನು ನೋಡಿ ಲಕ್ಷ್ಮಿ ಜಾಗೃತಳಾಗಿ, ಬೇರೆ ಜಮೀನ್ದಾರರ ಹೊಲದಲ್ಲಿ ಕೃಷಿ ಕೂಲಿಯಾಳಾಗಿ ಸ್ಥಿತ್ಯಂತರಗೊಳ್ಳುವುದೆಂದು ನಿರ್ಧರಿಸಿ ಸೀನಪ್ಪನ ಮುಂದೆ ಹೇಳಿಕೊಳ್ಳುತ್ತಾಳೆ. ಆದರೆ ಸೀನಪ್ಪ ನಿನ್ನ ಗಂಡನ ಪುರುಷತ್ವಕ್ಕಾಗಿ ನಾನು ಕಷ್ಟಪಡುತ್ತಿರುವಾಗ ಬೇರೆಯವರ ಹೊಲದಲ್ಲಿ ದುಡಿಯಲು ಹೋದರೆ ನಿನ್ನ ಪರಿಸ್ಥಿತಿ ಹೇಗೆ ಸುಧಾರಿಸುವುದು ಮತ್ತು ಹಣವಿಲ್ಲದೆ ನಿನ್ನ ಗಂಡನ ಪುರುಷತ್ವ ಬರುವುದಾದರೂ ಹೇಗೆ ಸಾಧ್ಯವೆಂದು ಲಕ್ಷ್ಮಿಯ ಮನವೊಲಿಸಿ ಅವಳ ನಿರ್ಧಾರವನ್ನು ಬದಲಿಸುತ್ತಾನೆ. ಗಂಡನ ಪುರುಷತ್ವಕ್ಕೆ ಹೋರಾಡುವ ಸೀನಪ್ಪನ ಉದಾರತೆಗೆ ಮೆಚ್ಚಿ ಕಡಿಮೆ ಕೂಲಿಯಿಂದ ಜಮೀನ್ದಾರನ ಹೊಲದಲ್ಲಿ ಶ್ರಮವಹಿಸಿ ದುಡಿಯುವ ಪ್ರಸಂಗವನ್ನು ಕಾದಂಬರಿ ಚಿತ್ರಿಸುತ್ತದೆ. ಮಾಗಿ ಕಾದಂಬರಿಯಲ್ಲೂ ಪುಟ್ಟ ಸುಂದ್ರಿಯ ಪಾತ್ರ ಲಕ್ಷ್ಮಿಯ ಪಾತ್ರದಂತೆ ಅನಾವರಣಗೊಂಡಿದೆ. ಪುಟ್ಟಸುಂದ್ರಿ ಸ್ವಾಮೇಗೌಡನ ಶೋಷಣೆಗೆ ಒಳಗಾಗುತ್ತಾಳೆ. ಸ್ವಾಮೇಗೌಡ ತಾನು ಪುಟ್ಟಸುಂದ್ರಿಗೆ ಮದುವೆಯಾಗುವುದಾಗಿ ನಂಬಿಸಿ ಅವಳನ್ನು ಅತ್ಯಾಚಾರವೆಸಗಿ ಬಾವಿಗೆ ತಳ್ಳುತ್ತಾನೆ. "ಈಗಾಗಲೇ ಬದುಕನ್ನು ಕಳೆದುಕೊಂಡ ದಲಿತರು ಈ ಸಮಾಜ ವ್ಯವಸ್ಥೆಯ ಅಧಿಕಾರಶಾಹಿ ಆಡಳಿತದಲ್ಲಿ ನಂಬುಗೆ ಇಟ್ಟಿದ್ದಾದರೆ ಉಳಿದಷ್ಟು ಬದುಕು ಕೂಡಾ ಕಳೆದು ಹೋಗುತ್ತದೆ ಎಂಬ ದಟ್ಟ ಸತ್ಯವನ್ನು ಕಾದಂಬರಿ ಕಲಾತ್ಮಕವಾಗಿ ಬಿಂಬಿಸಿದೆ."[೨೨] ಲಕ್ಷ್ಮಿಯ ಗಂಡನ ಪುರುಷತ್ವವನ್ನು ಗಂಗಾನಂದ ಸ್ವಾಮಿಯ ಮೂಲಕ ಸೀನಪ್ಪನು ಭರಿಸಿಕೊಡುತ್ತಾನೆಂದು ನಂಬಿ, ತನ್ನ ಗಂಡನನ್ನೇ ಕಳೆದುಕೊಳ್ಳುವ ದಾರುಣ ಪರಿಸ್ಥಿತಿಯನ್ನು ಅನುಭವಿಸುತ್ತಾಳೆ. 'ಒಡಲಾಳ'ದಲ್ಲಿನ ಸಾಕವ್ವಳು ಕಳೆದು ಹೋದ ಹುಂಜವನ್ನು ಹುಡುಕಿಕೊಡುವಂತೆ ಪೋಲೀಸರಿಗೆ ಮತ್ತೊಂದು ಹುಂಜವನ್ನು ಕೊಟ್ಟು ಕಳೆದುಕೊಳ್ಳುವುದು ಇಲ್ಲಿ ಪ್ರಸ್ತುತವೆನಿಸುತ್ತದೆ.

ಮೇಲುವರ್ಗಗಳಿಗೆ ಆಸ್ತಿ-ಪಾಸ್ತಿ, ಜಾತಿ-ಧರ್ಮ, ಅಧಿಕಾರ ಮುಖ್ಯವಾದರೆ, ಕೆಳವರ್ಗಗಳಿಗೆ ಬದುಕು ಮುಖ್ಯವೆನಿಸುತ್ತದೆ. ಬದುಕಿಗಾಗಿ ಕೆಳವರ್ಗ ಕನಿಷ್ಠಮಟ್ಟದ ಉದ್ಯೋಗಗಳನ್ನು ಹುಡುಕಿಕೊಂಡು ಜೀವನ ಸಾಗಿಸುತ್ತವೆ. ಮನಜರ 'ಮಾಗಿ' ಕಾದಂಬರಿಯ 'ಚನ್ನಬಸವಿ' ವೇಶ್ಯಾ ವೃತ್ತಿಯಿಂದ ಹಣ ಸಂಪಾದನೆ ಮಾಡುವುದನ್ನು ಗಮನಿಸಬಹುದು. ಈ ಕಾದಂಬರಿಯಲ್ಲಿ ಚನ್ನಬಸವಿಯ ಪಾತ್ರ ಅಮುಖ್ಯವೆನಿಸಿದರೂ ದಲಿತ ಬದುಕಿನ ಒಳನೋಟಗಳನ್ನು ತೆರೆದಿಡುವ ಉದ್ದೇಶದಿಂದ ಬಹು ಮುಖ್ಯವಾಗಿದೆ. ಇತರ ದಲಿತ ಬಂಡಾಯ ಕಾದಂಬರಿಕಾರರು ತಮ್ಮ ಕಥನ ಕ್ರಿಯೆಯಲ್ಲಿ ಈ ರೀತಿಯ ಪಾತ್ರಗಳನ್ನು ಸೃಷ್ಟಿಸಿದರೂ, ಅದು ಮೇಲುವರ್ಗಗಳ ಹೆಣ್ಣುಗಳು ಹಾಗೂ ಕೆಳವರ್ಗದ ಪುರುಷರು ಹೊಂದುವ 'ಅನೈತಿಕ' ಸಂಬಂಧವನ್ನು ಬಯಲುಗೊಳಿಸುತ್ತದೆ. ಉದಾಹರಣೆಗೆ ಕುಸುಮ ಬಾಲೆಯಲ್ಲಿ ಕುಸುಮ-ಚನ್ನ, ಭಗವತೀ-ಹೊಲೆಯರ ಅಮಾಸ, ಅಕ್ಕಮಾದೇವಮ್ಮ-ಹಟ್ಟಿ ಜೀತಗಾರ, 'ಮಾಗಿ'ಯಲ್ಲಿ ದಾನಮ್ಮ-ಜೀತ ಗಡಿಪಾಪ, ಕಾರ್ಯದಲ್ಲಿ ಪದ್ಮಾವತಿ-ಮಲ್ಲಪ್ಪ, 'ಸೂರ್ಯ'ದಲ್ಲಿ ಸೀತಕ್ಕ ಜೀತ-ಕರಿಯ. ಇಂಥ ಸಂಬಂಧ ಹೊಂದಿರುವವರನ್ನು ಸಮಾಜ ವೇಶ್ಯಾವೃತ್ತಿ ಎಂದು ಗುರುತಿಸುವುದಿಲ್ಲ ವೆಂಬುದನ್ನು ಮನಗಾಣಬೇಕಿದೆ. ಏಕೆಂದರೆ ಅನೈತಿಕ ಸಂಬಂಧವೆಂಬುದು ಕಾಮದ ಹಸಿವಾಗಿದೆ. ವೇಶ್ಯೆ ಎನ್ನುವುದು ಲೈಂಗಿಕ ವಿಷಯಕ್ಕೆ ಸಂಬಂಧಿಸಿದರೂ ಆರ್ಥಿಕ ಹಸಿವಿನ ಅರ್ಥವನ್ನು ಪಡೆಯುತ್ತದೆ.

ಹೀಗೆ ಈ ಕಾದಂಬರಿಗಳಲ್ಲಿ ಈ ರೀತಿಯ ಸಂಬಂಧಗಳು ಹೊಂದಲು ಮೇಲುವರ್ಗದ ಸ್ತ್ರೀಯರು ತಮ್ಮ ದೈಹಿಕ ಸುಖದ ನೆಲೆಯಿಂದ ದಲಿತ ಪುರುಷರೊಂದಿಗೆ ಸಂಬಂಧ ಹೊಂದಿದರೆ, ಕೆಳವರ್ಗದ ಸ್ತ್ರೀಯರು ತಮ್ಮ ಬದುಕಿನ ದೃಷ್ಟಿಯಿಂದ ಮೇಲುವರ್ಗಗಳ ಪುರುಷರರೊಡನೆ ಸಂಬಂಧ ಹೊಂದುತ್ತಾರೆ. ಇದರಿಂದಾಗಿ ಚನ್ನಬಸವಿ ಆರ್ಥಿಕ ಸಮಸ್ಯೆಯಿಂದಾಗಿ ವೇಶ್ಯಾವೃತ್ತಿಯನ್ನು ಕಂಡುಕೊಳ್ಳುತ್ತಾಳೆ. ಚನ್ನಬಸವಿಯ ಹಾಗೆ ಸಮಾಜದಲ್ಲಿ ಬಡತನದ ಬೇಗೆಯಲ್ಲಿ ಬೆಂದ ಕೆಳವರ್ಗದ ಎಷ್ಟೋ ಸ್ತ್ರೀಯರು ಇಂಥ ವೃತ್ತಿಗಳಲ್ಲಿ ನಿರತಗೊಂಡಿರುವುದು ವಾಸ್ತವ ಸತ್ಯ. ಇಂಥ ವೃತ್ತಿಯಲ್ಲಿ ತೊಡಗಿಸಿಕೊಂಡ ಸ್ತ್ರೀಯರನ್ನು ಸಮಾಜ ತಿರಸ್ಕರಿಸುತ್ತದೆ. ಅಪಮಾನಗೊಳಿಸುತ್ತದೆ. ಆದರೆ ಈ ಅಪಮಾನದಿಂದಲೇ ಬದುಕಿನ ಅನನ್ಯತೆಯನ್ನು ಅವರು ಕಂಡುಕೊಳ್ಳುತ್ತಾರೆ. ಕೆಳವರ್ಗದ ವಚನಕಾರ್ತಿ ಸೂಳೆ ಸಂಕವ್ವ ತನ್ನ ವೃತ್ತಿಯ ಮೂಲಕವೇ ಆಧ್ಯಾತ್ಮವನ್ನು ಕಂಡುಕೊಂಡು, ಆ ಮೂಲಕ ತನ್ನ ವೃತ್ತಿ ನಿಷ್ಠೆಯನ್ನು ಮೆರೆಯುತ್ತಾಳೆ. ಸಾಮಾಜಿಕ ನಿಂದೆಗಳನ್ನು ಬದಿಗೊತ್ತಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಇಲ್ಲಿ ಮುಖ್ಯವಾಗಿ ಕಾಣುತ್ತದೆ. ಅಲ್ಲದೆ ಅಸ್ತಿತ್ವದ ಅಧಿಕೃತ ಸಂಗತಿಯೂ ಆಗಿದೆ.

ಚನ್ನ ಬಸವಿಗೆ ಸಮಾಜದ ಗೌರವಗಳು ಮುಖ್ಯವಾಗುವುದಿಲ್ಲ. ಬದಲಾಗಿ ಬದುಕು ಮುಖ್ಯವಾಗುತ್ತದೆ. ಹೀಗಾಗಿ ಚನ್ನ ಬಸವಿ ತಾನು ವೇಶ್ಯಾವೃತ್ತಿಗೆ ತೊಡಗಿಕೊಂಡು, ತನ್ನ ಮೂಲಕ ಪುಟ್ಟಸುಂದ್ರಿಯನ್ನು

ಸಾಹುಕಾರ ಸ್ವಾಮೇಗೌಡನಿಗೆ ಒಪ್ಪಿಸುವ ಮೂಲಕ ಹಣ ಸಂಪಾದನೆ ಮಾಡುತ್ತಾಳೆ. ಈ ರೀತಿ ಹಣ ಮಾಡುವುದು 'ವೇಶ್ಯವಾಟಿಕೆ ದಂಧೆ' ನಡೆಸುವ ಸ್ವರೂಪದಂತೆ ಗೋಚರವಾಗುತ್ತದೆ. ಗ್ರಾಮೀಣ ಪ್ರದೇಶ ಗಳಿಂದ ಬಂದ ಆರ್ಥಿಕವಾಗಿ ದುರ್ಬಲರಾದ ಸ್ತ್ರೀಯರು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವೇಶ್ಯವಾಟಿಕೆ ನಡೆಸುವವರ ಕೈಗೆ ಹಣಕ್ಕಾಗಿ ಬಲಿಯಾಗುತ್ತಿದ್ದಾರೆ.

ಆಧುನೀಕರಣದಿಂದಾಗಿ ಎಚ್ಚರಗೊಳ್ಳುತ್ತಿರುವ ಸ್ತ್ರೀಯರು ಇಂಥ ವೃತ್ತಿಯಿಂದ ಹೊರಬಂದು, ತಮ್ಮ ಮೂಲ ನೆಲೆಯಾದ ಗ್ರಾಮೀಣ ಪ್ರದೇಶಗಳಿಗೆ ಮತ್ತೆ ಹಿಂದಿರುಗುತ್ತಿದ್ದಾರೆ. ಆ ಮೂಲಕ ತಮ್ಮ ಮೂಲ ಉದ್ಯೋಗಗಳಲ್ಲಿ ನಿರತಗೊಂಡು ಬದುಕು ಸಾಗಿಸತೊಡಗಿದ್ದಾರೆ. ಮೊದಲೇ ಹೇಳಿದಂತೆ ಕೆಳವರ್ಗ ಯಾವ ಒಂದು ಉದ್ಯೋಗಕ್ಕೆ ನೆಚ್ಚಿಕೊಂಡು ತಟಸ್ಥವಾಗಿರುವುದಿಲ್ಲ. ಬದಲಾಗಿ ಕಾಲ ಪರಿಸ್ಥಿತಿಯೊಂದಿಗೆ ಮುಖಾಮುಖಿಯಾಗುತ್ತಲೇ ಇರುತ್ತದೆಂಬುದು ಗಮನಾರ್ಹ ಸಂಗತಿಯಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಹಲವಾರು ಆರ್ಥಿಕ ಸಮಸ್ಯೆ ಅನುಭವಿಸುತ್ತಿರುವ ಕೆಳವರ್ಗ ಅನ್ಯಮಾರ್ಗವಿಲ್ಲದೇ ಕಳ್ಳತನ ಮಾಡುವ ವೃತ್ತಿಗೆ ತೊಡಗಿಕೊಳ್ಳುವ ಪರಿಯನ್ನು ದಲಿತ ಬಂಡಾಯ ಕಾದಂಬರಿಗಳು ಅನಾವರಣಗೊಳಿಸುತ್ತವೆ. 'ಒಡಲಾಳ'ದಲ್ಲಿ ಸಾಕವ್ವಳ ಕುಟುಂಬ ಸಾಹುಕಾರ ಎತ್ತಪ್ಪನ ಹೊಲದಲ್ಲಿ 'ಕಡಲೆಕಾಯಿ' ಕಳ್ಳತನ ಮಾಡಿದರೆ, 'ಕುಸುಮಬಾಲೆ'ಯ ಗಾರೆಸಿದ್ಮಾವ ಸಾಹುಕಾರನ ತೋಟದಿಂದ ಹದಿನಾರು ಎಳನೀರು ಕದ್ದು, ಅಂದಿನ ಹಸಿವಿನ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದು ಗ್ರಹಿಕೆಗೆ ಬರುತ್ತದೆ.

ಸಾಕವ್ವಳ ಕುಟುಂಬ ಅಲ್ಪ ಭೂಮಿ ಹೊಂದಿ ಅದರಿಂದ ಹೊಟ್ಟೆ ತುಂಬಲಾರದೆ ಸಾಹುಕಾರರ ಹೊಲದಲ್ಲಿ ಕೃಷಿಕೂಲಿಯಾಳಾಗಿ ಹುಲ್ಲುಕೊಯ್ದು ಬದುಕ ಸಾಗಿಸುತ್ತಿರುತ್ತದೆ. ಸಾಕವ್ವನ ಮಕ್ಕಳಾದ ಕಾಳಣ್ಣ, ಸಣ್ಣಯ್ಯ ಸಾಹುಕಾರ ಎತ್ತಪ್ಪನ ಹೊಲದಲ್ಲಿ ಕಡಲೇಕಾಯಿ ಕಳ್ಳತನ ಮಾಡಿ ಆ ದಿನದ ಸ್ವಲ್ಪ ಸಮಯದ ಹಸಿವನ್ನು ಪರಿಹರಿಸಿಕೊಳ್ಳುತ್ತಾರೆ. ಎತ್ತಪ್ಪನ ಆಸ್ತಿಯನ್ನು ಕಾಪಾಡಲು ಬರುವ ಪೋಲೀಸರೆದುರು ಈ ದಲಿತರು ಕಳ್ಳರಾಗಿ ಕಾಣುತ್ತಾರೆ. ಎತ್ತಪ್ಪನ ಸಿರಿವಂತಿಕೆಯ ಮೆರವಣಿಗೆಯಲ್ಲಿ ಪಾಲುದಾರರಾಗುವ ಉಚ್ಚವರ್ಗದ ಹಿತಾಸಕ್ತಿಗಳಿಗೆ ಈ ಬಡವರು ದ್ರೋಹಿಗಳಾಗಿ ಕಾಣುತ್ತಾರೆ.[೨೩] "ಕಪ್ಪು ಹಣ ಮಾಡುವವರು ಮುಖಂಡರಾಗುತ್ತಾರೆ. ಕಳ್ಳತನ ಮಾಡುವವರು ಅಪರಾಧಿಗಳಾಗುತ್ತಾರೆ"[೨೪]ಎಂಬುದು ಸಮಾಜದ ವಿಪರ್ಯಾಸವನ್ನು ಧ್ವನಿಸುತ್ತದೆ.

ವಾಸ್ತವದಲ್ಲಿ ಭಟ್ಟಿ ಸರಾಯಿ ಇಳಿಸುವ ಮೂಲಕ ದುಡಿಮೆ ಕಂಡುಕೊಂಡ ಸಮುದಾಯಗಳು ಮೇಲುವರ್ಗಗಳ ದೃಷ್ಟಿಯಲ್ಲಿ ಅಪರಾಧಿಗಳಾಗುತ್ತಾರೆ. ಮೇಲುವರ್ಗ ತಮ್ಮ ಹಿತಾಶಕ್ತಿ ಕಾಪಾಡುವ ಸಲುವಾಗಿ ಸರಾಯಿ ಗುತ್ತಿಗೆದಾರರಾಗಿ ಆ ಮೂಲಕ ಹೆಚ್ಚು ಹೆಚ್ಚು ಆದಾಯವನ್ನು ಪಡೆಯುತ್ತಾರೆ.

ಹೊಟ್ಟೆಪಾಡಿಗಾಗಿ ಕಳ್ಳಭಟ್ಟಿ ಸರಾಯಿ ಮಾಡುವವರಿಗೆ ಸಬಲವರ್ಗ ಅಪರಾಧವೆಸಗಿ ಹಿಂಸೆ ನೀಡುತ್ತದೆ. ಹಿಂಸೆಯನ್ನು ತಾಳಲಾರದೇ ಕೃಷಿಕೂಲಿಯಾಳಾಗಿ ಪರಿವರ್ತನೆಗೊಳ್ಳುತ್ತವೆ. ಜಾಗೃತಗೊಂಡ ಕೆಳವರ್ಗ ಸಮಯ ಪ್ರಜ್ಞೆಯಿಂದ ಮತ್ತೆ ಸರಾಯಿ ಮಾಡುವ ಕೆಲಸಕ್ಕೆ ತೊಡಗಿಕೊಳ್ಳುತ್ತವೆ. ಏಕೆಂದರೆ, ಗುತ್ತಿಗೆದಾರರು ಅಕ್ರಮ ಸರಾಯಿಯನ್ನು ನಮಗೆ ಮಾರಾಟ ಮಾಡಿ ಸರ್ಕಾರಕ್ಕೆ ವಂಚಿಸಿರುವ ವಿಷಯ ಗೊತ್ತಿದ್ದು ಅದನ್ನು ಪ್ರತಿಭಟಿಸುವ ಶಕ್ತಿಯಿಲ್ಲದೇ ಸಣ್ಣ ಪ್ರಮಾಣದಲ್ಲಿ ಶುದ್ಧ ಮದ್ಯಪಾನವನ್ನು ತಯಾರಿಸುತ್ತವೆ. ಈ ಸರಾಯಿ ಬೇಡಿಕೆ ಹೆಚ್ಚಾಗಿರುತ್ತದೆ. ಹೀಗೆ ಒಂದು ಉದ್ಯೋಗದಿಂದ ಮತ್ತೊಂದು ಉದ್ಯೋಗಕ್ಕೆ ನಿರಾತಂಕವಾಗಿ ಸ್ಥಿತ್ಯಂತರಗೊಳ್ಳುತ್ತಿರುತ್ತದೆ. ಕೆಳವರ್ಗ ಹಸಿವಿನ ಪರಿಹಾರಕ್ಕಾಗಿ ಇಂಥ ವೃತ್ತಿಗಳನ್ನು ಕೈಗೊಂಡರೆ, ಇಡೀ ದಲಿತ ಸಮುದಾಯವನ್ನೇ ವಂಚಿಸಿ, ರಕ್ತ ಹೀರಿ ಹಣ ಸಂಪಾದನೆ ಮಾಡುವ ಮೇಲುವರ್ಗ ಕೆಳ ಸಮುದಾಯಗಳ ಮುಖಂಡರಾಗುತ್ತಾರೆ. ಆ ಮೂಲಕ ಒಂದು ಕಡೆ ಬದುಕಿನ ಭದ್ರತೆಯನ್ನು ಸ್ಥಾಪಿಸಿಕೊಂಡು ಹಗಲು ದರೋಡೆಕೋರರಾಗುತ್ತಿದ್ದಾರೆ.

"ಬಡತನದ ದಾರಿದ್ರ್ಯ ಬೆನ್ನು ಹತ್ತಿದಾಗ, ಸಮಾಜದಲ್ಲಿ ಅಸಮಾನತೆ ನೆಲೆಯೂರಿದಾಗ,ಕಳ್ಳತನ ಸಹಜವೆಂಬ ಧ್ವನಿಯನ್ನು ಮುಂದಿಡುತ್ತದೆ".[೨೫] ಗಾರೆಸಿದ್ಧಮಾವ ಎಳನೀರು ಕಳ್ಳತನದಲ್ಲಿ ಲಿಂಗಾಯ್ತರ ಕೈಗೆ ಸಿಕ್ಕುಬಿದ್ದು, ಅವರ ಹಿಂಸೆಯಿಂದ ತಪ್ಪಿಸಿಕೊಳ್ಳಲು ತನ್ನ ನೈಜ ಪರಿಸ್ಥಿತಿಯನ್ನು ಹೀಗೆ ಹೇಳುತ್ತಾನೆ.

"ಕುಡಿಯಾಕ ಅಂತ ಎಳ್ಳೀರ ಕಿತ್ಗಂಡೂ ತಪ್ಪಪ್ಪ ಅದೂವಿ?"[೨೬] ಎಂದು ಹೇಳುವಾಗಲೂ ಆ ಮುಖಂಡರು ಒಪ್ಪದಿದ್ದಾಗ "ಎಲ್ಲನುವಿ ನಿಮ್ಮೆದ್ರಗೆ ಕುಡುದ್ರ ಒಪ್ಪಗಂಡರಪ್ಪ ಆಗ್ಲಾರುವಿ"[೨೭] ಎನ್ನುವಲ್ಲಿ ಕೆಳವರ್ಗಗಳ ಹಸಿವಿನ ಸಮಸ್ಯೆಯು ಗೋಚರವಾಗುತ್ತದೆ. ಕೆಳವರ್ಗಗಳ ಇಂಥ ಸಮಸ್ಯೆ ಸ್ಪಂದಿಸದೇ ಅಮಾನವೀಯವಾಗಿ ವರ್ತಿಸಿ ಅಪರಾಧವೆಸಗಲಾಗತ್ತದೆ. ಗಾರೆಸಿದ್ಧ ಇಂಥ ಅಪರಾಧದಿಂದ ಮುಕ್ತವಾಗಿರಲಿಲ್ಲ. ಆ ಮುಖಂಡರು ಇವನು ಮಾಡಿದ ತಪ್ಪಿಗಾಗಿ ನೂರು ರೂಪಾಯಿ ದಂಡ ಹಾಕುತ್ತಾರೆ. ಮುಖಂಡರು ಇವನನ್ನು ಹೊಡದಿದ್ದಾಗಿ ನೂರಾವೊಂದು ರೂಪಾಯಿ ದಂಡ ಕೊಡುತ್ತಾರೆ. ಅದರ ನೂರು ರೂಪಾಯಿ ಪಡೆದು ಮರಳಿ ಅವರಿಗೇ ಕೊಟ್ಟು ತನ್ನ ಪರವಾದ ದಂಡ ಕೊಟ್ಟುಬಿಟ್ಟನೆಂದು ಹೇಳಿ ನ್ಯಾಯ ಸಮಮಾಡಿಕೊಳ್ಳುತ್ತಾನೆ. ಗಾರೆಸಿದ್ಧನು ಮಾಡುವ ನೋಟಿನ ಚಮತ್ಕಾರಿಕೆ ಕೆಳವರ್ಗಗಳು ಬದುಕುವ ಉಪಾಯವಾಗಿದೆ. ಇದನ್ನು ಜಿ.ಎಸ್.ಆಮೂರರು "ವ್ಯವಸ್ಥೆಯೊಡನೆ ಹೋರಾಡುವ ಸಾಮರ್ಥ್ಯವಿಲ್ಲದಿದ್ದರೂ ತಮ್ಮ ಬುದ್ಧಿವಂತಿಕೆಯಿಂದ ಬದುಕುಳಿಯುವ ಮಾರ್ಗಗಳನ್ನು ಹುಡುಕಿ ತೆಗೆಯುವ ಪಾತ್ರ "[೨೮] ಎಂಬುದಾಗಿ ಗಾರೆಸಿದ್ಧನ ಪಾತ್ರವನ್ನು ವ್ಯಾಖ್ಯಾನಿಸುತ್ತಾರೆ. ಜಿ.ಎಸ್.ಆಮೂರರ ಈ ಹೇಳಿಕೆಯಲ್ಲಿ ಸ್ಪಷ್ಟತೆ ಸಿಗಲಾರದು. ಏಕೆಂದರೆ ಗಾರೆಸಿದ್ಧ ಮಾವ ದೈಹಿಕವಾಗಿ ಸದೃಢವಾದರೂ, ಶ್ರಮವಹಿಸಿ ದುಡಿಯುವ ಶಕ್ತಿಯುಳ್ಳವನಾದರೂ ವ್ಯವಸ್ಥೆಯ ಆವರಣವು ಅವನ

ಶ್ರಮಕ್ಕೆ ತಕ್ಕಂತೆ ಪ್ರತಿಫಲ ನೀಡುತ್ತಿಲ್ಲವೆಂಬುದನ್ನು ಗ್ರಹಿಸಬೇಕು. ಇದಕ್ಕೆ ಮೂಲಕಾರಣ ಬಡತನವಾಗಿದೆ. ಕುರುಮಯ್ಯ ಮತ್ತು ಅಂಕುಶದೊಡ್ಡಿಯಲ್ಲಿ ಕೊರವರ ಬುದಕಿನ ಹಸಿವಿನ ಸಮಸ್ಯೆಯನ್ನು ಕಾದಂಬರಿಯುದ್ದಕ್ಕೂ ಅನಾವರಣಗೊಳಿಸುತ್ತಾರೆ. ಸಂಶಾಲಪ್ಪ ಹಾಗೂ ಎಂ.ಎಲ್.ಎ.ಯಂಕನಗೌಡರು ಅಧಿಕ ಹಣ ಮಾಡುವ ದುರಾಸೆಯಿಂದ ಕೊರವರು ವಾಸ ಹೂಡಿದ್ದ ಅಂಕುಶದೊಡ್ಡಿಯಿಂದಲೇ ಎತ್ತಂಗಡಿ ಮಾಡಿಸುತ್ತಾರೆ. ಹಾಗಾಗಿ ಕೊರವರು ಅಲ್ಲಿಂದ ಸಾಲು ಬೆಟ್ಟಗಳಲ್ಲಿ ಸ್ಥಿತ್ಯಂತರಗೊಳ್ಳುತ್ತಾರೆ. "ದುಡಿಮೆಗೆ ಯಾವ ಲಾಭವೂ ಇಲ್ಲದ ಸಾಲು ಬೆಟ್ಟಗಳಲ್ಲಿ ಹೊಸದಾಗಿ ಮುಕ್ಕಾಂ ಮಾಡಿಕೊಂಡಿದ್ದ ಕೊರವರಿಗೆ ಅಲ್ಲಿ ಜೀವನ ನಡೆಸುವುದೇ ದುಸ್ತರವಾಯಿತು. ಜೀವನಾಧಾರವಾಗಿದ್ದ ಹಂದಿಗಳನ್ನು ರಾಯಪುರದ ಮುನ್ಸಿಪಾಲ್ಟಿಯವರು ಕೊಲ್ಲುತ್ತಿದ್ದರು. ಈಚಲ ದಬ್ಬೆಗಳಿಂದ ಬುಟ್ಟಿ, ತಡಿಕೆ, ಚಾಪೆ ಹೆಣೆದು ಬದುಕೋಣವೆಂದರೆ ಯಂಕನಗೌಡರ ನೌಕರರ ಉಪಟಳ. ಇದರಿಂದಾಗಿ ಬಹಳಷ್ಟು ಕುಟುಂಬಗಳು ಗುಳೇ ಹೊರಟವು. ಹಸಿವಿನಿಂದ ಒಳಸೇದಿಕೊಂಡಿದ್ದ ಗವಿಯಾಕಾರದ ಹೊಟ್ಟೆಗಳನ್ನು ನೋಡಿದಾಗ ಅವರನ್ನು ತಡೆದು ನಿಲ್ಲಿಸುವ ಧೈರ್ಯ ಕುರುಮಯ್ಯನಿಗೆಲ್ಲಿ? ಬರುಬರುತ್ತಾ ದೊಡ್ಡಿ ಖಾಲಿಯಾಯಿತು. ಎಂಟ್ಹತ್ತು ಜೋಪಡಿಗಳಿದ್ದವು. ಯಾವುದಕ್ಕೂ ಜಗ್ಗದೆ ಸಾಲು ಬೆಟ್ಟಗಳಲ್ಲಿ ಗಟ್ಟಿಯಾಗಿ ತಳವೂರಿ ನಿಂತವರಲ್ಲಿ ಕುರುಮಯ್ಯ, ದವಲಪ್ಪ, ಜಂಬಯ್ಯ, ಗ್ಯಾನಪ್ಪ, ಜಂಗ್ಲಪ್ಪ ಇವರು ಪ್ರಮುಖರಾಗಿದ್ದರು. ಬುಟ್ಟಿ, ಚಾಪೆಮಾರಿ, ಬಿಜಿಲಿಗಳನ್ನು ಹೊತ್ತು ಹೊಟ್ಟೆ ತುಂಬಿಸಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಜಂಗ್ಲಪ್ಪ ಕಳ್ಳತನವನ್ನು ಕಸಬು ಮಾಡಿಕೊಂಡ. ರಾತ್ರಿ ಹೊತ್ತು ಗಂಜು ಮಾರ್ಕೆಟ್ಟಿನಿಂದ ದವಸಧಾನ್ಯಗಳನ್ನು ಕದ್ದು ತರುವಾಗ ಗಸ್ತಿ ತಿರುಗುವ ಪೋಲೀಸರ ಕೈಗೆ ಸಿಕ್ಕು ಜಂಗ್ಲಪ್ಪ ಆರು ತಿಂಗಳ ಕಾಲ ಜೈಲಿನ ಕಂಬಿಗಳನ್ನೆಣಿಸಬೇಕಾಯಿತು. ಕುಟುಂಬವನ್ನು ಪೋಷಿಸುವ ಭಾರ ಮಗಳಾದ ಮಂಗಮ್ಮ ಹೊತ್ತಿದ್ದಳು. ಇದ್ದುದರಲ್ಲಿ ಕುಟುಂಬವನ್ನು ತೂಗಿಸಿಕೊಂಡು ಹೋಗಲು ಸಾಧ್ಯವಾಗದೆ ಮಂಗಮ್ಮ ಅಡ್ಡದಾರಿ ಹಿಡಿದಳು. ರಾತ್ರಿ ಹೊತ್ತು ಮೆರವಣಿಗೆಯಲ್ಲಿ ಬಿಜಲಿ ಹೊತ್ತು ಮನೆಗೆ ಹಿಂದಿರುಗಿ ಬರುವಾಗ ಎಲ್ಲರ ಕಣ್ಣು ತಪ್ಪಿಸಿ ದಲ್ಲಾಳಿಗಳ ಸಹಾಯದಿಂದ ರಾಯಪುರದ ಲಾಡ್ಜಿಂಗ್‌ಗಳಲ್ಲಿ ಮಾನಮಾರಿಕೊಂಡು ಹಣ ಸಂಪಾದನೆ ಮಾಡಲು ಸುರು ಮಾಡಿದ್ದಳು"[೯]. ಇಡೀ ಕೊರವ ಸಮುದಾಯಇಂಥ ಹೀನ ಸ್ಥಿತಿಗೆ ಇಳಿಯಲು ನವವಸಾಹತು ಶಾಹಿಯ ಕ್ರೌರ್ಯದ ಪ್ರತೀಕವಾಗಿದೆ. ಪ್ರಬಲವರ್ಗ ಅತಿ ಹಣದ ದಾಹದಿಂದ ಕೆಳವರ್ಗಗಳ ಬದುಕನ್ನು ಕಸಿದುಕೊಳ್ಳಲು ಮಾಡುವ ತಂತ್ರಗಳಿಗಿಂತ, ತಾನು ಹಸಿವಿನ ಸಮಸ್ಯೆ ಪರಿಹಾರದ ಉಪಾಯ ಕಂಡುಕೊಳ್ಳುವಲ್ಲಿ ಯಾವ ಅಪರಾಧವೆನಿಸುವುದಿಲ್ಲ. ಗಾರೆಸಿದ್ಧನು ಮಾಡುವ ನೋಟಿನ ಚಮತ್ಕಾರಿಕೆ ಕೂಡ ಅಪರಾಧವೆನಿಸುವುದಿಲ್ಲ. ಇಂಥ ಸಂದರ್ಭಗಳನ್ನು ಗ್ರಹಿಸಿ ಹೇಳುವುದಾದರೆ, ಆಮೂರರ ಹೇಳಿಕೆಯನ್ನು ಒಪ್ಪಲಾಗುವುದಿಲ್ಲ.

ಹಸಿವು ಮನುಷ್ಯನ ದೇಹವನ್ನು ಕ್ಷೀಣಿಸಿ ಬಿಡುತ್ತದೆ. ದುರ್ಬಲನನ್ನಾಗಿ ಮಾಡಿಬಿಡುತ್ತದೆ. ಕುಸುಮಬಾಲೆಯ ಪಕಳಯ್ಯ ಪಾತ್ರವನ್ನು ಗಮನಿಸಬೇಕು. ಪಕಳಯ್ಯ ತನ್ನ ದುರ್ಬಲ ದೇಹಸ್ಥಿತಿಯಲ್ಲಿ ಇರುವಾಗ, ಇತ್ತ ದಲಿತ ಸಂಘದ ಮುಖಂಡರು ಸಂಘದ ಮೆರವಣಿಗೆಯಲ್ಲಿ ಹೆಚ್ಚು ಜನ ಪಾಲ್ಗೊಳ್ಳಲೆಂದು "ದಾರಿ ಉದ್ದಕ್ಕೂ ಊಟದ ವ್ಯವಸ್ಥೆ ಮಾಡಲಾಗಿದೆ" ಎಂಬ ಸುಳ್ಳು ಘೋಷಣೆ ಕೂಗುವಾಗ "ಆ 'ಊಟ' ಎಂಬ ಎರಡಕ್ಷರ ತವಕನ ತನ್ನ ಹೊಟ್ಟಾಗ ಹಾಕಂಡು ಕಾಯುತ್ತಿದ್ದನೇನೋ ಪಕಳಯ್ಯನು ಎದ್ದು ನಿಂತು ಹೊದ್ದಿದ್ದ ದುಪ್ಪಟ್ಟ ಬಿಗಿ ಹಿಡಿದು ನನ್ನೂವಿ ಬರ್ಕಳ್ಳಿ ಸೋಮಿ"[೩೦] ಎನ್ನುವಲ್ಲಿ ಹಸಿವಿನ ಭೀಕರ ಸಮಸ್ಯೆಯನ್ನು ತೋರಿಸುತ್ತದೆ. ಆ ಸಂಘದ ಮೆರವಣಿಗೆಯಲ್ಲಿ ನಡೆಯಲಾರದ ಸ್ಥಿತಿಯಲ್ಲೂ ಪಾಲ್ಗೊಳ್ಳುತ್ತೇನೆಂದು ಹೇಳುವ ಪಕಳಯ್ಯ ತನ್ನ ಹಸಿವನ್ನು ಪರಿಹರಿಸಿಕೊಳ್ಳುವ ಉಪಾಯ ಮಾಡುತ್ತಾನೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯಲ್ಲಿ ಬರುವ ಮಾರೆಪ್ಪನು ಇದೇ ಸ್ಥಿತಿ ತನ್ನ ದೈಹಿಕ ಬಲಹೀನತೆಯಿಂದ ಹೊಲೆಯರ ಮುದಿಕಿಯಿಂದ ತನ್ನ ಹಸಿವಿನ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಾನೆ.

ಕೆಳವರ್ಗಗಳಿಗೆ ಹಸಿವಿನ ಸಮಸ್ಯೆ ಉದ್ಭವ ಉಂಟಾಗಲು ಬಡತನ ಮೂಲ ಕಾರಣವಾದರೂ ಬಡತನವುಂಟಾಗಲು ಕಾರಣಗಳನ್ನು ಹುಡುಕಬೇಕಾಗುತ್ತದೆ. ಆದ್ದರಿಂದ ಬಡತನ ಮತ್ತು ಹಸಿವು ಕಾಲಕ್ಕೆ ಸಂಬಂಧಿಸಿದೆ. ಆಯಾ ಕಾಲ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ವಿಘಟನೆಗಳು ದುರ್ಬಲ ಸ್ಥಿತಿಯಲ್ಲಿ ಇಳಿಸಿ ಬಿಡುತ್ತದೆ. ಹೀಗಾಗಿ ಕೆಳವರ್ಗ ಕಾಲದ ಒತ್ತಡಗಳಿಗೆ ಮಣಿದು ಕೀಳು, ಹೀನ ಮಟ್ಟದ ವೃತ್ತಿಗೆ ತೊಡಗಿಸಿಕೊಂಡು ಅದಮ್ಯ ಜೀವನ ಪ್ರೀತಿಯನ್ನು ಕಂಡುಕೊಳ್ಳುತ್ತವೆ. ಹಾಗಾಗಿ ಈ ವರ್ಗಗಳ ಹಸಿವಿನ ಸಮಸ್ಯೆ ಕಾಲಗಳ ಮೂಲಕ ಗೋಚರಿಸುತ್ತದೆ.

"ಹಸಿವಿನ ಸಮಸ್ಯೆಯ ಮೂಲಕ ಕಾಲ ಕಂಡುಕೊಳ್ಳುವ ಕ್ರಮ ಇದಾಗಿರುವುದರಿಂದ 'ಕಾಲ' ಕಟ್ಟಿಕೊಂಡಿರುವ ಅನೇಕ 'ಮಿಥ್'ಗಳು ಒಡೆದು ಹೋಗುತ್ತವೆ. ಈ ಮಿಥ್‌ಗಳು ಒಡೆಯುತ್ತ ಹೊಸ ನೆಲೆ ಗೋಚರಿಸುತ್ತದೆ ನೋಟದ ನೆಲೆಗಳು ಖಚಿತಗೊಳ್ಳುತ್ತವೆ. ಇಲ್ಲಿ ವೈಭವೀಕರಣಕ್ಕೆ ಬದಲಾಗಿ ಮಾನವೀಕರಣ ಮುಖ್ಯವಾಗುತ್ತದೆ. ವೈಭವ ಒಡೆಯುತ್ತಿರುವ ವೇದನೆಗೆ ಬದಲಾಗಿ ವಾಸ್ತವದ ಉಸಿರಿನಲ್ಲಿ ಹುಟ್ಟುವ ವಿಷಾದ ಮುಖ್ಯವಾಗುತ್ತದೆ. ಹೀಗೆ ಗ್ರಾಮೀಣ ಬದುಕಿನ ವಸ್ತು ಹೊಸ ಒಳನೋಟ ಮತ್ತು ತಾತ್ವಿಕ ನೆಲೆಗಳನ್ನು ಪಡೆದುಕೊಂಡದ್ದು ಬಂಡಾಯ ಸಾಹಿತ್ಯ ಚಳುವಳಿಯ ಒಂದು ಪ್ರಮುಖ ಕೊಡುಗೆ".[೩೧]

ಕುಂ.ವೀ.ಯವರ ಕಾದಂಬರಿಗಳಲ್ಲಿ ಹಸಿವಿನ ಕುರಿತಾದ ಚಿತ್ರಣಗಳು ತೀವ್ರ ಸ್ವರೂಪದಲ್ಲಿ ಒಡ ಮೂಡಿವೆ. ಆಂಧ್ರದ ಜಮೀನ್ದಾರಿಕೆಯ ದಬ್ಬಾಳಿಕೆಯು ಕೆಳಜಾತಿಗಳನ್ನು ತಮ್ಮ ಶ್ರೀಮಂತಿಕೆಯ

ಹುನ್ನಾರದಡಿಯಲ್ಲಿ ಸಿಕ್ಕಿಸಿ ಅನ್ನದ ಹೋರಾಟಕ್ಕೆ ಇಳಿಸಿದವು. ದಟ್ಟವಾದ ಅಟ್ಟಹಾಸ್ಯದ ಮೂಲಕ ಹಸಿವನ್ನು ನೀಗಿಸುವ ನೆಪದಲ್ಲಿ ಕೆಳಜಾತಿಗಳನ್ನು ಸಂಚಿನಿಂದ ಬಳಸಿಕೊಂಡದ್ದನ್ನು ಕುಂ.ವೀ.ವಿವರಿಸುತ್ತಾರೆ. ಕರೀಗೌಡನ ಕ್ರೌರ್ಯದಿಂದ ಬದುಕನ್ನು ಕಳೆದುಕೊಂಡು ಮಾಸೂರಿನಲ್ಲಿ ಸಣ್ಣುದ್ರನ ಆಶ್ರಯದಲ್ಲಿ ಬದುಕು ಸಾಗಿಸ ತೊಡಗಿದ ಭರಮಜ್ಜನ ಕುಟುಂಬ ಅತಿಯಾದ ಹಸಿವೆಯ ಸಮಸ್ಯೆನ್ನು ಅನುಭವಿಸುತ್ತದೆ. ಈ ಕುಟುಂಬದವರಿಗೆ ಕೃಷಿ ಕೂಲಿಯಾಳಾಗಿ ದುಡಿಯುವ ಶಕ್ತಿ ಇದ್ದರೂ, ಸಣ್ಣುದ್ರ ತನ್ನ ಹೊಲದಲ್ಲಿ ಕೃಷಿ ಕೂಲಿಯಾಳಾಗಿ ದುಡಿಯುವ ಆಜ್ಞೆ ಮಾಡಿರುತ್ತಾನೆ. ಹಾಗಾಗಿ ಸಣ್ಣುದ್ರ ಕೊಡುವ ಕೂಲಿಯಿಂದ ಭರಮ್ಮಜ್ಜನ ಕುಟುಂಬದ ಹಸಿವಿನ ಸಮಸ್ಯೆಯು ಪರಿಹಾರವಾಗುತ್ತಿರಲಿಲ್ಲ. ಎಲ್ಲರೂ ಅರೆ ಹೊಟ್ಟೆಯಿಂದಲೇ ಬದುಕುವ ದಾರುಣ ಸ್ಥಿತಿಯನ್ನು ತಲುಪಿರುತ್ತದೆ.

ಕಾದಂಬರಿಯ ಒಂದು ಪ್ರಸಂಗದಲ್ಲಿ ಗೌರಿಗೆ ಪಕ್ಕದ ಮನೆಯ ಮುದುಕಿಯು ನೀಡುವ ಮಜ್ಜಿಗೆಯೇ ಅಮೃತವಾಗಿತ್ತು. ಕಾದಂಬರಿಕಾರನ ನಿರೂಪಣೆಯಲ್ಲಿ ಹೀಗೆ ಹೇಳಲಾಗಿದೆ.

''ಎಷ್ಟು ನೀರು ಹಾಕಿದರೂ ಮಜ್ಜಿಗೆ ಮಜ್ಜಿಗೆಯೇ ಸರಿ. ಮುದ್ದಿಯಲ್ಲಿ ರವ್ವಸ್ಟು ಮಜ್ಜಿಗೆ ಸಟ್ನಿ ಹಾಕಿಕೊಂಡು ಸೂರ‍್ರಂತ ಗಂಟಲಿಗೆ ಸುರಿದಳು. ಹೊಟ್ಟೆಯಲ್ಲಿ ಮಂಜುಗಡ್ಡೆ ಬಿದ್ದಂತೆ ತಣ್ಣಗಾಯಿತು. ಬಡವರಿಗೆ ಅಮೃತ ಅಂದರೆ ಇದೆ. ಒಳ್ಳೆದು ಬಾ ಅಂದರೆ ಎಲ್ಲಿಂದ ಬಂದೀತು ಒಳ್ಳೆದು ಅಂದರೆ ಗೌರಿಗೆ ಮೊನ್ನೆ ತಾನು ಸಣ್ಣುದ್ರನ ಜೊತೆಗೆ ತೋಟದಲ್ಲಿ ಕುರಿ ಉಂಡಿದ್ದು ನೆನಪಾಯಿತು. ಬಾಯಲ್ಲಿದ್ದ ಗುಕ್ಕು ನುಂಗುವುದನ್ನು ಮರೆತು ಜೊಲ್ಲು ಸುರಿಸುತ್ತ ನಕ್ಕಳು''[೨೨] ಎಂಬುದು ಹಾಗೂ 'ಒಡಲಾಳ' ಕಾದಂಬರಿಯಲ್ಲಿ ಬರುವ ಸಾಕವ್ವಳ ಕುಟುಂಬ ಹಸಿವಿನಿಂದ ಬಳಲುತ್ತ, ಕಳ್ಳತನ ಮಾಡಿ ತಂದ ಕಡಲೆಕಾಯಿ ತಿನ್ನುತ್ತಾ 'ಸಾಹುಕಾರ ಎತ್ತಪ್ಪನ ಅಂಥ ಒಂದು ಎಮ್ಮಿ ಸತ್ರೀಗುಪ್ಪ...ನಮ್ಮ ಕೇರಿ ದರಿದ್ರನಾರು ಒಂದಿನ ಹಿಂಗ್ತದ ಎಂಬುದೂ ಕೆಳವರ್ಗ ಒಂದೊಂದು ಹೊತ್ತಿನ ಹಸಿವಿನ ಸಮಸ್ಯೆಯನ್ನು ಅನುಭವಿಸುವ ಚಿತ್ರಣವನ್ನು ಕಟ್ಟಿಕೊಡುತ್ತದೆ. ಹೀಗಾಗಿ ಇಂಥ ವರ್ಗ ಉಳ್ಳವರ ವಸ್ತುಗಳನ್ನು ನೋಡಿ ಕನಸು ಕಾಣುವುದು ಸಹಜವಾಗಿದೆ. ಲೇಖಕರು ಇಂಥ ಕನಸ್ಸಿನ ಮೂಲಕವೇ ಅವರ ದಾರುಣ ಬದುಕನ್ನು ಚಿತ್ರಿಸುತ್ತಾರೆ.

ಕೆಳವರ್ಗ ಹಸಿವಿನ ಸಮಸ್ಯೆಯಿಂದಾಗಿ ಕಳ್ಳತನದ ದಂಧೆಗೆ ಮಾರು ಹೋಗುವ ಸಂಗತಿಗಳನ್ನು ದಲಿತ ಬಂಡಾಯ ಕಾದಂಬರಿಗಳ ಪ್ರಸಂಗಗಳ ಮೂಲಕ ಚರ್ಚಿಸಿದೆ. ಇಲ್ಲಿ ಮತ್ತೊಂದು ಮುಖ್ಯವಾಗಿ ಗ್ರಹಿಕೆಗೆ ಬರುವ ಅಂಶವೆಂದರೆ ಕಳ್ಳತನ ಮಾಡುವಾಗ ತಂತ್ರಗಳನ್ನು ರೂಪಿಸಿಕೊಳ್ಳುತ್ತದೆ. ಈ ತಂತ್ರಗಳ ಅಳವಡಿಕೆಯಲ್ಲಿ ಚಾತುರ್ಯತೆ, ಧೈರ್ಯ ಪ್ರಮುಖವಾಗುತ್ತದೆ. ಕುಸುಮಬಾಲೆಯ ಯಾಡಹಳ್ಳಿಯ ದನಕರುಗಳನ್ನು ಕಳ್ಳತನ ಮಾಡುವ ಪ್ರಸಂಗ, ಒಡಲಾಳದ ಸಾಕವ್ವನ ಕುಟುಂಬ ಕಡಲೇಕಾಯಿ ಮೂಟೆ

ಕಳ್ಳತನ ಮಾಡುವ ಪ್ರಸಂಗ, ಕುರುಮಯ್ಯ ಮತ್ತು ಅಂಕುಶದೊಡ್ಡಿಯ ಜುಂಗ್ಲಪ್ಪ ಗೋಡನ್‌ನಿಂದ ದವಸಧಾನ್ಯ ಕಳ್ಳತನ ಮಾಡುವ ಪ್ರಸಂಗಗಳ ಸಂದರ್ಭದಲ್ಲಿ ಇವರ ತಂತ್ರಗಾರಿಕೆಯು ಗ್ರಹಿಕೆಗೆ ಬರುತ್ತದೆ.

ಯಾಡಹಳ್ಳಿಯ ದನಕುರಿಗಳನ್ನು ಮೇಯಿಸುವಂತೆ ನಾಟಕ ಮಾಡಿ ಅವುಗಳನ್ನು ಹತ್ತಿರದ ಪಟ್ಟಣಕ್ಕೆ ಮಾರುವ ಸಂದರ್ಭವು ಅವನ ಚತುರತೆಯನ್ನು ಬಿಂಬಿಸುತ್ತದೆ. ಯಾಕೆಂದರೆ, ಕೀಳು ವರ್ಗದವನಾದ ಇವನು ಮೇಲ್ವರ್ಗದವರ ದನಕುರಿಗಳನ್ನು ಮಾರಿದನೆಂದರೆ, ಸುಮ್ಮನಿರಲಾರರೆಂಬ ಪ್ರಜ್ಞೆಯಿಂದ ಊರಿನ ಮುಂದಿನ ರಸ್ತೆಯ ಮಣ್ಣಿನಲ್ಲಿ ಧೂಳೆಬ್ಬಿಸುತ್ತಾ ಒಂದೇ ಸಮನೆ ಉರುಳಾಡ ತೊಡಗಿದನು. ಇವನು ಉರುಳಾಡುವಾಗ ಮಣ್ಣಿನ ಧೂಳು ಎದ್ದು, ಅಲ್ಲಿ ನಿಂತಿರೋ ಜನಕ್ಕೆ ಭಯ ಹುಟ್ಟುವಂತೆ ಮಾಡುತ್ತಾನೆ. ಈತನ ಗುರುತುಸಿಗದ ಕಾರಣ ಬೆಂಕಿಕಡ್ಡಿ ಗೀರಿ ಆ ಕತ್ತಲೆಯಲ್ಲಿ ಇವನ ಮುಖನೋಡಿ ಯಾಡನೆಂದು ಗುರುತಿಸುತ್ತಾರೆ. ಯಾಕೆ ಹೀಗಾಯಿತು ಎಂದು ಯಾಡನನ್ನು ಕೇಳಿದರೆ, ಲಪ್ಪೋ ಲಪ್ಪೋ ಲಪ್ಪೋ ಎಂದಷ್ಟೇ ಉತ್ತರಿಸುತ್ತಾನೆ. ಎಷ್ಟೇ ಬಾರಿ ಕೇಳಿದರೂ ಒಂದೇ ಉತ್ತರ ನೀಡಲು ಹತ್ತಿದ್ದಾಗ ಬೇಸತ್ತ ಜನ ತಮ್ಮ ಪಾಡಿಗೆ ಮನೆಗೆ ಹೋದನಂತರ ಉಳಿದ ಕೆಲವೇ ಜನರಿರುವಾಗ ಬಾಯಿ ಬಿಡುತ್ತಾನೆ.

> "ನಂಗ ಹೊಟ್ಟ ಕಳ್ತ ಬಂತು. ಜೀತಗಾರ ಐಕಳ್ಗ ನೋಡ್ಕಳಿ ಅಂದಿ. ನಾನು ಹಳ್ಳಕ ವೋದಿ, ಅದ್ಯಾಕಕನಿ ಸುಸ್ತಾದಂಗಾಯ್ತು. ಬಂದವ ಮುತ್ತುಗದ ಮರ್ದ ನೆರುಳಲಿ ಮಲಿಕಂಡು, ಅದ್ಯಾಕಕನಿ ನಂಗಾ ಮಾಯ್ದ ನಿದ್ದಾವು ಬಂದು ಅಗುತ್ತಗತ್ತು. ನಿದ್ದ ತಿಳ್ದು ಕಣ್ ಬುಟ್ಟೀ.....ನನ್ ಸುತ್ತಾ ಬಿಕೋ ಅಂತಿತ್ತು...[೩೮]"

ಎಂದು ಕಳ್ಳತನವನ್ನು ಯಾಡ ತನ್ನ ಮೈಮೇಲೆ ಬರದ ಹಾಗೆ ನಾಟಕ ಮಾಡುತ್ತಾನೆ. ಈ ಸಂದರ್ಭದಲ್ಲಿ ಅವಳ ತಾಯಿ ಅಕ್ಕ ಮಾದೇವಮ್ಮ ಹೊಡೆಯುತ್ತಾಳೆ. ಇದನ್ನು ನೋಡಿದ ಜನ ಬಿಡಿಸಿಕೊಳ್ಳುತ್ತಾರೆ. ಅಲ್ಲಿ ಸೇರಿದ ಜನರು ದನಕರುಗಳ ಗೊಡವೆ ಬಿಟ್ಟು ಯಾಡನ ಮೇಲೆ ಅನುಕಂಪ ಮಗ್ನರಾಗುತ್ತಾರೆ. ಯಾಡನ ಉದ್ದೇಶವೂ ಇದೇ ಆಗಿರುತ್ತದೆ. ಏಕೆಂದರೆ ಕಳ್ಳತನ ಮಾಡಿದರೂ ಕಳ್ಳತನ ಮಾಡದಿರುವಂತೆ ಇರಬೇಕೆಂಬುದು, ಈ ತಂತ್ರವನ್ನು ತಾನು ಹೋಟೆಲ್ ನಡೆಸುವ ಸಂದರ್ಭದಲ್ಲಿ ಇರುವೆಗಳು ಇವನ ಮುಂದೆಯೇ ಸಕ್ಕರೆ ಹರಳುಗಳನ್ನು ಕದ್ದೊಯ್ಯುತ್ತಿದ್ದವು. ಹಾಗಾಗಿ ಕದ್ದೊಯ್ಯುತ್ತಿರುವ ಇರುವೆಗಳನ್ನು 'ಕಳ್ಳ' ವೆಂದು ಭಾವಿಸಲಾಗದು. ಯಾಡನು ಕೂಡ ಹಾಗೆ ಭಾವಿಸದೇ ಸಕ್ಕರೆ ಹರಳುಗಳನ್ನು ಬಿಡಿಸಿಕೊಳ್ಳುತ್ತಾನೆ. ಆದರೆ, ಅವುಗಳನ್ನು ಸಾಯಿಸುವುದಿಲ್ಲ. ಹಾಗಾಗಿ ಯಾಡನು ಇದೇ ತಂತ್ರವನ್ನು ಬಳಸಿಕೊಂಡು ದನಕರುಗಳನ್ನು ಕಳ್ಳತನದಿಂದ ಮಾರಾಟ

ಮಾಡಿ ಕಳ್ಳನಲ್ಲದಂತೆ ವರ್ತಿಸಿ ಹಣ ಸಂಪಾದನೆ ಮಾಡಿ ಯಾಡ ಯಾಡೇಗೌಡನಾಗಿ ಪರಿವರ್ತನೆಯಾಗುತ್ತಾನೆ.

ಇಂಥದೇ ಪ್ರಸಂಗವು ಉಚಲ್ಯ ಆತ್ಮಚರಿತ್ರೆಯಲ್ಲಿ ಕಂಡುಬರುತ್ತದೆ. ಉಚಲ್ಯಾ ಅಲೆಮಾರಿ ಜನಾಂಗದವರ ಕಳ್ಳತನದ ತಂತ್ರ, ಚತುರತೆ, ಧೈರ್ಯದ ಪ್ರಸಂಗವನ್ನು ಲಕ್ಷ್ಮಣ ಗಾಯಕವಾಡರು ಹೀಗೆ ಹೇಳುತ್ತಾರೆ.

> "ನನ್ನ ತಾತ್ಯಾ ಮುದುಕನಾಗಿದ್ದರೂ ಬಹಳ ಚಾಣಕ್ಷ್ಯ. ಆತನ ಕಳ್ಳತನ ಉಳಿದವರಿಗಿಂತ ಬಿನ್ನ. ಅದು ಕಳ್ಳತನವೆಂದು ಯಾರಿಗೂ ಅನಿಸುತ್ತಿರಲಿಲ್ಲ. ನಮ್ಮ ಮನೆಯಲ್ಲಿ ಇಲಿಗಳದ್ದೇ ಸಾಮ್ರಾಜ್ಯ. ನಾನು ತಾತ್ಯಾ ಇಲಿ ಹಿಡಿಯುತ್ತಿದ್ದೆವು. ಈ ಇಲಿಗಳನ್ನು ಬಳಸಿ ತಾತ್ಯಾ ಕಳ್ಳತನ ಮಾಡುತ್ತಿದ್ದ. ಆತ ಅವುಗಳನ್ನು ಗೋಧಿ ಹೊಲಕ್ಕೊಯ್ದು ಬಿಟ್ಟು ಬರುತ್ತಿದ್ದ. ಅವು ತೆನೆ ಕತ್ತರಿಸಿ ಬಿಲದಲ್ಲಿ ಸಂಗ್ರಹಿಸುತ್ತಿದ್ದವು. ಸುಗ್ಗಿ ಬಳಿಕ ನಾನು ತಾತ್ಯಾ ಬಿಲಗಳನ್ನು ಅಗೆದು ಅಲ್ಲಿದ್ದ ಗೋಧಿಯನ್ನು ತರುತ್ತಿದ್ದೆವು. ಈ ರೀತಿ ತಾತ್ಯಾ ನಾಲ್ಕು ಗಡಿಗೆಗಳಷ್ಟು ಗೋಧಿ ಸಂಗ್ರಹಿಸುತ್ತಿದ್ದ. ರೈತರಾದರೋ ನಾವು ಇಲಿ ಹಿಡಿಯುತ್ತೇವೆಂದು ಭಾವಿಸಿ, ತಮ್ಮ ಹೊಲದಲ್ಲಿ ಇಲಿ ಕಡಿಮೆ ಆಗುತ್ತದೆಂದು ಭಾವಿಸಿ ಸಂತೋಷ ಪಡುತ್ತಿದ್ದರು. ನಾವಾದರೂ ಇಲಿ ಹಿಡಿದಿರುವ ನೆಪದಲ್ಲಿ ಜೋಳ ಸಂಗ್ರಹಿಸುತ್ತಿದ್ದೆವು. ಆದರೆ ಮುಂದೆ ಇಂಥ ಎಲ್ಲ ಚಾತುರ್ಯವೂ ಪೋಲೀಸರ ಕೈಗೆ ಸಿಕ್ಕಿ ಬಿದ್ದಾಗ ಭಯಂಕರ ಪರಿಣಾಮ ಬೀರುತ್ತಿತ್ತು. ಅವರು ನೀಡುತ್ತಿದ್ದ ಹಿಂಸೆ, ಮಾಡುತ್ತಿದ್ದ ಅಪಮಾನ, ತೆಗೆದುಕೊಳ್ಳುತ್ತಿದ್ದ ಲಂಚ-ಇವೆಲ್ಲ ನನ್ನ ಮನಸ್ಸನ್ನು ಘಾಸಿಗೊಳಿಸಿತು".[೩೯]

ಯಾಡನ ಹಾಗೂ ಲಕ್ಷ್ಮಣಗಾಯಕವಾಡರ ತಾತನ ಕಳ್ಳತನದ ತಂತ್ರ ಹೋಲಿಕೆಯಾಗುತ್ತವೆ. ಆದರೆ ಕಳ್ಳತನದ ಸ್ವರೂಪಗಳು ಭಿನ್ನವಾಗಿ ಕಾಣುತ್ತದೆ. ಈ ಎರಡೂ ಪಾತ್ರಗಳು ಇಲಿ ಹಾಗೂ ಇರುವೆಗಳ ಮೂಲಕವೇ ಕಳ್ಳತನದ ತಂತ್ರಗಳನ್ನು ಕಲಿತದ್ದು. ಇಂಥ ಕಳ್ಳತನವನ್ನು ಪ್ರತಿಬಾರಿಯೂ ಮುಂದುವರಿಸುತ್ತಲೇ ಇದ್ದರೆ, ತಾವು ಕಳ್ಳತನ ಮಾಡುವ ಆ ಮಾಲೀಕರಿಗೆ ಅನುಮಾನ ಉಂಟಾಗಿ ಸಿಕ್ಕು ಬೀಳುವುದು ಖಂಡಿತ ಎಂಬುದು ಗಾಯಕ್ವಾಡರ ತಾತ್ಯಾ ಪೋಲೀಸರ ಕೈಗೆ ಸಿಕ್ಕು ಬೀಳುವ ಸಂದರ್ಭವು ಮನಗಾಣಿಸುತ್ತದೆ. ಆದರೆ ಯಾಡ ಯಾರ ಕೈಗೆ ಸಿಕ್ಕು ಬೀಳುವುದಿಲ್ಲ, ಅಂದ ಮೇಲೆ ಒಂದು ಬಾರಿ ಮಾತ್ರ ಕಳ್ಳತನ ಮಾಡಿರಬೇಕು. ಏಕೆಂದರೆ ಲೇಖಕರು ಯಾಡ ಎಷ್ಟು ಬಾರಿ ಕಳ್ಳತನ ಮಾಡಿದನೆಂಬುದನ್ನು ಕಾದಂಬರಿಯಲ್ಲಿ ಹೇಳಿಲ್ಲ. ಹಾಗಾಗಿ ಓದುಗರಿಗೆ ಸಂಶಯ ಹುಟ್ಟುವುದು

ಸಹಜ. ಇಂಥ ಸಂಶಯಕ್ಕೆ ಲಕ್ಷ್ಮಣಗಾಯಕವಾಡರ ತಾತ್ಯಾ ಹಾಗೂ ಸಾಕವ್ವನ ಕುಟುಂಬ ಉದಾಹಣೆಯಾಗಿ ನಿಲ್ಲುತ್ತಾರೆ. ಕಡಲೇಕಾಯಿ ಪತ್ತೆ ಹಚ್ಚಲು ಬಂದ ಪೋಲೀಸರು ಸಾಕವ್ವನ ಮನೆಯಲ್ಲಿ ಶೋಧನೆ ಮಾಡುತ್ತಾರೆ. ಅಂದ ಮೇಲೆ ಸಾಕವ್ವನ ಕುಟುಂಬ ಪ್ರತಿಬಾರಿಯೂ ಕಡಲೇ ಕಾಯಿ ಕಳ್ಳತನವನ್ನು ಮಾಡುತ್ತಿದ್ದರು ಎಂಬುದು ಗ್ರಹಿಕೆಗೆ ಬರುತ್ತದೆ. ಇಲ್ಲಿ ಪೋಲೀಸು ಎಷ್ಟೇ ಶೋಧ ನಡೆಸಿದರೂ ಕಳ್ಳತನ ಪತ್ತೆಯಾಗುವುದಿಲ್ಲ. ಇದು ಒಂದು ರೀತಿಯಲ್ಲಿ ಚಾತುರ್ಯತೆಯೇ ಆಗಿದೆ.

ಹೀಗೆ ಕೆಳವರ್ಗ ಇಂಥ ದಂಧೆಯ ಮೂಲಕ ಹಸಿವಿನ ಸಮಸ್ಯೆಯನ್ನು ಪರಿಹರಿಸಲು ಪರಿತಪಿಸುವುದು ಒಂದಾದರೆ, ಹಸಿವಿನ ಪರಿಹಾರಕ್ಕಾಗಿ ಮಾಡಿದ ಕಳ್ಳತನ ಮಾಲೀಕರ ಕೈಗೆ ಸಿಕ್ಕುಬಿದ್ದು ಮತ್ತೊಂದು ಸಮಸ್ಯೆಯನ್ನು ಅನುಭವಿಸುತ್ತದೆ. ಈ ಬಗೆಯ ಸಮಸ್ಯೆಗಳಿಂದ ನಲುಗಿಯಾದರೂ ಬದುಕನ್ನು ಪ್ರೀತಿಸುತ್ತದೆ.

ಕೆಳವರ್ಗಗಳು ತಮ್ಮ ಹಸಿವು ಮತ್ತು ಆರ್ಥಿಕ ಸಮಸ್ಯೆ ಪರಿಹರಿಸಿಕೊಳ್ಳುವ ಹಲವು ಬಗೆಯ ಒಳನೋಟಗಳ ಕಾಯಕಗಳನ್ನು ಮಾಡುತ್ತವೆ. ಇಂಥ ಹತ್ತು ಹಲವು ಬಗೆಯ ಸ್ಥಿತಿಯನ್ನು ದಲಿತ ಬಂಡಾಯ ಕಾದಂಬರಿಗಳು ಕಟ್ಟಿಕೊಡುತ್ತವೆ. ಆ ಮೂಲಕ ಸೋತ ಸಮುದಾಯಗಳ ಆರ್ಥಿಕ ಸಂಪಾದನೆಯ ಸ್ವರೂಪವನ್ನು ಅನಾವರಣಗೊಳಿಸುತ್ತದೆ.

**ರಾಜಕೀಯ ಸಮಸ್ಯೆ**

ಕೆಳವರ್ಗಗಳಿಗೆ ಆರ್ಥಿಕ ಸಮಸ್ಯೆ, ಸಾಮಾಜಿಕ ಸಮಸ್ಯೆಗಳ ಹಾಗೆ ರಾಜಕೀಯ ಸಮಸ್ಯೆಯೂ ಕಾಡುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೆಳವರ್ಗಗಳು, ಮೇಲ್ವರ್ಗಗಳ ರಾಜಕೀಯ ಅಡಿಯಲ್ಲಿ ಬದುಕುತ್ತಿರುವ ಅಂಶಗಳನ್ನು ದಲಿತ ಬಂಡಾಯ ಕಾದಂಬರಿಗಳು ಗುರ್ತಿಸುತ್ತವೆ. ರಾಜಕೀಯ ಎಂಬುದು ಸಾಮಾಜಿಕ ಬಹಿರಂಗದ ವ್ಯವಹಾರವೆಂದೂ ಇಲ್ಲಿ ಗೃಹಿತ. ಹಾಗೆ ನೋಡಿದರೆ ರಾಜಕರಣ ಎಂಬುದು ಬದುಕಿನಿಂದ ಸಮಾಜದಿಂದ ಬೇರ್ಪಟ್ಟ ಸ್ವಯಂ ಸಂರಚನಾ ಘಟಕವೇನಲ್ಲ. ಬದಲಾಗಿ ಅದು ಮನುಷ್ಯನ 'ಇರುವು' ಮತ್ತು 'ಅರಿವ'ನ್ನು ನಿರ್ದೇಶಿಸುವ, ನಿಯಂತ್ರಿಸುವ 'ರಾಜನೀತಿ' ಅರ್ಥಾತ್ ಆಳುವ ಪ್ರಕ್ರಿಯೆಯೇ ಆಗಿರುತ್ತದೆ. ರಾಜಕಾರಣ ಎಂಬುದು ಮೂಲತಃ 'ಅಧಿಕಾರಸ್ಥ' ನೆಲೆಯೇ ಆಗಿರುತ್ತದೆ.

ಮನುಷ್ಯನ 'ಇರುವು' ಎನ್ನುವುದು ಜಾತಿ, ಮತ, ವರ್ಗ, ಮತ ಧರ್ಮ, ಶಿಕ್ಷಣ ಮುಂತಾದ ಈ ಎಲ್ಲಾ ಸಾಮಾಜಿಕ-ಆರ್ಥಿಕ-ಶೈಕ್ಷಣಿಕ-ಆಧ್ಯಾತ್ಮಿಕ-ಸಾಂಸ್ಕೃತಿಕ ರಾಜಕೀಯದಂಥ ಮಾನವ ನಿರ್ಮಿತ

'ಅಧಿಕಾರಸ್ಥ' ನಿಯಂತ್ರಕಗಳ ನೆಲೆಗಳನ್ನು ಮೀರುವುದರಲ್ಲಿಯೇ ಒಬ್ಬ ಲೇಖಕನ ಚಾರಿತ್ರಿಕ ಮಹತ್ವ ಅಥವಾ ಮಿತಿಗಳನ್ನು ಗುರುತಿಸಬೇಕಾಗುತ್ತದೆ. ಇರುವು ಎನ್ನುವುದು ಅರಿವಿನ ಮೂಲವಾಗುತ್ತ, ಮಾನವ ನಿರ್ಮಿತ ಈ ನಿಯಂತ್ರಕಗಳನ್ನು ಮೀರುವ ಕ್ರಿಯೆಯಲ್ಲಿಯೇ ಸಂಘರ್ಷದ ಬೀಜವಿದ್ದು, ಹೊಸ ಅರಿವಿನ ಹೊಸ 'ಇರುವಿನ' ಮನುಷ್ಯನನ್ನು ಪುನರ್ ನಿರ್ಮಿಸಲು ಉದ್ಯುಕ್ತವಾಗುತ್ತದೆ. ಪುನರ್ ನಿರ್ಮಾಣದ ಇಂಥ ಶಕ್ತಿಯನ್ನೇ ಆಳದಲ್ಲಿ 'ರಾಜಕಾರಣ' ಎನ್ನಬಹುದು.

ಈ ಪುನರ್ ನಿರ್ಮಾಣದ ಕ್ರಿಯೆಗೆ ಕೆಳವರ್ಗಗಳು ತುಡಿಯುತ್ತಿವೆ. ಹಾಗಾಗಿ ಆ ಸಮುದಾಯದೊಳಗಿನ ಹಿರಿಯನಿಗೆ ಅಥವಾ ಪ್ರಜ್ಞಾವಂತ ವ್ಯಕ್ತಿಗೆ ಅಧಿಕಾರಸ್ಥಾನವನ್ನು ನಿರ್ವಹಿಸಲಾಗುತ್ತದೆ. ಆದರೂ ಅನುಭವ ಮತ್ತು ಬುದ್ಧಿವಂತಿಕೆಯ ಕಾರಣದಿಂದ ಹಿರಿಯನಿಗೆ ಗೌರವ ಸಲ್ಲುತ್ತದೆ. ಈ ಹಿರಿಯರ ಸಭೆಯೇ ದಲಿತರ ರಾಜಕೀಯ ವ್ಯವಸ್ಥೆಯೂ ಆಗಿದೆ. ಇಂಥ ಪ್ರಜ್ಞಾವಂತರು ರಾಜಕೀಯ ನಡೆಸಿದರೆ, ಪ್ರತಿಷ್ಠಿತ ವರ್ಗಗಳು ಇವರನ್ನು ದೂರೀಕರಿಸುತ್ತವೆ. ಇದೇ ಸ್ಥಾನದಲ್ಲಿ ಮಾನಸಿಕವಾಗಿ ದುರ್ಬಲನಾದಂತಹ ವ್ಯಕ್ತಿ ಇದ್ದರೆ, ಅಂತಹವರಿಗೆ ಹೆಚ್ಚು ಗೌರವ ನೀಡುತ್ತಾರೆ. ಇದನ್ನು ಯು.ಆರ್. ಅನಂತಮೂರ್ತಿಯವರ ಮಾತಿನಲ್ಲಿ ಹೇಳುವುದಾದರೆ "ದಲಿತ ಎಂದರೆ ಒಬ್ಬ ಭಂಗಿಯಾಗಿದ್ದ ಒಬ್ಬ ದಲಿತನನ್ನು ಭಂಗಿಯೆಂದು ಕಂಡಾಗ ಮಹರ್ ಆಗಿ ನಮ್ಮೆದುರು ಇದ್ದಾಗ ಅವನನ್ನು ಪ್ರೀತಿಸೋದು ಕಷ್ಟ"[೬] ಎನ್ನುವ ಮಾತು ಪ್ರಸ್ತುತವೆನಿಸುತ್ತದೆ. ದಲಿತನ ದೌರ್ಬಲ್ಯ ಶೋಷಕನ ಶೋಷಣೆಯ ಪ್ರತೀಕ. ಹೀಗೆ ದಲಿತನ ದೌರ್ಬಲ್ಯದ ಮೂಲಕ ಮೇಲುವರ್ಗ ತನ್ನ ಅಧಿಕಾರವನ್ನು ಚಲಾಯಿಸಲು ಸನ್ನದ್ಧವಾಗಿರುತ್ತದೆ. ಇದರ ಸೃಷ್ಟಿಕತೆಯನ್ನು ಬರಗೂರು ರಾಮಚಂದ್ರಪ್ಪ ಅವರ 'ಒಂದು ಊರಿನ ಕತೆ', ಅರವಿಂದ ಮಾಲಗತ್ತಿಯವರ 'ಕಾರ್ಯ', ಮ.ನ.ಜವರಯ್ಯನವರ 'ಮಾಗಿ', ಜಂಬಣ್ಣ ಅಮರ ಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ', ಕುಂ.ವೀ.ಯವರ 'ಬೇಲಿ ಮತ್ತು ಹೊಲ ಕಾದಂಬರಿಗಳಲ್ಲಿ ಕಾಣುತ್ತೇವೆ.

ಬರಗೂರರ 'ಒಂದು ಊರಿನ ಕಥೆ' ಕಾದಂಬರಿಯಲ್ಲಿ ಕೆಳವರ್ಗದ ಮೆಂಬರನ್ನು ಆಯ್ಕೆ ಮಾಡುವ ಸಂದರ್ಭದೊಳಗೆ ಕೆಳವರ್ಗದ ಅಕ್ಷರಸ್ಥ ರಾಮುನನ್ನು ಅಪರಾಧಿಯನ್ನಾಗಿ ಮಾಡಲು ಅದೇ ವರ್ಗದ ಹನುಮಂತಯ್ಯನನ್ನು ಆಯ್ಕೆ ಮಾಡುವ ಮೇಲುವರ್ಗದ ಕ್ರಿಷ್ಣಪ್ಪ, ಜೋಯಿಸರನವರ ಬಸವಯ್ಯ ರಾಜಕೀಯವನ್ನು ಗಮನಿಸಬೇಕು. ಅನಕ್ಷರಸ್ಥ ದಲಿತ ಹನುಮಯ್ಯನ ದೌರ್ಬಲ್ಯಗಳನ್ನು ಬಹುಸೂಕ್ಷ್ಮವಾಗಿ ಗ್ರಹಿಸಿ ಮೆಂಬರು ಮಾಡುವ ನಾಟಕೀಯತೆಯನ್ನು ಈ ರೀತಿ ಪ್ರಕಟಿಸುತ್ತದೆ.

"ಇನ್ನೇನು ಇಲ್ಲ ಕಣ್ ಹನುಮಯ್ಯ ನೀನು ನಮ್ಮ ಪರವಾಗಿ ನ್ಯಾಯಸ್ಥ ಆಗ್ಬಿಡ್ಬೇಕು, ಆಗೋ ಹಂಗೆ ನಾವೆಲ್ಲ ಮಾಡ್ತೇಕು. ಬಸಯ್ನೋರು ಹೇಳ್ಬಿಟ್ಟುವ್ರೆ ಇನ್

ಯಾತ್ರದೈತಪ್ಪ ಕೆಲ್ಸ ಅಂದ್ರೆ ಒಂದಷ್ಟು ಜನ ಕಂಡ್ಬಿಟ್ಟು ಸರ್ಮ್ಮಾಡ್ಕಂಡ್ ಸರ್ಕ್ಯಾಗ್ ಹೇಳಂಗ್ ಮಾಡಿದ್ರಾಯ್ತು. ಆ ರಾಮನೇ ಗೌರೀನ ಹಿಡ್ಕಳ್ಳಾಕ್ ಬಂದಿದ್ದ ಇವ್ನು ಎದ್ದೆನೋ ಬಿದ್ದನೋ ಅಂಬ್ತ ಓಡಿ ಕಬ್ಬಿನ ಗದ್ದೆ ಬಿದ್ದಾಗ ಜನ ಕಂಡ್ರು; ಓಡ್ಹಂದ್ರು ರಾಮನ್ನ ಹಿಡ್ಕಂಡ್ರು; ಅಂಬ್ತ ಹೇಳ್ಸಿದ್ರಾಯಿತು. ಹಿಂಗೆಲ್ಲ ಮಾಡ್ಬೇಕು ಅಂದ್ರೆ ನಮ್ಮೋರೆ ಒಬ್ರುನ್ಯಾಯಸ್ಥರು ಇರ್ಬೇಕು ನೋಡು ಕಿಮಿಕ್ ಅನ್ನಂಗಿರಲ್ಲ; ಹಂಗಂಬ್ತ ಬಸಯ್ನೋರೆ ಹೇಳವ್ರೆ''[೬೭]

ಎನ್ನುವ ಕ್ರಿಷ್ಣಪ್ಪನ ಮಾತು ದಲಿತರ ನಡುವೆ ಸಂಘರ್ಷವುಂಟು ಮಾಡಿ, ಆ ಮೂಲಕ ತನ್ನ ಅಧಿಕಾರ ನಡೆಸುವ ಕುತಂತ್ರ ರಾಜಕೀಯವನ್ನು ಪ್ರಕಟಿಸುತ್ತದೆ. ಶ್ರೀಮಂತನಾದವನು ಎಂಥ ಮೂರ್ಖತನದ ಮಾತುಗಳನ್ನಾಡಿದರೂ ಅದನ್ನು ಪ್ರಶಂಸೆ ಪಡುವ ಜನರು ಇದ್ದೇ ಇರುತ್ತಾರೆ. ಅಧಿಕಾರ ಮತ್ತು ಶ್ರೀಮಂತಿಕೆ ಯಾವಾಗಲೂ ಒಂದು ಗುರಿಯತ್ತ ತಮ್ಮ ಗಮನ ನೆಟ್ಟಿರುತ್ತವೆ. ಅವೆಂದರೆ ಹಿಂದಿನ ಸ್ಥಿತಿಗಳಿಂದ ಕಲಿಯುವುದು ವರ್ತಮಾನ ಸ್ಥಿತಿಗಳ ಬಗ್ಗೆ ತಂತ್ರ ರೂಪಿಸುತ್ತವೆ.

ವಾಸ್ತವವಾಗಿ ಸಾರ್ವಜನಿಕ ಚುನಾವಣಾ ಸಂದರ್ಭಗಳಲ್ಲಿ ಮೀಸಲಾದ ಕ್ಷೇತ್ರಗಳಲ್ಲಿ ಪ್ರತಿಷ್ಠಿತ ವರ್ಗ ಆ ಕ್ಷೇತ್ರಗಳ ಕಣದಲ್ಲಿ ನಿಲ್ಲಿಸುವ ಅಭ್ಯರ್ಥಿಯ ಆಯ್ಕೆಯನ್ನು ಗಮನಿಸಬೇಕು. ಕಾದಂಬರಿಯಲ್ಲಿ ಹೇಳಿದಂತೆ ಹನುಮನಂಥ ಭಂಗಿ ದಲಿತನ ಹುಡುಕಾಟ ಮಾಡಿ ಕಣಕ್ಕಿಳಿಸಿ, ಜಯಶೀಲರನ್ನಾಗಿ ಮಾಡುತ್ತದೆ. ಮೇಲುವರ್ಗ ತನ್ನ ಹಿತಾಸಕ್ತಿ ಕಾಯ್ದುಕೊಂಡು ಆ ಮೂಲಕ ತನ್ನ ಅಧಿಕಾರ ಮುಂದುವರೆಸುವುದು ಒಂದು ಬಗೆಯದಾದರೆ, ಕೆಳವರ್ಗಗಳು ಪ್ರಭಾವ ಶಾಲಿಗಳಾಗುವುದನ್ನು ಸಹಿಸದೆ ಅವರ ಅಧಿಕಾರ ಕಸಿದುಕೊಳ್ಳುವುದು ಮತ್ತೊಂದು. ಈ ಇರಾದೆಯಿಂದ ತನ್ನ ಅಧಿಕಾರವನ್ನು ಮುಂದುವರಿಸಲು ಸಜ್ಜಾಗುತ್ತದೆ. ವಾಸ್ತವವಾಗಿ ಹೇಳುವುದಾದರೆ ಹಗರಿಬೊಮ್ಮನಹಳ್ಳಿ ತಾಲೂಕಿನ ಕಲ್ಲಾಹಳ್ಳಿ ತಾಂಡದ ಗ್ರಾಮ ಪಂಚಾಯಿತಿ ಅಧ್ಯಕ್ಷೆ ಲಚಮಿಬಾಯಿ ವಿಷಯದಲ್ಲಿ ನಡೆದ ಒಂದು ಪ್ರಸಂಗ ಇದಕ್ಕೆ ಜೀವಂತ ಉದಾಹರಣೆ.

ಈ ಮಹಿಳೆ ಮೂಲತಃ ಬಡತನದ ಬೇಗೆಯಲ್ಲಿ ಬೆಂದವಳು, ಅಕ್ಷರಜ್ಞಾನವಿಲ್ಲ, ಕನ್ನಡ ಭಾಷಾಜ್ಞಾನ ಮೊದಲೇ ಇಲ್ಲ. ಇಂತಹ ಮಹಿಳೆಯನ್ನು ಪಕ್ಕದ ಊರಿನ ರೇವಣಗೌಡ ಆಯ್ಕೆ ಮಾಡಿ ಅಧ್ಯಕ್ಷೆಯಾದ ಮೇಲೆ ಮನೆಕಟ್ಟಿಸಿಕೊಡುತ್ತೇನೆಂದು ಭರವಸೆ ನೀಡಿ ಅಧ್ಯಕ್ಷೆಯನ್ನಾಗಿ ಮಾಡಿದರು. ಆ ಮಹಿಳೆಯೇ ಹೇಳುವಂತೆ "ಗೌಡ್ರು ನನಗೊಂದು ಮನೆಕಟ್ಟಿಸಿಕೊಡ್ತೀನಿ ಅಂದಿದ್ದರು ಇಲ್ಲಿಗೆ ಮೂರು ವರ್ಷ ಕಳೆಯಿತು, ಮನೆಯಿಲ್ಲ, ಹಣವಿಲ್ಲ, ಆದರೆ 'ಹೆಬ್ಬೊಟ್ಟು' ಮಾತ್ರ ಹಾಕಿಸಿಕೊಂಡು ಹೋಗುತ್ತಾರೆ'' ಎಂದು ಮನನೊಂದು ನುಡಿಯುತ್ತಾರೆ. ಇದು ನಮ್ಮ ಗ್ರಾಮೀಣ ಸಮಾಜದಲ್ಲಿಯ ರಾಜಕೀಯ ಸಮಸ್ಯೆಯಾಗಿದೆ. ನಾನು ಸಂಡೂರು ತಾಲೂಕಿನಲ್ಲಿ ಗ್ರಾಮ ಪಂಚಾಯ್ತಿ ಮಹಿಳಾ

ಸದಸ್ಯರನ್ನು ಸಂದರ್ಶನ ಮಾಡಿದಾಗ ಲಚುಮಿಬಾಯಿಯಂತಹ ಎಷ್ಟೋ ಅಮಾಯಕ ಜನರು ಈ ರೀತಿಯ ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ.

ಇಲ್ಲಿ ಗಮನಿಸಬೇಕಾಗಿರುವುದು ಇದೇ ತಾಂಡದಲ್ಲಿ ಅಕ್ಷರಸ್ಥ, ಪ್ರಜ್ಞಾವಂತೆ ಮಹಿಳೆಯರಿರಲಿಲ್ಲವೇ ಎಂಬುದೂ ಅಕ್ಷರಸ್ಥ ಮಹಿಳೆಯ ಆಯ್ಕೆಯ ಮೂಲಕ ಶೋಷಣೆಗೊಳಗಾದ ಅಧ್ಯಕ್ಷೆ ಲಚುಮಿಬಾಯಿಯ ಕೆಲವೊಂದು ಸಮಸ್ಯೆಗಳನ್ನಾದರೂ ಬಗೆಹರಿಸಬಹುದಾಗಿತ್ತು. ಅಲ್ಲದೆ ತನ್ನ ಸಮುದಾಯಗಳ ಸಮಸ್ಯೆಗಳಿಗೆ ಸ್ಪಂದಿಸಬಹುದಿತ್ತು. ಆಯ್ಕೆಯ ಪ್ರಕ್ರಿಯೆಯಲ್ಲಿ ತನ್ನ ಸಮುದಾಯಗಳ ಜನರಿಗೆ ಅಧಿಕಾರವಿರಲಿಲ್ಲವೆ? ರೇವಣ ಗೌಡನೇ ಯಾಕೆ ಪ್ರಮುಖ ಪಾತ್ರವಹಿಸಬೇಕಾಗಿತ್ತು? ಎನ್ನುವಲ್ಲಿ ರೇವಣಗೌಡ ಲಚುಮಿ ಬಾಯಿಯ ಕೆಲವೊಂದು ಒಳ್ಳೆಯ ಗುಣಗಳನ್ನು ಆ ಸಮುದಾಯಗಳ ಮುಖಂಡರುಗಳಲ್ಲಿ ಬಿತ್ತರಿಸಿ, ಮನವೊಲಿಸುತ್ತಾನೆ. ಆ ಮೂಲಕ ಆ ಜನಾಂಗದ ಸೂಕ್ಷ್ಮನೆಲೆಯಲ್ಲಿ ಅಧಿಕಾರದ ಗದ್ದುಗೆ ನಿರ್ಮಿಸಿಕೊಳ್ಳುತ್ತಾನೆ. ಒಂದು ವೇಳೆ ಪ್ರಜ್ಞಾವಂತ ಮಹಿಳೆಯನ್ನು ಆಯ್ಕೆ ಮಾಡಿ ಅಧಿಕಾರ ನೀಡಿದರೆ, ರೇವಣಗೌಡನಂಥ ಮೇಲುವರ್ಗಗಳಿಗೆ ಅಧಿಕಾರ ನಡೆಸಲು ಕಷ್ಟಸಾಧ್ಯ. ಏಕೆಂದರೆ, ವರ್ತಮಾನದ ಪ್ರಜ್ಞೆ ದಲಿತನಲ್ಲಿ ಸದಾ ಜಾಗೃತವಾಗಿರುತ್ತದೆ. ಹಾಗಾಗಿ ಮೇಲುವರ್ಗಗಳನ್ನು ತನ್ನ ಅಧಿಕಾರದಿಂದ ಪ್ರಶ್ನಿಸುವ ಶಕ್ತಿ ಅವನಲ್ಲಿ ಅಡಗಿರುತ್ತದೆ. ಆದರೂ ಬಹುಸಂಖ್ಯಾತ ಮೇಲುವರ್ಗಗಳ ಅಡಿಯಲ್ಲಿ ಶೋಷಣೆಗೊಳಗಾಗುತ್ತಾನೆ ಇಂಥದೊಂದು ಪ್ರಸಂಗ ಮನಜರ 'ಮಾಗಿ ' ಕಾದಂಬರಿಯಲ್ಲಿ ಯಥಾವತ್ತಾಗಿ ಚಿತ್ರಿತಗೊಂಡಿದೆ.

ಈ ಕಾದಂಬರಿಯಲ್ಲಿ ಬರುವ ದಲಿತ ಸಮುದಾಯದ ಪ್ರಜ್ಞಾವಂತ ದಾಸಪ್ಪನ ಯಜಮಾನಗಿರಿಯನ್ನು ಮೊಟಕುಗೊಳಿಸುವ ಸಲುವಾಗಿ ಮೇಲುವರ್ಗಗಳ ರಾಜಕೀಯವನ್ನು ಗಮನಿಸಬೇಕು. ಆನಂದಪುರದ ಯಜಮಾನ್ ದಾಸಪ್ಪ ತನ್ನ ಪ್ರಜ್ಞಾಪೂರ್ವತೆಯಿಂದ ತನ್ನ ಸಮುದಾಯಗಳ ಸಮಸ್ಯೆಗಳಿಗೆ ಸ್ಪಂದಿಸುವವನಾಗಿರುತ್ತಾನೆ. ಇದನ್ನು ಸಹಿಸದ ಅದೇ ಊರಿನ ಮೇಲುವರ್ಗದ ದೊಡ್ಡ ಕುಳ ನರಸಿಂಹಯ್ಯ ಆ ಊರಿನ ಅಧಿಕಾರ ಸೂತ್ರ ಹಿಡಿಯಲು ಆ ಊರಿನ ಜನಗಳ ಮಧ್ಯೆ ಸಂಘರ್ಷ ವನ್ನುಂಟು ಮಾಡಿ ದಾಸಪ್ಪನವರನ್ನು ಅಪರಾಧಿಯಾಗಿ ಪ್ರತಿಬಿಂಬಿಸಿ, ತಾನು ಅಧಿಕಾರ ಪಡೆಯುವ ರಾಜಕೀಯ ಹುನ್ನಾರ ಮಾಡುತ್ತಾನೆ. ಆ ಮೂಲಕ ಪ್ರತಿಷ್ಠಿತ ವ್ಯಕ್ತಿಯಾಗಲು ತಂತ್ರ ರೂಪಿಸುತ್ತಾನೆ. ಹೋಂ ಮಿನಿಸ್ಟರ್ ನಂಜೆಗೌಡ್ರ ಮೂಲಕ ಕಮೀಷನರಿಗೆ ಹೇಳಿಸಿ, ಅವರ ಮೂಲಕ ಯಾಜಮಾನ್ ದಾಸಪ್ಪರ ಮೇಲೆ ದೌರ್ಜನ್ಯವೆಸಗುವ ಕೃತ್ಯವನ್ನು ಗ್ರಹಿಸಬೇಕು. "ಯಜಮಾನ್ ದಾಸಪ್ಪ ನೀವೇಯೆನ್ರಿ?..... ಒಂದು ಊರಿನ ಯಜಮಾನಿಕೆ ವಹಿಸಿಕೊಂಡಿರೋ ನಿನಗೆ ಸ್ವಲ್ಪನೂ ಬುದ್ದಿಯಿಲ್ಲ. ನಿಮ್ಮನೆಲ್ಲಾ ಅರಮನೆ ಮುಂದೆ ಸೇರಿಸಿದ್ದೇ ತಪ್ಪಾಯ್ತು"[೨೮] ಎನ್ನುವ ಕಮಿಷನರ್ ಮಾತುಗಳು

ಕೆಳವರ್ಗಗಳನ್ನು ವಂಚಿಸುವ ತಂತ್ರವಾಗಿದೆ. ಇದಕ್ಕೆ ದಾಸಪ್ಪ ಪ್ರತಿಕ್ರಿಯಿಸುವ ರೀತಿ ಹೀಗಿದೆ. "ಸಾಹೇಬ್ರೆ ಇದೇ ಮಾತ ಇನ್ನಾವನಾದ್ರೂ ಇಲ್ಲಿ ಆಡಿದ್ರೆ ಕತೆ ಬ್ಯಾರೇ ಆಗೋಯ್ತಿತ್ತು. ಇದೇ ಮಾತಾ ನೀವು ಒಬ್ಬ ಸಾಬಿಗೋ ಒಬ್ಬ ಕಿರಿಸ್ತಾನ್‌ದೊನೊಗೋ ಹೇಳೋ ತಾಕತ್ತಿದ್ದರ ನಿಮ್ಗೆ? ಅವತ್ತು ನಮ್ಮವರ್ ಕೈಲೂ ಮಚ್ಚು, ಕೊಡ್ಲಿ ಇದ್ರೆ ನಾವು ತೋರಿಸ್ತಿದ್ರೊ ಕತೆಯಾ, ನಿಮ್ಮಂತಾ ನಿಯತ್ತಿಲ್ಲದ ಜನರ ನ್ಯಾಯ ನಮಗೆ ಬೇಕಾಗಿಲ್ಲ. ಎದ್ ನಡ್ರಿ ಆಚ್ಗೆ"[೨೮] ಎನ್ನುವ ಮಾತುಗಳು ದಲಿತನಲ್ಲಿಯ ಎಚ್ಚರ ಹಾಗೂ ಸ್ವಾಭಿಮಾನವನ್ನು ಪ್ರಕಟಿಸುತ್ತದೆ. ಬೆಂಗಳೂರಿನಲ್ಲಿ ಅಂಬೇಡ್ಕರ್ ಪ್ರತಿಮೆಗೆ ಅವಮಾನ ಮಾಡಿದ್ದು ಗಮನಕ್ಕೆ ಬರುತ್ತದೆ. ಬಿ.ಟಿ. ಲಲಿತನಾಯ್ಕರ ಪುತ್ರ ಅಂಬೇಡ್ಕರ್ ಪ್ರತಿಮೆಗೆ ಮಧ್ಯಾಭಿಷೇಕ ಮಾಡಿದನೆಂಬ ಅಪರಾಧದಿಂದ ರಾಜಕೀಯ ಕುತಂತ್ರಕ್ಕೆ ಬಲಿಯಾದ ದಲಿತ ಸಚಿವೆ ಲಲಿತಾನಾಯ್ಕರ ಮಂತ್ರಿ ಪದವಿಗೆ ರಾಜೀನಾಮೆ ಕೊಡಿಸುವುದರ ಮೂಲಕ ಅಧಿಕಾರ ಕಸಿದುಕೊಂಡಿದ್ದನ್ನು ಸೂಚಿಸಬಹುದು.

ಈ ದೇಶದ ಅಧಿಕಾರ ಹಿಡಿದಿರುವ ಮೇಲುವರ್ಗ, ಆ ಮೂಲಕ ಕೆಳವರ್ಗಗಳ ಮೇಲೆ ಎಸಗುವ ದೌರ್ಜನ್ಯ ಅತ್ಯಾಚಾರಗಳನ್ನು ಪ್ರಶ್ನಿಸುವ ಪ್ರಜ್ಞಾವಂತ ದಲಿತನನ್ನು ಯಾರೂ ಪ್ರೀತಿಸುವುದಿಲ್ಲ. ಬದಲಾಗಿ ತಾನೇ ಶೋಷಣೆಗೊಳಗಾಗುತ್ತಾನೆ. ಇಂಥ ಸಂದರ್ಭಗಳಲ್ಲಿ ಅನಂತಮೂರ್ತಿಯವರ ಮಾತು ಅರ್ಥಪೂರ್ಣವಾಗಿದೆ. ಕುಂ.ವೀ.ಯವರ 'ಬೇಲಿ ಮತ್ತು ಹೊಲ'ದಲ್ಲಿ ಕಹಳೆ ಪತ್ರಿಕೆಯ ಸಂಪಾದಕ 'ಪಾಟೀಲ' ಪೋಲೀಸರ ದೌರ್ಜನ್ಯ, ಕೃತ್ಯವನ್ನು ಪ್ರಶ್ನಿಸಿ ತನ್ನ ಪತ್ರಿಕೆಯಲ್ಲಿ ಪ್ರಕಟಿಸುವ ಮೂಲಕ ತಾನೇ ಪೋಲೀಸರ ದೌರ್ಜನ್ಯಕ್ಕೆ ಒಳಗಾಗುವ ಪ್ರಸಂಗವನ್ನು ಕಾದಂಬರಿ ಚಿತ್ರಿಸುತ್ತದೆ.

ದೌರ್ಜನ್ಯಕ್ಕೊಳಗಾಗಿದ್ದ ಪಾಟೀಲ್ ತನಗೆ ಆದ ಅವಮಾನವನ್ನು ಪತ್ರಕರ್ತರ ಸಂಘದ ಮೂಲಕ ಸರಕಾರದ ಮುಂದೆ ನ್ಯಾಯ ಕೋರುವಾಗ ಮುಖ್ಯಮಂತ್ರಿ ಪ್ರತಿಕ್ರಿಯಿಸುವುದು ಗಮನಾರ್ಹವಾಗಿ ಕಾಣುತ್ತದೆ. ಕಾದಂಬರಿಕಾರನ ನಿರೂಪಣೆಯಲ್ಲಿ ವಾಸ್ತವತೆಯನ್ನು ಸ್ಪಷ್ಟವಾಗಿ ಗುರ್ತಿಸಬಹುದು. "ಸಾಧ್ಯವಿಲ್ಲ, ಸಾಧ್ಯವಿಲ್ಲ, ಬೇರೆ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ರಾಜ್ಯಪರವಾಗಿಲ್ಲ. ಈಗೇನು ನಡೆಯಬಾರದ್ದೇನೂ ನಡೆದು ಹೋಗಿಲ್ಲ ಒಂದಿಷ್ಟು ಲಂಚ ತಿಂದದ್ದು ತಪ್ಪಲ್ಲ. ಪತ್ರಿಕಾ ಸ್ವಾತಂತ್ರ್ಯ ಐತಂತ ಪೋಲೀಸ್ ಇಲಾಖೆ ಮಾನನೇ ತೆಗೆದು ಹಾಕಿದರೆ ಕಹಳೆ ಸಂಪಾದಕರನ್ನು ಬಿಡೋದಾದ್ರು ಹೇಗೆ! ಎಷ್ಟು ಕೊಟ್ಟರೂ ಬಂದೀತು ಮಾನ. ಪೋಲೀಸರಿಗೆ ಹೃದಯವಿದೆ; ಈ ಮಾತನ್ನು ಅಲ್ಲಗಳೆಯೋಕೆ ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ವಿರೋಧ ಪಕ್ಷದೋರು ಇಲಿ ಹೋದ್ರೆ ಹುಲಿ ಹೋಯ್ತು ಅಂತ ಗಲಾಟೆ ಮಾಡಬಹುದು!"[೨೦] ಎನ್ನುವ ಮುಖ್ಯಮಂತ್ರಿಗಳ ಮಾತು ತಮ್ಮ ಹಿತಾಸಕ್ತಿಗಳನ್ನು ಮುಂದುವರೆಸಿಕೊಂಡು ಹೋಗುವುದನ್ನು ಪ್ರಕಟಿಸುತ್ತದೆ.

ತಮ್ಮ ರಾಜಕೀಯ ಹಿತಾಸಕ್ತಿ ಕಾಪಾಡಿಕೊಳ್ಳುವ ದೃಷ್ಟಿಯಿಂದ ಕೆಳವರ್ಗಗಳ ನಡುವೆ ಸಂಘರ್ಷ, ಉಂಟು ಮಾಡಿ ದೌರ್ಜನ್ಯ ಎಸಗುವುದನ್ನು ಗಮನಿಸಬೇಕು. ಹೀಗೆ "ಇವತ್ತು ನಮ್ಮ ರಾಜಕಾರಣ ಅದರ ಪ್ರಭುತ್ವ ಮತ್ತು ಸಮಕಾಲೀನ ಸಾಮಾಜಿಕ ಪ್ರಕ್ರಿಯೆಗಳೆಲ್ಲ ಒಂದಾಗಿಯೇ ಸಮಸ್ಯೆಗಳನ್ನು ಬಿಡಿಸುತ್ತಲೇ ಸಂಕೀರ್ಣ ಸವಾಲುಗಳು ಎದುರಾಗುತ್ತಿವೆ."[೪೧] ಮೇಲುವರ್ಗಗಳ ನಡುವೆ ನಡೆಯುವ ರಾಜಕೀಯ ಸಂಘರ್ಷಕ್ಕೂ ಕೆಳವರ್ಗಗಳ ನಡುವೆ ಅಥವಾ ಕೆಳವರ್ಗ ಹಾಗೂ ಮೇಲುವರ್ಗಗಳ ಮಧ್ಯೆ ನಡೆಯುವ ಸಂಘರ್ಷಕ್ಕೂ ಅಗಾಧ ವ್ಯತ್ಯಾಸವಿದೆ. ಮೇಲುವರ್ಗಗಳ ಸಂಘರ್ಷಗಳನ್ನು ತಮ್ಮ ತಮ್ಮ ರಾಜಿಯ ಮೂಲಕ ಪರಿಹರಿಸಿಕೊಂಡರೆ, ಕೆಳವರ್ಗಗಳ ಮಧ್ಯೆ ನಡೆಯುವ ಸಂಘರ್ಷಗಳು ಹಿಂಸೆಯ ಮೂಲಕ ಇಲ್ಲವೆ ಮೇಲುವರ್ಗಗಳ ಮಧ್ಯಪ್ರವೇಶದಿಂದ ನಡೆಯುವ ಸಂಧಾನವನ್ನು ಕಾದಂಬರಿಗಳಲ್ಲಿ ಸೂಕ್ಷ್ಮವಾಗಿ ಗ್ರಹಿಸಬಹುದು. ಇಂಥದೊಂದು ಪ್ರಸಂಗ 'ಸೂರ್ಯ' ಕಾದಂಬರಿಯಲ್ಲಿ ಬರುವ ಜಮೀನ್ದಾರ ಹಾಗೂ ರಾಮಣ್ಣನ ಮಧ್ಯೆ ನಡೆಯುವ ಸಂಘರ್ಷವನ್ನು ಬರಗೂರರು ಹೀಗೆ ಹಿಡಿದಿಟ್ಟಿದ್ದಾರೆ.

ಜಮೀನ್ದಾರ ಅದೋನೊ ಇವತ್ತು ಪಂಚಾಯ್ತಿ ಮಾಡ್ತಿಯಂತೆ... ಮುಂದುವರೆದು ಇಲ್ಲಿ ಈ ಹಜಾರ್ದಲ್ಲಿ-ತೀರ್ಮಾನ ಆಗಿದ್ದನ್ನು ಮರೀಬ್ಯಾಡ ಅದು ನಮ್ಮ ಮನ್ತನಕ್ಕೆ ಅವ್ಮಾನ. ಹೀಗೆ ಹೇಳುವ ಮೂಲಕ ತನ್ನ ಪ್ರಭುತ್ವವನ್ನು ಮುಂದುವರೆಸಿಕೊಂಡು ಹೋಗುವಂತೆ ಗ್ರಹಿಸಲಾಗಿದೆ. ಜಮೀನ್ದಾರನ ಮಾತಿಗೆ ರಾಮಣ್ಣ ಉತ್ತರಿಸುವುದನ್ನು ಗಮನಿಸಬೇಕು.

> "ಛೇ.....ಛೇ...| ಎಲ್ಲಾನ ಉಂಟಾ? ಹೊಲೆ ಮಾದಿಗ್ರನ್ನೆಲ್ಲ ತಲೆ ಮೇಲ್ ಕುಂಡ್ರಿಸ್ಕಳೋದುಂಟಾ"..... ಅವ್ರಾಗಿ ಬಂದವ್ರೆ ಬಿಡಬಾರದು ರಾಜಕೀಯದಲ್ಲಿ ಇವ್ರನ್ನೆಲ್ಲ ಹತ್ರ ಇಟ್ಕೊಂಡಿರಬೇಕು ಜಮೀನ್ದಾರ್ರೆ ಅವ್ರ್ ಮಾತಾಡೋಕೆಲ್ಲಾ ಅವಕಾಶ ಕೊಟ್ಟು ನಮ್ಮ ಮಾತು ನಡ್ಯೋಹಂಗ್ ನೋಡ್ಕೋಬೇಕು. ಇದನ್ನೇ ನಾವೆಲ್ಲಾ ಪ್ರಜಾಪ್ರಭುತ್ವ ಅಂತೀವಿ. ನೀನಿನ್ನೂ ಇದಕ್ಕೆಲ್ಲ ಅಡ್ಜಸ್ಟ್ ಆಗಿಲ್ಲ ಬಿಡಿ"[೪೨]

ಎನ್ನುವ ರಾಮಣ್ಣನ ಈ ಮಾತುಗಳು ಶತಮಾನಗಳಿಂದ ದಲಿತರನ್ನು ಅಜ್ಞಾನದಲಿಟ್ಟು ಶೋಷಣೆ ಮಾಡುತ್ತ ಬಂದ ಈ ಸಮಾಜ ವ್ಯವಸ್ಥೆಯ ಕರಾಳ ಮುಖಗಳಂತಿವೆ.

ಶತಶತಮಾನಗಳಿಂದ ಮೇಲುವರ್ಗ ಈ ದೇಶದ ಅಧಿಕಾರ ಸೂತ್ರ ಹಿಡಿದುಕೊಂಡು ಬಂದಿರುವುದು ಚಾರಿತ್ರಿಕ ಸಂಗತಿ. "ಕೆಳವರ್ಗಗಳು ಪ್ರಭಾವಶಾಲಿಗಳಾಗಲು ಸಹಿಸದೇ ರಾಜಕೀಯ ಸ್ಥಿರತೆ ದೇಶದ ಸ್ಥಿರತೆಗೆ ಬಹುಮುಖ್ಯವೆಂದು ವಾದಿಸಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವಲ್ಲಿ ನಿರತರಾಗಿದ್ದರು."[೪೩] ಹಾಗಾಗಿ ತಮ್ಮ ಅಧಿಕಾರವನ್ನು ಕೆಳವರ್ಗಗಳಿಗೆ ಬಿಟ್ಟುಕೊಡದೇ ತಮ್ಮ ತಮ್ಮ ವರ್ಗ-ಜಾತಿಗಳಲ್ಲೇ

ಹಸ್ತಾಂತರ ಮಾಡಿಕೊಂಡರು. ಬ್ರಿಟಿಷರ ಆಳ್ವಿಕೆ ಭಾರತದಲ್ಲಿ ನೆಲೆಗೊಂಡನಂತರ ತಮ್ಮ ಅಧಿಕಾರ ಸಡಿಲಗೊಂಡಿತು. ಬ್ರೀಟಿಷರು ಮೊಟ್ಟಮೊದಲಿಗೆ ತಮ್ಮ ಅಧಿಕಾರ ಚಲಾಯಿಸಿದ್ದೇ ಭೂಮಾಲೀಕರ, ಬ್ರಾಹ್ಮಣರ ಮೇಲೆ. ನಮಗೆ ಸ್ವತಂತ್ರ ಬಂದನಂತರ ರಾಜಕೀಯದಲ್ಲಿ ಅಸ್ಥಿರತೆವುಂಟಾಗಿ ಸಾಮಾಜಿಕ ಚಲನೆಗೆ ಸಹಾಯಕವಾಯಿತು. ಈ ಸಾಮಾಜಿಕ ಬದಲಾವಣೆಯಿಂದ ಭೂಮಾಲೀಕರು ಆರ್ಥಿಕವಾಗಿ ದುರ್ಬಲವಾದ ವರ್ಗಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿ ಆ ಮೂಲಕ ತಮ್ಮ ಹಿತಾಸಕ್ತಿ ಕಾಯ್ದುಕೊಳ್ಳಲು ಸಮಾಜದ ಮುಖಂಡರಾಗಿ ಬದಲಾದರು. ಈ ಮುಖಂಡರು ತಮ್ಮ ಅಧಿಕಾರ ಕೆಳವರ್ಗಗಳಿಗೆ ಬಿಟ್ಟುಕೊಡದೇ ತಮ್ಮ ತಮ್ಮ ಜಾತಿ-ವರ್ಗಗಳಲ್ಲೇ ಹಸ್ತಾಂತರಿಸಿ ಕೊಂಡಿದ್ದು ಗಮನಿಸಬಹುದು.

ಬರಗೂರರ 'ಸೂರ್ಯ' ಕಾದಂಬರಿಯಲ್ಲಿ ಜಮೀನ್ದಾರನ ಅಧಿಕಾರವನ್ನು ಅದೇ ವರ್ಗದ ಕುಳ ರಾಮಣ್ಣ ವಹಿಸಿಕೊಳ್ಳುವುದು ಮುಖ್ಯ ವಿಚಾರವಾಗಿದೆ. ರಾಮಣ್ಣ ಜಮೀನ್ದಾರನ "ಕೈಯಿಂದ ಜಾರಿ ಬಿದ್ದ ಚಾವಟಿಯನ್ನು ಮೆಲ್ಲಗೆ ಮಾಮಳ್ಳಿಯಂತೆ ಮುಂದೆ ಬಂದು ಹಜಾರದ ಮುಂದಿನ ಅಂಗಳದಲ್ಲಿ ಬಿದ್ದಿದ ಚಾವಟಿಯನ್ನು ತನ್ನ ಕೈಗೆ ತೆಗೆದುಕೊಂಡ"[೪೪] ಎನ್ನುವುದು ರಾಜಕೀಯ ಅಧಿಕಾರ ಮೇಲುವರ್ಗಗಳ ನಡುವೆ ಹಸ್ತಾಂತರವಾಗುವುದನ್ನು ಪ್ರಕಟಿಸುತ್ತದೆ.

ಮೇಲುವರ್ಗಗಳ ಅಧಿಕಾರದಡಿಯಲ್ಲಿ ಸಿಕ್ಕು ಕೆಳವರ್ಗ ಶೋಷಣೆಗೆ ಒಳಗಾಗುತ್ತಿದ್ದರೆ ಕಾಲ ಬದಲಾದಂತೆ ಕೆಳವರ್ಗ ಬದಲಾವಣೆಯಾಗುತ್ತಿವೆ. ಆ ಮೂಲಕ ಪ್ರಜ್ಞಾವಂತನಾಗಿ ನ್ಯಾಯ ಕೇಳುವ ಮನೋಧೈರ್ಯ ತುಂಬಿಕೊಂಡಿದೆ. ದೇವನೂರು ಮಹಾದೇವರ 'ಕುಸುಮ ಬಾಲೆ'ಯಲ್ಲಿ ಗಾರೆಸಿದ್ದ ಸಾಹುಕಾರರ ತೋಟದಿಂದ ಹದಿನಾರು ಎಳನೀರು ಕದ್ದು ಅವರುಗಳಿಂದ ಹಿಂಸೆ ಅನುಭವಿಸುತ್ತಾನೆ. ದಲಿತ ವರ್ಗದ ನಾಗರಾಜ ಮೇಷ್ಟ್ರು ಗಾರೆಸಿದ್ದನನ್ನು ಕಟ್ಟಿಹಾಕಿಕೊಂಡು ಹೊಡೆಯುವುದನ್ನು ನೋಡಿ "ಅದೂ ತಪ್ಪೀಯ, ಅದ್ಕ ನೀವ್ಗಳು ಕಟ್ಟಾಕಂಡು ಹೊಡ್ದಿರದೂ ತಪ್ಪಿಯ, ಆ ಎಳನೀರನ್ನು ಅದ ಕೆತ್ತವರನ್ನು ಪೋಲೀಸ್‌ಗೆ ಕೊಡಬೇಕಿತ್ತು"[೪೫] ಎಂದು ಪ್ರಶ್ನಿಸುವುದು ಗೌಡರಿಗೆ ಆಶ್ಚರ್ಯವುಂಟು ಮಾಡುತ್ತದೆ. 'ಪೋಲೀಸ್‌ಗೆ ಕೊಡಬೇಕಿತ್ತು' ಎನ್ನವುದು ಪಾರಂಪರಿಕವಾದ ಮೇಲುವರ್ಗಗಳ ಅಧಿಕಾರವನ್ನು ಮೊಟಕುಗೊಳಿಸಿ, ಆ ಮೂಲಕ ದಲಿತರ ಪ್ರಜ್ಞೆಯಲ್ಲಿ ನಡೆಯುತ್ತಿರುವ ಬದಲಾವಣೆಯ ಸಾಧ್ಯತೆಯನ್ನು ಲೇಖಕರು ಸೂಚಿಸಿದ್ದಾರೆ.

ಹೀಗೆ ಶಿಕ್ಷಣದ ಅರಿವಿನ ಮೂಲಕ ದೌರ್ಜನ್ಯವನ್ನು ಪ್ರಶ್ನಿಸಿದರೆ, 'ಕಾರ್ಯ ಕಾದಂಬರಿಯಲ್ಲಿ ಘಟೇಗಾರ ಮಲ್ಲಪ್ಪ ಹಾಗೂ ಶಾಂತಗೌಡರ ಹೆಂಡತಿ ಪದ್ಮಾವತಿಯ ಅನೈತಿಕ ಸಂಬಂಧ; ಕುಡಿದ

ಅಮಲಿನಲ್ಲಿ ಪಂಚಾಯಿತಿ ಮಾಡುತ್ತಿದ್ದಾಗ ಮಚಗಾರ ಜನಾಂಗದ ದೈವ; ಗೌಡನ ಹೆಂಡತಿ ಪದ್ಮಾವತಿಯನ್ನು ತಾವಿದ್ದಲ್ಲಿಗೆ ಕರೆಕಳಿಸುವ ಧೈರ್ಯ ಮಾಡುತ್ತದೆ.

“ನ್ಯಾಯ ಅಂದ್ರ ನ್ಯಾಯ
ಒಬ್ಬರಿಗೊಂದು ಒಬ್ಬರಿಗೊಂದು ಯಾಕ?
ಯಾರಿದ್ರ ಏನು?
ಪಂಚರು ಅಂದ್ರೆ ಪಂಚರು
ಅವ್ರ ಮುಂದೆ ಯಾರು?
ಬಾ ಅಂದ್ರ ಬರಬೇಕು, ಹೋಗಂದ್ರ ಹೋಗಬೇಕು
ಊರಿಗೆ ಅರಸಾದ್ರೇನು ತಾಯಿಗೆ ಮಗಾನೆ ಅಲ್ಲಾ?”[೪೬]

ಶತಮಾನಗಳಿಂದ ಮೇಲುವರ್ಗಗಳ ಅಧಿಕಾರಕ್ಕೆ ಬಲಿಯಾಗಿ, ಅಸಹಾಯಕವಾಗಿ ಒಪ್ಪಿಕೊಂಡ ಸೋಲನ್ನುಕೆಳವರ್ಗ ಕುಡಿದ ಅಮಲಿನಲ್ಲಿ ನ್ಯಾಯ ಕೇಳುವುದು ಗಮನಾರ್ಹ. “ಕುಡಿತದ ಅಮಲಿನಲ್ಲಿ ಹುಟ್ಟುವ ಧೈರ್ಯ, ಎದೆಗಾರಿಕೆ ವಾಸ್ತವ ಜಗತ್ತಿನಲ್ಲಿ ಬರುವುದಿಲ್ಲ. ಹೀಗಾಗಿ ದಲಿತರಿಗೆ ಕುಡಿತ ವರ ಮತ್ತು ಶಾಪ ಎರಡೂ ಆಗುವ ಸಾಧ್ಯತೆಯಿದೆ. ವಾಸ್ತವದಲ್ಲಿ ಕಾಣದ್ದನ್ನು ಅಮಲಿನಲ್ಲಿ ಕಾಣುತ್ತಾರೆ. ಕುಡಿಯದಿದ್ದಾಗ ಮೂಕರಂತೆ ಇರುವ ಇವರು ಕುಡಿದಾಗ ಬಿಚ್ಚುಗತ್ತಿಗಳಾಗುತ್ತಾರೆ. ಒಂದರ್ಥದಲ್ಲಿ ಕುಡಿತ ಇವರಿಗೆ ಧ್ವನಿಕೊಡುತ್ತದೆ.”[೪೭]

ಕುಡಿತದ ಅಮಲಿನಲ್ಲಿ ಪದ್ಮಾವತಿಯನ್ನು ಕರೆಯಲು ಹೋದ ಕೆಂಚಪ್ಪನಿಗೆ ಗೌಡರು ಎರಡೇಟು ಹೊಡೆದು “ಸೂಳೆ ಮಕ್ಕಳ್ಯಾ ಎಷ್ಟಲೇ ಸೊಕ್ಕು ನಿಮ್ಮದು? ನೀವು ಹೊಲ್ದ ತಂದ ಕೊಟ್ಟ ಮಚ್ಚಿಗಿ ಕಿಮ್ಮತ್ತದ ನಿಮಗೆ ಕಿಮ್ಮತ್ತಿಲ್ಲ. ನಿಮ್ಮ ಪಂಚರ ನ್ಯಾಯದಾಗ ನಮ್ಮ ಹೆಸರ ಎತ್ತೋಷ್ಟು ಧೈರ್ಯ ಬಂತಾ? ನಾವ್ಯಾರು? ನೀವ್ಯಾರು? ನಿಮ್ಮ ಕಿಮ್ಮತ್ತೆಷ್ಟು? ನಿಮ್ಮ ಮರ್ಯಾದೆಷ್ಟು? ತಿಳಿಲಿಲ್ಲ ನಿಮಗ.....ತಾಯಿ ಗಂಡ್ರು ತಂದ ನಡಮನ್ಯಾಗ.....ಬಂದ ಸೊಳೆ ಮಕ್ಕಳ್ಯಾ, ಸಮಗಾರ ದೇವ್ರಗಿ ಮಚ್ಚಿಪೆಟ್ಟಂತ. ನಿಮಗ ಹ್ಯಾಂಗ, ಏನ ಮಾಡಬೇಕನ್ನದು ನನಗೊತ್ತದ ಹೋಗ ಸೂಳೇಮಗನೇ”[೪೮] ಎನ್ನುವ ಶಾಂತೇಗೌಡರ ಮಾತುಗಳು ತನ್ನ ಪ್ರಭುತ್ವ ಘನೀಭೂತವಾಗಿದೆಂದು ಸಾರುತ್ತದೆ. ಗೌಡರ ಹೆಂಡತಿ ಪದ್ಮಾವತಿ ಹೆಸರಾಗಲಿ ಪಂಚಾಯ್ತಿಯಲ್ಲಿ ಎತ್ತುವುದಕ್ಕೆ ಅನರ್ಹರಾದ ಮಚಗಾರರು ಅಸಹಾಯಕರಾಗಿ ಹೆಸರಾಗಲಿ ಅಧಿಕಾರಶಾಹಿ ಒಪ್ಪಿಕೊಂಡಂತೆ, ಪದ್ಮಾವತಿಯ ನ್ಯಾಯ ತಟಸ್ಥವಾಗಿ ಶಾಂತಗೌಡನ ರಾಜಕೀಯ ಪ್ರಭುತ್ವಕ್ಕೆ ಶರಣಾಗಿ ಬಿಡುತ್ತದೆ. ಹೀಗೆ ಕೆಳವರ್ಗ ಯಾವುದೋ ಒಂದು ನೆಲೆಯಿಂದ ಧೈರ್ಯ ತಂದುಕೊಂಡು ಮುಖಾಮುಖಿಯಾಗಲು ಪ್ರಯತ್ನಿಸುತ್ತಿರುವಂತೆಯೇ ಅಧಿಕಾರ ರೂಢರಾದವರು ಅವರ ಧ್ವನಿ ಇಲ್ಲದಂತೆ ಮಾಡಿ ಬಿಡುತ್ತಾರೆ.

ಮೇಲುವರ್ಗ ತಾನು ಎಂತಹ ತಪ್ಪನ್ನು ಮಾಡಿದರೂ, ಅಪರಾಧಿಯಾಗಲು ಬಯಸುವುದಿಲ್ಲ. ತನ್ನ ಅಧಿಕಾರ ಪ್ರಭುತ್ವದಿಂದ ಉತ್ತಮ ವ್ಯಕ್ತಿಯಾಗಿ (ಸಮಾಜದ ಪ್ರತಿನಿಧಿಯಾಗಿ) ಮೆರೆಯುತ್ತಾನೆ. ಶ್ರೀಮಂತನಾದವನು ಎಂತಹ ನೀಚ ಕೆಲಸ ಮಾಡಿದರೂ ಅದನ್ನು ಪ್ರಶಂಸೆ ಪಡುವ ಜನರು ಸಮಾಜದಲ್ಲಿ ಇದ್ದೇ ಇರುತ್ತಾರೆ. ಪದ್ಮಾವತಿ ಮಲ್ಲಪ್ಪನೊಂದಿಗೆ ಅನೈತಿಕ ಸಂಬಂಧ ಹೊಂದಿ ಸಮಾಜದ ದೃಷ್ಟಿಯಲ್ಲಿ ಅಪರಾಧಿಯಾಗಿದ್ದರೂ, ಶಾಂತಗೌಡರ ದಬ್ಬಾಳಿಕೆಯಿಂದ ಎಲ್ಲವೂ ಮುಚ್ಚಿಹೋಗುತ್ತದೆ. "ಗೌಡ್ರಗೂ ಮಲ್ಲಪ್ಪಗೂ ಯಾವ ಸಂಬಂಧವಿಲ್ಲ. ಚಿಕ್ಕಮ್ಮಾರ ಕೂದಲಕ ಯಾವುದು ಕೊಂಕಿಲ್ಲ, ಇದು ಸೂರ್ಯ ಚಂದ್ರಾಮರಷ್ಟೇ ಖರೆ."[೪೯] ಎನ್ನುವ ಘಟೇಗಾರ ಚಂದ್ರಪ್ಪನ ಮಾತುಗಳು ಗೌಡನ ದಬ್ಬಾಳಿಕೆಯ ಹೇರಿಕೆಯಾಗಿದೆ. ಮಚಗಾರರು ವರ್ತಮಾನ ಬದುಕಿನಲ್ಲಿ ಗೌಡರು ಎಸಗಬಹುದಾದ ದೌರ್ಜನ್ಯ ಕಲ್ಪಿಸಿಕೊಂಡು "ಗೌಡರ ಸುದ್ದಿ ಮಚಗಾರ ದೈವದೊರು ಎತ್ತಿದರ ಸಲ್ಯಾಕ ಅವರೆಲ್ಲ ತೆಪ್ಪಾತಂತ ಕಾಲಬಿದ್ದು ಒಂದು ಮಚ್ಚಿ ಹೊಲ್ದ ದೈವದೊರ ದಂಡಾ ಅಂತ ಗೌಡರ ಕಾಲಿಗೆ ಮೆಡಸಬೇಕು"[೫೦] ಎಂದು ಪಂಚಾಯತಿ ತೀರ್ಮಾನವಾಗುತ್ತದೆ.

ಮೇಲುವರ್ಗ ತನ್ನ ಹಿತಕ್ಕಾಗಿ ಸ್ವಾರ್ಥತೆಯನ್ನು ಉಪಯೋಗಿಸಿರುತ್ತದೆ. ತನ್ನ ಅಂತಸ್ತಿನ ಸಮಕ್ಕೆ ಬೆಳೆಯುವವರನ್ನು ಚಿವುಟಿ ಹಾಕಿ ಬಿಡುತ್ತದೆ. ಆರ್ಥಿಕವಾಗಿ ದುರ್ಬಲವಾಗಿರುವ ವರ್ಗ, ಸಾಮಾಜಿಕವಾಗಿ ಬೆಳೆದರೆ, ಇದನ್ನು ಸಹಿಸದ ಮೇಲುವರ್ಗ ತನ್ನ ಬೌದ್ಧಿಕ ಸಾಮರ್ಥ್ಯವನ್ನು ಉಪಯೋಗಿಸಿ ಅವರ ಬದಕನ್ನು ಹಿಡಿತದಲ್ಲಿಟ್ಟುಕೊಳ್ಳಲು ಹಠ ಸಾಧಿಸುತ್ತದೆ. 'ಕಾರ್ಯ'ದಲ್ಲಿ ಶಾಂತಗೌಡನ ಗರಡಿ ಕುಸ್ತಿಪಟುವನ್ನು ಮಲ್ಲಪ್ಪ ದ್ಯಾವಮ್ಮನ ಜಾತ್ರೆಯ ಸ್ಪರ್ಧೆಯಲ್ಲಿ ಎದುರಿಸಿದ. ಜಾತಿಯನ್ನು ಎತ್ತಿ ಹಂಗಿಸಿದಾಗ ಗಂಡಸುತನದ ಪ್ರಶ್ನೆಯಾಗಿ ಸ್ಪರ್ಧೆಯಲ್ಲಿ ಗೌಡರ ಕುಸ್ತಿ ಪಟುವನ್ನು ಸೋಲಿಸಿ, ಮಾಮ್ಲೆದಾರ ಮತ್ತು ದಾಫೇದಾರರಿಂದ 'ಬುಕ್ಸಿಸಿಸ್' ತೆಗೆದುಕೊಂಡು ಹೆಗಲ ಮೆರವಣಿಗೆಯಲ್ಲಿ ಹೋಗಿದ್ದ. ಆವಾಗಿನಿಂದಲೇ ಅವನ ಮೇಲೆ ಹಲ್ಲುಮಸೆಯುತ್ತಿದ್ದ ಗೌಡ, ಇನ್ನೊಮ್ಮೆ ಕುಸ್ತಿಯ ಕಣಕ್ಕೆ ಇಳಿಯದಂತೆ ಅವನ ಕೈಕಟ್ಟಬೇಕು ಎನ್ನುವ ವಿಚಾರದಲ್ಲಿಯೇ ತನ್ನ ತೋಟ ಕಾಯುವ ಕೆಲಸಕ್ಕೆ ನೇಮಿಸಿಕೊಂಡಿದ್ದ. ಆ ಮೂಲಕ ಮಲ್ಲಪ್ಪನ ಪ್ರತಿಭೆಯನ್ನು ಚಿವುಟಿ ಹಾಕುವುದನ್ನು ಕಾದಂಬರಿಯಲ್ಲಿ ಮನಗಾಣಬಹುದು.

ಇದೇ ಕಾದಂಬರಿಯಲ್ಲಿ ಇಂಥದ್ದೇ ಇನ್ನೊಂದು ಪ್ರಸಂಗವಿದೆ. ಕೆಳವರ್ಗದವರೆಗೆ ದಶರಥ ತನ್ನ ತುಟಿ ಹರಿದಿದ್ದ ಕಾರಣಕ್ಕಾಗಿ ಮೀಸೆ ಬೆಳೆಸಿದ್ದನು. ದರಶಥ ಹೀಗೆ ಮೀಸೆ ಬಿಟ್ಟು ತನ್ನ ಸಮ ಕಟ್ಟುತ್ತಿರುವನೆಂದು ಗೌಡನು ಭಾವಿಸಿ, ಇದನ್ನು ಸಹಿಸದೇ ದಶರಥನ ಮೀಸೆ ಬೋಳಿಸುತ್ತಾನೆ. ಹೀಗೆ ಮೀಸೆ ಬೋಳಿಸುವುದು ತನ್ನ ಸಮಾಜದಲ್ಲಿ ಸರ್ವಾಧಿಕಾರಿಯಾಗಿರಬೇಕೆಂಬ ಸ್ವಾರ್ಥತೆ ಅಡಗಿದೆ. ತನ್ನ

ಸ್ವಾರ್ಥತೆ ಸಾಧಿಸಲು ಮಚಗಾರ ಚಂದಪ್ಪನ ಘಟೇಗಾರಿಕೆ ಸ್ಥಾನ ಪಡೆಯಲು ಗೌಡರಲ್ಲಿ ಮೊರೆಹೋಗಿ ಅಂಗಲಾಚಿಸಿದ್ದ. ಚಂದಪ್ಪನನ್ನೇ ಉಪಯೋಗಿಸಿಕೊಂಡು ಗೌಡ ದಶರಥನ ಮೀಸೆ ಬೋಳಿಸಲು ಕಾರಣನಾದ, ಆ ಮೂಲಕ ಮಚಗಾರ ಮಧ್ಯೆ ಸಂಘರ್ಷವೇರ್ಪಡಿಸಿ ಅವರ ಸಂಘರ್ಷಕ್ಕೆ ಸಂಧಾನಕಾರನಾಗಿ ತಾನು ಭಾಗವಹಿಸಿ ಆ ಮೂಲಕ ತನ್ನ ಅಧಿಕಾರದ ಸ್ವಾರ್ಥತೆಯನ್ನು ಸಾಧಿಸಿಕೊಳ್ಳುವುದು ದಲಿತರ ಶೋಷಣೆ ಮಾಡುವ ರಾಜಕೀಯ ಇದಾಗಿದೆ.

ಕೆಳವರ್ಗ ವೈಯುಕ್ತಿಕವಾಗಿ ವ್ಯಕ್ತಿಗತ ಬೆಳೆಯುವುದೂ ಅಪವಾದವಾಗಿ ಬಿಡುತ್ತದೆ. ವರಗ ದಶರಥ ಮೀಸೆ ಬಿಟ್ಟಿದ್ದು, ಮಲ್ಲಪ್ಪ ಕುಸ್ತಿಪಟುವಾಗಿದ್ದು ವ್ಯಕ್ತಿಗತವಾಗಿಯೇ. ಇವರು ವ್ಯಕ್ತಿಗತವಾಗಿ ಬೆಳೆದರೂ ತನ್ನ ಸಮುದಾಯಗಳ ಪ್ರತಿನಿಧಿಗಳಾಗುತ್ತಾರೆ. ಆ ಮೂಲಕ ಸೋತ ಸಮುದಾಯಗಳ ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಾರೆ. ಅಲ್ಲದೇ ಪರೋಕ್ಷವಾಗಿ ಶಾಂತೇಗೌಡನಂಥ ಮೇಲ್ವರ್ಗಗಳಿಗೆ ಸಮವಾಗಿ ನಿಲ್ಲುವ ಎಚ್ಚರವನ್ನು ಹೊಂದಿರುತ್ತದೆ. ಕೆಳವರ್ಗಗಳ ಇಂಥ ಬೆಳೆಯುವ ಸಾಮಾಜಿಕ ಮೌಲ್ಯಗಳನ್ನು ಶಾಂತಗೌಡನಂಥ ಸ್ವಾರ್ಥ ಸಾಧನೆಯ ವ್ಯಕ್ತಿಗಳು ಅಪಮೌಲ್ಯ ಮಾಡಲು ಹಠ ಸಾಧಿಸುತ್ತಿರುತ್ತವೆ. ಪುರಾಣದ ಚರಿತ್ರೆಯಿಂದಲೂ ಇಂಥ ಕುತಂತ್ರಗಳು ನಡೆಯುತ್ತಿರುವುದು ಗಮನಿಸಬಹುದು. ವರಗದಶರಥ ಹಾಗೂ ಮಲ್ಲಪ್ಪನ ವಿಷಯದಲ್ಲಿ ಅವರನ್ನು ದುರ್ಬಲಗೊಳಿಸಲು ಮಚಗಾರರ ಚಂದಪ್ಪನ, ಮೂಲಕ ಶಾಂತೇಗೌಡ ಸಂಚು ಹೂಡಿ ಸಫಲನಾಗುತ್ತಾನೆ. ಚಂದಪ್ಪ, ಮಚಗಾರರ ಘಟೇಗಾರಿಕೆ ಸ್ಥಾನಗಿಟ್ಟಿಸಿಕೊಳ್ಳಲು ಶಾಂತೇಗೌಡನ ಮೊರೆ ಹೋಗಿದ್ದುದರಿಂದಲೇ ಇಡೀ ಸಮುದಾಯ ಹಾಗೂ ವರಗ ದಶರಥ ಮತ್ತು ಮಲ್ಲಪ್ಪನ ದೈಹಿಕ ಶಕ್ತಿಯೆಲ್ಲಾ ಶಾಂತೇಗೌಡನ ವಶವಾಯಿತು. ಶಾಂತೇಗೌಡ ಮತ್ತೆ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳುವನು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಶಾಂತೇಗೌಡನಂಥ ಮೇಲ್ವರ್ಗಗಳು ಸೋತ ಸಮುದಾಯಗಳ ದೌರ್ಬಲ್ಯಗಳನ್ನು ಸದುಪಯೋಗಪಡಿಸಿಕೊಳ್ಳುತ್ತಾರೆ. ಅವರ ಒಗ್ಗಟ್ಟನ್ನು ಒಡೆದು ಸಂಘರ್ಷವೇರ್ಪಡಿಸುತ್ತವೆ. ಒಂದು ರೀತಿಯಲ್ಲಿ 'ಒಡೆದು ಆಳುವ ನೀತಿಯನ್ನು' ಅನುಸರಿಸುತ್ತವೆ. ಈ ಕಾದಂಬರಿ ರಚನೆಗೊಂಡ ಕಾಲ ಸಂದರ್ಭದಲ್ಲಿ ಲೇಖಕನಿಗೆ ಬ್ರಿಟಿಷರ ರಾಜಕೀಯದ ನೀತಿಯೂ ಗಮನದಲ್ಲಿರಬಹುದು.

ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಕಾದಂಬರಿಗಳಲ್ಲಿ ಇಂಥ ಚಿತ್ರಣಗಳೇ ಒಳಗೊಂಡಿವೆ. ಆದರೆ ಸ್ವರೂಪ ಬೇರೆ ಬೇರೆ ರೀತಿಯವು. ಕುರುಮಯ್ಯ ಮತ್ತು ಅಂಕುಶದೊಡ್ಡಿ 'ಮಾಗಿ', 'ಕಾರ್ಯ' ಮಾದರೀಕೃತ ಕಾದಂಬರಿಗಳಾಗಿವೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯಲ್ಲಿ ಸಂಶಾಲಪ್ಪನ ಕುತಂತ್ರದ ಅಡಿಯಲ್ಲಿ ಕೊರವ ಸಮುದಾಯ ನಲುಗಿ ಹೋಗಿರುತ್ತದೆ. ಸಂಶಾಲಪ್ಪ ನೇರವಾಗಿ ಕೊರವ

ಸಮುದಾಯಗಳ ಮೇಲೆ ಅಧಿಕಾರ ಚಲಾಯಿಸಲಾರ. ಆ ಸಮುದಾಯದ ಒಳಗಿನ ಕೊರವರ ಜಿಂದಪ್ಪ ಹಾಗೂ ಸಣ್ಣಗುಡದಯ್ಯ ಅವರನ್ನು ಹಣದ ಅಮಿಷ ಒಡ್ಡಿ ತನ್ನ ಹಿಡಿತದಲ್ಲಿಟ್ಟುಕೊಂಡು ಅವರ ಮೂಲಕ ತನ್ನ ಕಾರ್ಯ ಸಾಧನೆಯನ್ನು ಸಾಧಿಸಿಕೊಳ್ಳುವುದನ್ನು ಗಮನಿಸಬೇಕು.

ಎಂ.ಎಲ್.ಎ ಯಂಕನಗೌಡ ಹಾಗೂ ಸಂಶಾಲಪ್ಪನವರಿಗೆ ಕೊರವರು ವಾಸಹೂಡಿದ್ದ ಅಂಕುಶದೊಡ್ಡಿ ಹೆಂಡದ ಡಿಪೋ ತೆರೆಯಲ್ಲಿ ಅನುಕೂಲವಾದ ಜಾಗವೆಂದು ಬಗೆದು 'ಅಂಕುಶದೊಡ್ಡಿ' ವಶಕ್ಕಾಗಿ ಕೊರವರನ್ನು ಸ್ಥಳಾಂತರಿಸುವ ತಂತ್ರಗಳನ್ನು ಹಾಕಿಕೊಳ್ಳುತ್ತಾರೆ. ಇವರ ಮೊದಲ ತಂತ್ರ ಕೊರವರ ಬದುಕಿನ ಬೆನ್ನೆಲಬಾದ ಹಂದಿಗಳನ್ನು ಕೊಲ್ಲುವುದು. ಹಂದಿಗಳನ್ನು ಕೊಲ್ಲಲು ಊರಿನಲ್ಲಿ ಹಂದಿಗಳ ಮೂಲಕ ಮೆದುಳು ಜ್ವರ ಬಂದಿದೆಯೆಂದು ಪತ್ರಿಕಾ ವರದಿ ಹೊರಡಿಸಿ ಕಂಡಲ್ಲಿ ಕೊಲ್ಲಿಸಲಾಗುತ್ತದೆ. ನಂತರ ಧಾರ್ಮಿಕತೆಯ ಅಡಿಯಲ್ಲಿ ಪೂಜಾರಿ ಶಂಕರಪ್ಪನ ಮೂಲಕ ಮೂಢನಂಬಿಕೆಯನ್ನು ನಂಬಿಸುತ್ತಾರೆ. ಶಂಕರಪ್ಪನಿಗೆ ಬೆಟ್ಟದ ಲಿಂಗೇಶ್ವರ ಮೈಗೆ ಬಂದು ಮಾತಾಡುವುದನ್ನು ಕೃತಿಯಲ್ಲಿ-ಹೀಗೆ ನಿರೂಪಿತವಾಗಿದೆ.

> ಮೊದ್ಲು ನೀವೆಲ್ಲ ಜಾಗ ಬುಡಬೇಕು.....ಝರಿ ಬೆಟ್ಟದ ಸುತ್ತಮುತ್ತ ಎಲ್ಲಿರಬಾರ್ದು; ದೂರ ಹೋಗಬೇಕು. ಇಲ್ಲಂದ್ರ ನಾಳೆ; ನಿಮ್ಮ ಕುಂಡಿ ಬಾಯಿ ವಂದು ಮಾಡಿ ನಾಶ ಮಾಡ್ತಿನಿ"[೫೧]

ಎಂದು ಕೊರವ ಸಮುದಾಯದಲ್ಲಿ ಭಯವನ್ನು ಹುಟ್ಟಿಸುತ್ತಾನೆ. ಇದನ್ನು ನಂಬಿ ಭಯಭೀತಿಗೊಂಡು ಕೊರವರು ಅಂಕುಶದೊಡ್ಡಿಯಿಂದ ಬೆಟ್ಟಗಳ ಸಾಲುಗಳತ್ತ ಸ್ಥಿತ್ಯಂತರಗೊಳ್ಳುತ್ತಾರೆ. ಅಂಕುಶದೊಡ್ಡಿಯಲ್ಲಿ ಯಂಕನಗೌಡನ ಹೆಂಡದ ಡಿಪೋ ಸ್ಥಾಪಿತವಾಗುತ್ತದೆ. ಅಲ್ಲದೇ ಸಂಶಾಲಪ್ಪ ರಾಯಪುರದ ಮೇಲ್ಜಾತಿ ಯವರ ಮೆಚ್ಚುಗೆಯನ್ನುಗಳಿಸುತ್ತಾನೆ. ಈ ಮೆಚ್ಚುಗೆಯಿಂದ ಎಂ.ಎಲ್.ಸಿ.ಯ ಚುನಾವಣೆಯಲ್ಲಿ ಮೇಲ್ಜಾತಿಯ ಓಟುಗಳನ್ನು ಪಡೆಯುವ ಆಶೆಯನ್ನು ಪಡೆದಿದ್ದ. ಈ ರೀತಿಯ ನವ ವಸಾಹತು ಶಾಹಿಯಂತಹ ಯಂಕನಗೌಡನ ಹಾಗೂ ಸಂಶಾಲಪ್ಪನವರ ರಾಜಕೀಯದಲ್ಲಿ ಕೊರವರು ಸ್ಥಳಾಂತರಗೊಂಡರು. "ಮನುಷ್ಯ ಮಾಡಿದ್ದನ್ನು ದೇವರ ತಲೆಗೆ ಆರೋಪಿಸಲಾಯಿತು. ಏಕೆಂದರೆ 'ದೇವರು ಮಾಡಿದ್ದು' ನಂತರ ಬದಲಾಯಿಸಬಹುದಾದದ್ದಲ್ಲ. ಶಾಶ್ವತವಾಗಿ ಉಳಿವಂಥದ್ದು, ಆಳುವ ವರ್ಗ ಇಂಥದ್ದನ್ನು ಮಾಡುತ್ತಲೇ ಇರುತ್ತದೆ."[೫೨] "ಮಳೆ ಹೋಗಲಿ ಬರಲಿ, ಏನೇ ಆಗಲಿ, ಸುಖಾಂತವಾಗಿ, ಸುರಕ್ಷಿತವಾಗಿ ಜನರಿಂದ ಬರುವ ಹಣ ಹಾಗೂ ಇತರ ಸೌಲಭ್ಯಗಳಿಂದ ಯಾವುದೇ ಶ್ರಮವಿಲ್ಲದೆ ನೆಮ್ಮದಿಯಿಂದ ನಿರುಂಬಳವಾಗಿ ಬದುಕುತ್ತಿದ್ದಾರೆ."[೫೩] ಸಮರ್ಥರು ಅನುಕೂಲ ನಿಯಮಗಳನ್ನು ಮಾಡಿಕೊಂಡು ಜನಸಾಮಾನ್ಯರ ಬದುಕನ್ನು ಜೀವಸಲು ಕಷ್ಟವಾಗುವಂತೆ ಮಾಡಿದರು.

ಕೊರವರ ಸ್ಥಳಾಂತರಕ್ಕೆ ಪ್ರಮುಖವಾಗಿ ಸಂಪ್ರದಾಯದ ಒಳಗಿನ ಸದಸ್ಯರೇ ಮುಖ್ಯ ಪಾತ್ರವಹಿಸಿದುದು. ವಾಸ್ತವವಾಗಿ ಕುಟುಂಬದ ಸದಸ್ಯರಿಂದ ಒಬ್ಬ ಮೇಲಿನ ಕ್ರಿಯೆಗೆ ಒಳಗಾದರೆ, ಇಡೀ ಕುಟುಂಬವೇ ಛಿದ್ರವಾಗುವಂತೆ ಕೊರವರ ಸಮುದಾಯ ಛಿದ್ರಗೊಂಡಿತು. ಇಂಥ ಒಂದು ಸಾಮಾಜದ ಸಮುದಾಯವು ಸಂಘಟನೆಯಾಗಿರಬೇಕೆಂಬ ಎಚ್ಚರವನ್ನು ಲೇಖಕರ ಆಶಯವಾಗಿದೆ. ಮೇಲುವರ್ಗ ಯಾವಾಗ ನೇರವಾಗಿ, ಇಂತಹ ಕಾರ್ಯಕ್ಕೆ ಕೈಹಾಕುವುದಿಲ್ಲವೆಂಬ ಅಂಶವೂ ಪ್ರಮುಖವಾಗಿದೆ.

ಕುಂ.ವೀ.ಯವರ 'ಕಪ್ಪು'ವಿನಲ್ಲೂ 'ಗೌರಿ'ಯನ್ನು ಬಸವಿ ಮಾಡುವ ಸಂದರ್ಭದಲ್ಲಿ ಹಾಗೂ ಬಿ.ಟಿ. ಲಲಿತನಾಯ್ಕರ 'ಗತಿ' ಕಾದಂಬರಿಯಲ್ಲಿ ಅಬಲೆಯಾದ 'ಸೋನಿ'ಯನ್ನು ಕಾದು ತೀಟೆಗೆ ಆಸೆಪಡುವ ಪವಾರ ಹಾಗೂ ಮಾನ್‌ಸಿಂಗ್ ಇವರೂ ದೈವೀಶಕ್ತಿಯ ಮೂಲಕ ಸ್ತ್ರೀಯರನ್ನು ಒಲೈಸಿಕೊಳ್ಳುವ ರಾಜಕೀಯ ಮಾಡುವುದು ಕಂಡು ಬರುತ್ತದೆ. ಇವರೂ ಸಹ ದೇವರ ಹೆಸರಿನಲ್ಲಿ ತಮಗೆ ಬೇಕಾದ ಹೆಣ್ಣುಗಳನ್ನು ಅನುಭೋಗಿಸಲು ಎಲ್ಲಪ್ಪ, ಕಾಶಪ್ಪ ನಂತಹ ಡಾಂಭಿಕ ಪೂಜಾರಿಗಳನ್ನು ಸಿದ್ಧಪಡಿಕೊಳ್ಳುತ್ತಾರೆ. 'ಕಪ್ಪು' ಕಾದಂಬರಿಯ ಗೌರಿಯನ್ನು ಪೂಜಾರಿ ಎಲ್ಲಪ್ಪನ ಕನಸಿನ ಮುಖಾಂತರ ಬಸವಿ ಮಾಡಲು ರಾಜಕೀಯ ಮಾಡಿದರೆ, 'ಗತಿ'ಯಲ್ಲಿ ಸೋನಿ ಗಂಡ ಮಾನಸಿಂಗನ ಹಿಂಸೆಯಿಂದ ಬಿಡುಗಡೆಗೊಂಡು ಸ್ವತಂತ್ರ ಬದುಕು ನಡೆಸುತ್ತಿದ್ದರೆ, ಪವಾರ್‌ನೆಂಬ ಮೇಲ್ವರ್ಗಕ್ಕೆ ಅವಳನ್ನು ಅನುಭೋಗಿಸಲು ಅವಳು ಗಂಡನ ಜೊತೆ ಬಾಳಬಾರದೆಂದು ಮಾರಿದೇವತೆ ಎಲ್ಲಪ್ಪನಿಗೆ ಮೈತುಂಬಿ ತೀರ್ಪು ನೀಡಬೇಕೆಂದು ಕಾಶಪ್ಪನಿಗೆ ಹಣ ನೀಡಿರುತ್ತಾನೆ. ಇತ್ತ ಮಾನ್‌ಸಿಂಗ್ ಸೋನಿ ನನ್ನ ಹಂಡತಿಯಾಗಿ ಬಾಳುವಂತೆಯೂ ಕಾಶಪ್ಪನಿಗೆ ಹಣ ನೀಡಿರುತ್ತಾನೆ. ಈ ಇಬ್ಬರು ಬಂಡವಾಳ ಶಾಹಿಗಳಿಗೆ ಕಾಶಪ್ಪನ ದೈವೀ ಭಕ್ತಿಯು ಗೊತ್ತಿರುತ್ತದೆ. ಅಲ್ಲದೇ ಕಾಶಪ್ಪಗೆ ಈ ಬಂಡವಾಳ ಶಾಹಿಗಳು ಕೊಲೆ ಬೆದರಿಕೆಯನ್ನು ಹಾಕಿರುತ್ತಾರೆ. ಕಾಶಪ್ಪ ಯಾರ ಕಡೆ ತೀರ್ಪು ನೀಡುವನೋ ಎಂದು ತಳಮಳಗೊಂಡು ಅಕ್ಷರಸ್ಥನಾದ ಚಂದುವಿನಲ್ಲಿ ಮೊರೆ ಹೋಗುತ್ತಾನೆ. "ನನ್ನ ತಪ್ಪನ್ನೆಲ್ಲ ನಿನ್ನ ಹೊಟ್ಟೆಯಾಗ ಹಾಕ್ಕೊಂಡು ಹೆಂಗಾರ ಮಾಡಿ ಇದೊಂದು ಸರ್ತಿ ನನ್ನ ಉಳಿಸಿಬಿಡು ಚಂದಪ್ಪ ಇನ್ನೊಮ್ಮೆ ಇಂಥ ಕಾರಭಾರಕ್ಕೆಲ್ಲ ಕೈ ಹಚ್ಚಂಗಿಲ್ಲ"[೫೪].

ಚಂದು ಈ ಮೊದಲೇ ಕಾಶಪ್ಪನ ಡಾಂಭಿಕತೆಯನ್ನು ಆ ಸಮುದಾಯಗಳಲ್ಲಿ ಬಿಡಿಸಿ ಹೇಳಿದರೂ ನಂಬುತ್ತಿರಲಿಲ್ಲ. ಅಲ್ಲದೇ ಪವಾರ್ ಹಾಗೂ ಮಾನಸಿಂಗ್‌ನ ರಾಜಕೀಯವೂ ಗೊತ್ತಿರುತ್ತದೆ. ಪೂಜಾರಿ ಕಾಶಪ್ಪನು ಮಾರಿದೇವತೆಯ ಮೂಲಕ ತೀರ್ಪು ನೀಡುವ ವೇಳೆಗೆ ಚಂದಪ್ಪ ಪೋಲೀಸರನ್ನು ಆಹ್ವಾನಿಸಿದ್ದ. ಇದನ್ನು ತಿಳಿದ ಎಲ್ಲಪ್ಪ ಮನೆ ಕಡೆಗೆ ಓಡಿದ, ಇದನ್ನು ಗಮನಿಸಿದ ಪವಾರ್

ಎಲ್ಲಪ್ಪನ್ನು ಕೊಂದು ಹಾಕುತ್ತಾನೆ. ಕಾಶಪ್ಪನ ಸಾವಿನೊಂದಿಗೆ ಪವಾರ್ ಹಾಗೂ ಮಾನಸಿಂಗ್‌ನ ರಾಜಕೀಯ ಕೊನೆಗೊಳ್ಳುತ್ತದೆ.

ಆದರೆ, ಗೌರಿಯ ಪಾತ್ರದಲ್ಲೂ ಇಂಥದ್ದೇ ಸಂದರ್ಭವನ್ನು ಕಟ್ಟಿಕೊಟ್ಟರೂ ಸಣ್ಣುದ್ರ ಹಾಗೂ ಕರೀಗೌಡ ಜಮೀನ್ದಾರರ ದ್ವೇಷ ಮಾರಿಹಬ್ಬದಲ್ಲಿ ಸಂಘರ್ಷವುಂಟಾಗಿ ಅವರ ಪ್ರಭುತ್ವ ಅಂತಿಮ ಗೊಳ್ಳುತ್ತದೆ. ಬಂಡಾಯ ಕಾದಂಬರಿಗಳು ಈ ತರಹದ ರಾಜಕೀಯವನ್ನು ಬಯಲುಗೊಳಿಸುತ್ತಿರುವುದನ್ನಿಲ್ಲಿ ಗುರ್ತಿಸಬಹುದು. ಅವರು ಮಾನವನ ಮಾನವತೆಯನ್ನು, ಎತ್ತಿ ಹಿಡಿಯುತ್ತಾರೆ.

## ಊಳಿಗಮಾನ್ಯ ವ್ಯವಸ್ಥೆ:ಶೋಷಣೆ :ಶೋಷಿತರ ಪ್ರತಿಭಟನೆಯ ಸ್ವರೂಪ

ವ್ಯವಸ್ಥೆಯ ಪಾರಂಪರಿಕ ಮೌಲ್ಯಗಳ ಬಂಡಾಯ ಅಥವಾ ಪ್ರತಿಭಟನೆ ಸ್ಥೂಲವಾಗಿ ದಲಿತ ಬಂಡಾಯ ಸಾಹಿತ್ಯದ ಮೂಲ ವಸ್ತು.ಪ್ರತಿಭಟನೆ ಎಂದರೆ ಸಾಮಾಜಿಕ , ಸಾಂಸ್ಕೃತಿಕ ಬದಲಾವಣೆಗಳ ಆಶಯವುಳ್ಳ ವಸ್ತು ಮತ್ತು ಧೋರಣೆಗಳನ್ನು ಮುಖ್ಯವಾಗಿ ಗಮನಿಸಲಾಗಿದೆ. ಸರ್ವಜ್ಞ, ಕನಕದಾಸರು, ಇಂಥ ಸ್ವರೂಪದ ಪ್ರತಿಭಟನಾಕಾರರಲ್ಲಿ ಬಹುಮುಖ್ಯರಾಗುತ್ತಾರೆ. ಸಾಮಾಜಿಕ, ಸಾಹಿತ್ಯಸ್ವರೂಪದ ಅಂದೋಲನ ಮತ್ತೆ ಕಾಣಿಸಿಕೊಳ್ಳುವುದು ದಲಿತ ಬಂಡಾಯ ಲೇಖಕರಲ್ಲಿ. ಶೋಷಿತರ ಪರವಾದ ಧ್ವನಿಯನ್ನು ವಚನಕಾರರಲೀ ದಾಸರಾಗಲೀ ಮೊಟ್ಟ ಮೊದಲನೆ ಬಾರಿಗೆ ಎತ್ತಿದರು ,ಕೆಳವರ್ಗಗಳ ಸಮಗ್ರ ಒಳತುಡಿಗಳಗೆ ಸ್ಪಂದಿಸಲು ವಿಫಲವಾಗಬಹುದು. ಅಸಮಾನತೆಯ ವಿರುದ್ದ ಪ್ರತಿಭಟಿಸಿದ್ದು ಅಲ್ಲಗಳೆಯುವಂಥದಲ್ಲ. ಇವರ ಹಜ್ಜೆಯಲ್ಲಿ ಹೆಜ್ಜೆ ಹಾಕುತ್ತಾ ದಲಿತ-ಬಂಡಾಯ ಲೇಖಕರು ಕೆಳ-ಸಂಸ್ಕೃತಿಗಳ ಸಮಗ್ರ ಬದುಕನ್ನು ಸಾಹಿತ್ಯಕವಾಗಿ ,ಸಾಂಸ್ಕೃತಿಕವಾಗಿ ಪ್ರಚಾರಿಸಲು ಪ್ರಯತ್ನಿಸಿದರು. ರಾಮ ಮನೋಹರ ಲೋಹಿಯಾ ಅವರು ಹೇಳುವ ಹಾಗೆ''ಸೃಷ್ಠಿಯೆಂದರೆ ಸ್ವತಂತ್ರವಾದ ಬದುಕು, ವೀರ್ಯವತ್ತಾದ ಬದುಕು''[೫೫] ಇದು ಅವರು ಸೃಜನ ಶೀಲತೆಯ ಬಗ್ಗೆ ಇರಿಸಿಕೊಂಡಿದ್ದ ಗಾಢನಂಬಿಕೆ. ಜಡವಾದ ರೂಢಿ ಸಮಾಜದಲ್ಲಿ ಚಲನೆ ಉಂಟಾಗಬೇಕೆಂದರೆ ಮನುಷ್ಯನು ಸೃಜನಶೀಲನನ್ನಾಗಿಸುವ ಪರಿಕರಗಳ ಮತ್ತು ಪ್ರಯತ್ನಗಳ ಅಗತ್ಯವಿದೆಯೆಂದು ಅವರು ಭಾವಿಸಿದರು.

ಸೃಜನಶೀಲ ಮನಸ್ಸು ದಾಸ್ಯವನ್ನು ಕಿತ್ತೊಗೆಯುವ, ಪಟ್ಟಭದ್ರ ವ್ಯವಸ್ಥೆಯನ್ನು ಪ್ರತಿಭಟಿಸುವ, ತನ್ನ ದುಃಸ್ಥಿತಿಯನ್ನು ಮೀರುವ ಹಂಬಲವುಳ್ಳದ್ದಾಗಿರುತ್ತದೆ. ವಿರುದ್ಧ ಪರಿಸರದಲ್ಲಿ ತನ್ನ ಬದುಕನ್ನು ಅರ್ಥಮಾಡಿಕೊಳ್ಳಲು ಸದಾ ಅದು ಹೆಣಗುತ್ತಿರುತ್ತದೆ.

ಹೀಗಾಗಿ ಇಂಥ ಪ್ರಕ್ರಿಯೆಯಲ್ಲಿ ತೊಡಗಿಕೊಂಡ ದಲಿತ ಬಂಡಾಯ ಲೇಖಕರು ಪಟ್ಟ ಅಸಮಾನತವಾದ ವ್ಯವಸ್ಥೆಯನ್ನೇ ಪ್ರಶ್ನಿಸತ್ತಲೇ ಕೆಳಸಮುದಾಯಗಳಲ್ಲಿಯ ಅಂಧತೆ, ಮೌಢ್ಯತೆ, ಸಂಪ್ರದಾಯಗಳ ಚಿತ್ರಣಗಳನ್ನು ನೀಡುತ್ತಲೇ ಹೊಸ ಸಮಾಜ ವ್ಯವಸ್ಥೆಗೆ ಹಂಬಲಿಸುತ್ತಾರೆ.

ಹೊಸ ಲೋಕದ ಅರಿವು ಮೂಡಲು ಕಥೆ ಕಾದಂಬರಿಗಳ ಮೂಲಕ ಪ್ರಯತ್ನಿಸುತ್ತಾರೆ. ಮಡುಗಟ್ಟಿದ ಕ್ರೂರವ್ಯವಸ್ಥೆಯ ವಿರುದ್ಧ ನ್ಯಾಯ ಪಡೆಯಲು ವಿಭಿನ್ನ ರೀತಿಯ ಪ್ರತಿಭಟನೆಯನ್ನು ಸಾಧ್ಯವಾಗಿಸಿಕೊಂಡಿದ್ದಾರೆ. ಪ್ರತಿಭಟನೆಯ ಹಲವು ಮುಖಗಳಾದ, ರೋಷ, ಸಿಟ್ಟು, ವಿಡಂಬನೆ, ವ್ಯಂಗ್ಯ, ನೇರ ದೃಷ್ಟಿಯಿಂದ ನೋಡುವಿಕೆ,(ದುರುಗುಟ್ಟಿ ನೊಡುವುದು) ಊರು ಬಿಟ್ಟು ವಲಸೆ ಹೋಗುವ ಸಂದರ್ಭ, ಮೇಲುವರ್ಗದ ಸ್ತ್ರೀಯರೊಡನೆ ಕೆಳವರ್ಗದ ಪುರುಷರ ಅನೈತಿಕ ಸಂಬಂಧ ಹೊಂದುವುದು . ಇಂಥ ಅನೇಕ ಪ್ರಕಾರದ ಮೂಲಕ ಮೇಲುವರ್ಗದ ಹಿತಾಸಕ್ತಿಗಳನ್ನು ಪ್ರಶ್ನಿಸುತ್ತಾರೆ. ಈ ಹಂಬಲವನ್ನು ದಲಿತ - ಬಂಡಾಯ·ಲೇಖಕರು ತಮ್ಮ ಕೃತಿಗಳಲ್ಲಿ ಇಂಥ ಸಂಘರ್ಷಯುತ ಪಾತ್ರಗಳನ್ನು ಸೃಷ್ಟಿಸಿ ಅವುಗಳ ಮೂಲಕವೆ ವಾಸ್ತವದ ಬದುಕನ್ನು ಚಿತ್ರಿಸುತ್ತಾರೆ.

ಮೇಲೆ ಹೇಳಿದಂತೆ ಪ್ರತಿಭಟನೆಯ ಸ್ವರೂಪಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ಎರಡು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳೆಂದರೆ

೧. ವೈಯಕ್ತಿಕ ಪ್ರತಿಭಟನೆ.

೨. ಸಾಮಾಜಿಕ ಪ್ರತಿಭಟನೆ.

ವೈಯಕ್ತಿಕ ಪ್ರತಿಭಟನೆಯಲ್ಲಿ ಶೋಷಕನ ವಿರುದ್ಧ ವೈಯುಕ್ತಿಕವಾಗಿ ಅಂದರೆ ಒಬ್ಬನೆ ವ್ಯಕ್ತಿ ನೇರವಾಗಿ ಮುಖಾಮುಖಿಯಾಗುವುದು. ಆದರೂ ಮತ್ತೊಂದು ನೆಲೆಯಲ್ಲಿ ತಮ್ಮದೆ ಸಮುದಾಯದ ಶೋಷಕನವಿರುದ್ಧವೂ ಸಿಡಿದೇಳುವುದೂ ಆಗಿದೆ.ಅಂದರೆ ಶೋಷಿತನಾದ ವ್ಯಕ್ತಿಯೊಬ್ಬ ಸಾಮಾಜದ ವಿರುದ್ಧ ಹಾಗೂ ತತ್ಕಾಲಕ್ಕೆ ತನ್ನ ಸಮುದಾಯ ಅಥವಾ ಕುಟುಂಬದೊಳಗಿನ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತಾನೆ. ಇಲ್ಲಿ ಒಳಗೆ ಅಂದರೆ, ತನ್ನ ಸಮುದಾಯದ ಶೋಷಕನು ಹೊರಗೆ ಅಂದರೆ, ಮೇಲ್ಜಾತಿ ,ಮೇಲ್‌ವರ್ಗದವರು ಎಸಗುವ ದೌರ್ಜನ್ಯದ ವಿರುದ್ಧ ಎಂದರ್ಥ.

ಸಾಮೂಹಿಕ ಪ್ರತಿಭಟನೆಯೆಂದರೆ, ಶೋಷಕನ ವಿರುದ್ಧ ಶೋಷಿತರೆಲ್ಲರೂ ಅಂದರೆ ಸಾಮಾಜದ ಕೆಳ ಸಮುದಾಯಗಳು ಒಟ್ಟಿಗೆ ಪ್ರತಿಭಟಿಸುವುದು ಹೀಗೆ ಕಾದಂಬರಿಗಳಲ್ಲಿ ಪ್ರತಿಭಟಾನಾಂಶಗಳನ್ನು ಗುರ್ತಿಸಿ, ತಾತ್ವಿಕವಾಗಿ ಮುಂದೆ ಚರ್ಚಿಸಲಾಗಿದೆ.

ದಲಿತ-ಬಂಡಾಯ ಕಾದಂಬರಿಗಳು ಮೂಲತಃ ಪ್ರತಿಭಟನಾತ್ಮಕವಾಗಿಯೇ ರಚನೆ ಗೊಂಡಿವೆ ಎಂಬುದು ಮನಗಾಣಬೇಕಾದ ವಿಷಯ, ಅದರೆ ಕಾದಂಬರಿಕಾರರು ಕಾದಂಬರಿಗಳಲ್ಲಿ ಚಿತ್ರಿತಗೊಂಡ ಪಾತ್ರಗಳು ವ್ಯವಸ್ಥೆಯ ವಿರುದ್ಧ ಯಾವ ನೆಲೆಯಲ್ಲಿ ಹಾಗೂ ಯಾವ ಯಾವ ಸಂದರ್ಭಗಳಲ್ಲಿ ಹೇಗೆ ವರ್ತಿಸುತ್ತವೆ ಎಂಬುದನ್ನು ಗ್ರಹಿಸುತ್ತಾ ಹೋದಂತೆ ಕುತೂಹಲಕರವಾದ ಮಾಹಿತಿಗಳು ನಮಗೆ ದಕ್ಕುತ್ತವೆ.

ಕಾದಂಬರಿಕಾರರು ಶೋಷಕನ ವಿರುದ್ಧ ನ್ಯಾಯ ಪಡೆಯಲು ಮನುಷ್ಯನ ಪ್ರಜ್ಞೆ ಹಲವು ಬಗೆಯ ಅಸ್ತ್ರಗಳನ್ನು ಉಪಯೋಗಿಸುತ್ತದೆ. ಅದು ಕೆಳವರ್ಗದವನ ದೈಹಿಕ, ಸಾಮಾಜಿಕ,ಭಾವನಾತ್ಮಾಕ ,ಮುಂತಾದ ನೆಲೆಗಳಿಂದ ಹೋರಾಡಿ ಇವುಗಳಿಂದ ಸಫಲ ವಿಫಲಗಳನ್ನು ಪಡೆಯುವುದು ಗ್ರಹಿಕೆಗೆ ಬರುತ್ತದೆ.ಇಂತಹ ನೆಲೆಗಳಿಂದ ನ್ಯಾಯಪಡೆಯುವ ಅಗತ್ಯತೆಯನ್ನು ಎತ್ತಿತೋರಿಸುತ್ತಾರೆ.

ದೇವನೂರು ಮಹಾದೇವರವರು ತಮ್ಮ ಕಾದಂಬರಿಯಲ್ಲಿ ಜಡಗೊಂಡ ಸಮಾಜಕ್ಕೆ ನೇರವಾಗಿ ಪ್ರತಿಭಟಿಸದೆ ಅದೇ ವ್ಯವಸ್ಥೆಯೊಳಗಿದ್ದು ಮೌನವಾಗಿ ನುಸುಳಿ ಪ್ರತಿಭಟಿಸುವ ಮೂಲಕ ಸಮಾನತೆಗೆ ಹಂಬಲಿಸುತ್ತಾರೆ. ಹಾಗೇ ದಲಿತ ಕಾದಂಬರಿಕಾರ ಮುಳ್ಳೂರು ನಾಗರಾಜ .ಇವರು ತಮ್ಮ ಕಾದಂಬರಿಯಲ್ಲಿ ವ್ಯವಸ್ಥೆಯ ವಿರುದ್ಧ ತೀರಾ ನಿಷ್ಠುರವಾಗಿಯಾದರೂ ನೇರವಾಗಿ ರೋಷವನ್ನೇ ಪ್ರಮುಖವಾಗಿ ಬಳಸಿಕೊಳ್ಳುತ್ತಾರೆ. ಅದು ಮರಣ ಮಂಡಲ ಮಧ್ಯದೊಳಗೆ ಬಸವರಾಜುವಿನ ಪಾತ್ರದಲ್ಲಿ ವ್ಯಕ್ತವಾಗುತ್ತದೆ. ಹಾಗೆಯೇ ಅರವಿಂದ ಮಾಲಗತ್ತಿ, ಮನಜರವರು ತಮ್ಮ ಸಮುದಾಯಗಳ ನಡುವೆಯೇ ಸಂಪ್ರದಾಯಗಳ ಹೆಸರಿನಲ್ಲಿ ಶೋಷಣೆಗೊಳಗಾಗುವುದನ್ನು ಅಥೆಂಟಿಕ್ ಆಗಿ ಬರೆದರೂ, ಆ ಸಂಪ್ರದಾಯಗಳನ್ನು ಮುನ್ನಡೆಸುವಲ್ಲಿ ಮೇಲು ವರ್ಗಗಳು ವಹಿಸುವ ಮತುವರ್ಜಿಯನ್ನು ಸ್ವಾರ್ಥದ ಪರಮಾವಧಿಯನ್ನು ಚಿತ್ರಿಸುತ್ತಾರೆ. ಎಚ್ಚರಗೊಂಡ ದಲಿತ ಮೇಲು ವರ್ಗಗಳ ವಿರುದ್ಧ ಪ್ರತಿಭಟಿಸುವುದನ್ನು ಚಿತ್ರಸುತ್ತಾರೆ.

ಸಮಾಜದಲ್ಲಿ ಆವರಿಸಿಕೊಂಡಿರುವ ವರ್ಗಸಮಸ್ಯೆ, ವರ್ಣ, ಜಾತಿ ಸಮಸ್ಯೆ, ಆರ್ಥಿಕವಾಗಿ ದುರ್ಬಲವಾದ ದಲಿತ ಸ್ತ್ರೀಯರ ಮೇಲೆ ನಡೆಸುವ ಅತ್ಯಾಚಾರ,ಜೀತ ಪದ್ಧತಿ, ಆಚರಣೆ ಇಂತ ಅಮಾನವೀಯ ನೀತಿಗಳಿಂದ ಕೆಳಸಮುದಾಯಗಳು ಮುಕ್ತಿ ಪಡೆಯುವುದು ಮತ್ತು ಹೊಸ ಬದುಕನ್ನು ಕಟ್ಟಿಕೊಡುವುದು ಕಾದಂಬರಿಕಾರರ ಉದ್ದೇಶವಾಗಿದೆ.

'ಕುಸುಮ ಬಾಲೆ'ಯಲ್ಲಿ ಯಾವುದೇ ಪಾತ್ರಗಳು ನೇರವಾಗಿ ಅಸಮಾನತೆಗೆ ಪ್ರತಿಭಟಿಸುವುದಿಲ್ಲ. ಬದಲಾಗಿ "ಅಸಮಾನತೆಯ ವ್ಯವಸ್ಥೆ ನಿರ್ಮಿಸಿದ ನೀತಿ ಮಾರ್ಗಗಳನ್ನು ಅ

ನೈತಿಕ ಸಂಬಂಧಗಳ ಮೂಲಕ ಪ್ರಶ್ನಿಸುತ್ತಾ ಪಾತಿವ್ರತ್ಯ, ಪಾವಿತ್ರ್ಯ, ಮಡಿವಂತಿಕೆಯಂತಹ ಸಂಬಂದಗಳ ಮೂಲಕ ಸಮಾಜದ ಒಳಹೂರಣವನ್ನು ಹೆಕ್ಕಿ ತೆಗೆಯಲು ಪ್ರಯತ್ನಿಸುತ್ತಾರೆ . ಆ ಮೂಲಕ ಮಹಾದೇವರವರು ಹೊಸ ಸಮಾಜಿಕ ವ್ಯವಸ್ಥೆಯೊಂದರ ಅಗತ್ಯವನ್ನು ಸೂಚಿಸುತ್ತಾರೆ"[೬೬]

ಏಕೆಂದರೆ ೭೦ರ ದಶಕದ ಸುಮಾರಿಗೆ ದಲಿತರು ಸಾರ್ವಜನಿಕವಾಗಿ , ಅರ್ಥಿಕವಾಗಿ ತುಂಬಾ ದುರ್ಬಲರಾಗಿದ್ದು ದೈಹಿಕ ಶ್ರಮವನ್ನೇ ಆತ್ಯಂತಿಕವಾಗಿ ನಂಬಿದ್ದರು. ಮೇಲು ವರ್ಗ ಇವರ ದೈಹಿಕ

ಶ್ರಮ ಮತ್ತು ಮನಸ್ಸುಗಳನ್ನು ಈಗಾಗಲೇ ವಶಮಾಡಿಕೊಂಡು ಮತ್ತಷ್ಟು ಶೋಷಣೆ ಮಾಡಲು ಇಂಥ ಸಂಕ್ರಮಣ ಪರಿಸ್ಥಿತಿಯಲ್ಲಿ ಆರ್ಥಿಕ ಸ್ವಾವಲಂಬನೆ, ಸಾಕ್ಷರತೆಯನ್ನು ಗಳಿಸಿಕೊಂಡರೆ ಮೇಲ್ವರ್ಗಗಳ ಜತೆ ಸಮಾನತೆಯನ್ನು ಸಾಧಿಸಲು ಸಾಧ್ಯ ಎಂಬ ವಾಸ್ತವ ಅರಿವನ್ನು ಕಂಡುಕೊಂಡರು. ಈ ಪ್ರಯತ್ನ ಅಕ್ಷರ ಕಲಿತ ದಲಿತರಿಂದ ಪ್ರೇರಣೆಗೊಂಡು ಸಾಧಿಸುವುದಾಗಿದೆ. ಆರ್ಥಿಕ ಸ್ವಾವಲಂಬನೆ, ಸಾಕ್ಷರತೇ ಇವು ಮೇಲು ವರ್ಗದ ವಿರುದ್ಧ ಸಮಾನತೆಯನ್ನು ಸಾಧಿಸುವ ಪ್ರಯತ್ನಗಳಾಗಿ ಇಲ್ಲಿ ಕಾಣಿಸುತ್ತವೆ.ಈ ಪ್ರಯತ್ನ ಅಕ್ಷರ ಕಲಿತ ದಲಿತರಿಂದ ಪ್ರೇರಣೆಗೊಂಡು ಸಾಧಿಸುವುದಾಗಿದೆ. ಇವೆಲ್ಲಾವುಗಳ ಹಿಂದೆ ಸಾಂಘಿಕ ಪ್ರಯತ್ನ ಮಾಡ ಬೇಕು. ಆಗಲೇ ಸಮಾನತೆಯನ್ನು ಸಾಧಿಸಲು ಸಾಧ್ಯಯೆನ್ನುವ ಸಂದೇಶವಿದೆ.

ದೇವನೂರರ ಕುಸುಮಬಾಲೆಯಲ್ಲಿ, ಆರ್ಥಿಕ ಸ್ವಾವಲಂಬನೆ ಹಾಗು ಶಿಕ್ಷಣದ ಪ್ರಾಮುಖ್ಯತೆ ಎದ್ದು ಕಾಣುತ್ತದೆ. ಮೇಲ್ವರ್ಗಾದ ಸ್ತ್ರೀಯರೊಂದಿಗೆ ಕೆಳವರ್ಗದ ಪುರುಷರು ಅನೈತಿಕ ಸಂಬಂಧ ಹೊಂದುವ ಇಂಗಿತವನ್ನು ದೇವನೂರರು 'ಕುಸುಮಬಾಲೆ' ಯಲ್ಲಿ ಹಿಡಿದಿಟ್ಟಿದ್ದಾರೆ. ಸಮಾನತೆಗೆ ಇದು ಒಂದು ಕಾರಣವಿದ್ದಿರಬಹುದು. ಈ ನೆಲೆಯಲ್ಲಿ ಕಾದಂಬರಿ ಉದ್ದಕ್ಕೂ ಅಕ್ರೋಶವಿಲ್ಲದೆ ತಣ್ಣನೆಯ ಹರಿತವ್ಯಂಗ್ಯದಲ್ಲಿ ಪ್ರತಿಭಟನೆ ಕಂಡುಬರುತ್ತದೆ.

ಕಾದಂಬರಿಯ ಅಕ್ಕಮಾದೇವಮ್ಮ ಪಾತ್ರವನ್ನು ಈಹಿನ್ನಲೆಯಿಂದ ನೋಡಿದಾಗ ಗಂಡ ಸತ್ತ ಮೇಲೆ ಹಟ್ಟಿ ಜೀತಗಾರರೊಂದಿಗೆ ಅನೈತಿಕ ಸಂಪರ್ಕ ಹೊಂದಿ 'ಯಾಡ' ನನ್ನು ಪಡೆದು ಭಾವ ಬಸಪ್ಪಸೋಮಿಯ ಹತ್ತಿರ ಪಾಲು ಕೇಳಲು ಬರುತ್ತಳೆ. ಅದು ಹನ್ನೆರೆಡುತಿಂಗಳ ನಂತರ ಬರುತ್ತಾಳೆ. ಅಕ್ಕಮಾದೇವಮ್ಮಳ ಅನೈತಿಕ ಸಂಬಂಧಕ್ಕೆ ಮುಖ್ಯವಾಗಿ ಎರಡು ಕಾರಣಗಳನ್ನು ಗುರುತಿಸಬಹುದಾಗಿದೆ.

೧. "ಅಕ್ಕಮಾದೇವಮ್ಮನ ಯೌವನವಿರುವಾಗಲೇ ಆಕೆಯ ಗಂಡ ಸತ್ತು ಹೋಗಿದ್ದರಿಂದ ವಯಸ್ಸಿನ ಸಹಜ ಬಯಕೆಗಳಿಗೆ ಸ್ಪಂಧಿಸಿದ್ದು.

೨. ಕೂಸೊಂದಿದ್ದರೆ ಆಸ್ತಿ ಹಕ್ಕು ಲಭಿಸುತ್ತದೆ ಎಂಬುದು ಎರಡನೇ ಕಾರಣ.

ಹೀಗಾಗಿ ಇಲ್ಲಿ ದೈಹಿಕ ತೃಪ್ತಿಮಾತ್ರವಿರದೆ ಕೂಸಿನಿಂದ ಸ್ವಲ್ಪ ಆಸ್ತಿ ಸಿಕ್ಕರೆ ಬದುಕಬಹುದೆಂಬ ಜೀವನ ಪ್ರೀತಿಯಿದೆ."[೯೭] ಈ ಪ್ರೀತಿಯಿಂದಾಗಿಯೇ ಯಾಡ ಕಂದನನ್ನು ಒಂದು ಹಂತದವರೆಗೂ ಬೆಳಿಸಿಕೊಂಡು ಬಸಪ್ಪ ಸೋಮಿಯ ಹತ್ತಿರ ಬಂದು ಪಾಲು ಬೇಡುತ್ತಾಳೆ. ಬಸಪ್ಪಸೋಮಿ ಅಕ್ಕಮಾದೇವಮ್ಮಗೆ ನೀನು ಹಟ್ಟಿ ಜೀತಗಾರನೊಂದಿಗೆ ಅನೈತಿಕ ಸಂಪರ್ಕ ಹೊಂದಿ ಮಗನನ್ನು ಹೆತ್ತು ಅಪವಿತ್ರಳಾಗಿರುವೆಯೆಂದು ನೂಕುತ್ತಾನೆ. ಇಲ್ಲಿ ಅಕ್ಕಮಾದೇವಮ್ಮಳು ತಾಳ್ಮೆಯಿಂದ ಪ್ರತಿಭಟಿಸುವುದನ್ನು ಗಮನಿಸಬೇಕು.

"ಸಿವಾ ಸಿವಾ ಈ ನನ್ ಕಿವಿಯಾರ ಕೇಳ್ಬೇಕಾಯ್ತಲ್ಲಪ್ಪ ಸಿವ ಸಿವ ಇದಾ,ಅಯ್ಯೋ ಸಿವಾ ... ಯಲ್ಲಾದ್ರು ನಾ ಅಂಥಾವ್ಳು ಭಾವಯ್ಯನೋರೇ.....? ನನ್ ಕಣ್ಣಾಣು.... ನಿಮ್ ಪಾದ್‌ದಾಣು....ನನ್ನೊಳ್ಗ ಸತ್ಯಅನ್ನೋದು ಇಲ್ಲದಿದ್ರ ನನ್ ಸತ್ತಿರೋ ಗಂಡ ಬಂದು ಈಗ್ ನನ್ ಮುರ್ಕಳ್ಲಿ ಬೇಕಾರ ಬೆಂಕಿಕೆಂಡ್ವ ಅಂಗೈಲಿ ಇಟ್ಕೊಂಡು ಅಣಬಾಸ ಮಾಡ್ತೀನಿ.ಇಂಥ ದೇವ್ರಂಥ ನಿಮ್ ಬಾಯಿಂದ್ಲೂನು ಕೇಳ್ಬೇಕಾರ ವೋದ ಜಲ್ಮದಲ್ಲಿ ನಾನು ಎಂಥ ಘೋರ ಪಾಪ್ಪ ಮಾಡಿದ್ನೋ ಸಿವ್ನೇ ... ನಿನ್ನ ಹೆಂಡ್ತಿ ಮುಂಡ್ಯಾಗ, ನೋಡ್ತಾ ಇದ್ದಿಯಲ್ಲಪ್ಪಾ... ಬೇಕಾರ ಈಗ್ಲೆ...."[೧೫]

ಎಂದು ಸಮರ್ಥಿಸುತ್ತಾಳೆ.ಕೆಳವರ್ಗಗಳು ಅದರಲ್ಲೂ ಅರ್ಥಿಕವಾಗಿ ದುರ್ಬಲವಾದ ಕೆಳವರ್ಗದ ಸ್ತ್ರೀಯರೂ ತಾವು ಅನೀತಿಮಾರ್ಗವನ್ನು ಹೊಂದಿದ್ದರೂ ಪಾವಿತ್ರ್ಯಳೆಂದು ಸಮರ್ಥಿಕೊಳ್ಳುತ್ತಾರೆ. ಇಲ್ಲಿ ಬಹುಮುಖ್ಯವಾಗಿ ಕಾಣುವುದು ಜೀವನ ಪ್ರೀತಿ ಹಾಗೂ ವ್ಯವಸ್ಥಿತ ಮತ್ತು ಭದ್ರ ಬದುಕಿನ ಹಂಬಲ.

ವಚನಕಾರ್ತಿ ಅಕ್ಕಮಾದೇವಮ್ಮಳು ಸಹ ಚನ್ನಮಲ್ಲಿಕಾರ್ಜುನನ್ನೇ ಗಂಡನೆಂದು ಸಮರ್ಥಿಸಿಕೊಳ್ಳುತ್ತಾಳೆ. 'ಕುಸುಮ ಬಾಲೆಯ ಅಕ್ಕಮಾದೇವಮ್ಮಳು ಬಸಪ್ಪ ಸೋಮಿಯಲ್ಲಿ ಸಮರ್ಥಿಸಿಕೊಂಡಿದ್ದನ್ನು. ಗಮನಿಸಬೇಕು'. 'ನನ್ನೊಳ್ಗ ಸತ್ಯ ಅನ್ನೋದು ಇಲ್ಲದಿದ್ರ ನನ್ ಸತ್ತಿರೋ ಗಂಡ ಬಂದು ಈಗ್ ಮುರ್ಕಳ್ಲಿ' ಎಂಬುದು. ಹೀಗೆ ಹೇಳುವಲ್ಲಿ ಸತ್ತು ಹೋಗಿರೋ ಗಂಡ ಮತ್ತೆ ಬರಲಾರನೆಂಬ ಎಚ್ಚರವಿರುವುದರಿಂದ 'ನನ್ನ ಮುರ್ಕಳ್ಳಿ' ಎಂದು ಪ್ರಾಮಾಣಿಕರಿಸುವುದಿದೆ. ಆದರೆ ಅವಳು ದೈಹಿಕವಾಗಿ ಭ್ರಷ್ಟಳಾಗಿದ್ದರೂ ಮಾನಸಿಕವಾಗಿ ವಿಕಲ್ಪಳಾಗಿಲ್ಲ ಅದರೆ ಬದುಕಬೇಕೆನ್ನುವ ಅದಮ್ಯ ಆಶೆ ಶೋಷಿತ ಬದುಕಿನ ಎಷ್ಟೋ ಪುರುಷ ಪಾತ್ರಗಳಿಗಿಂತಲೂ ವಿಭಿನ್ನವಾದದ್ದು ಮತ್ತು ಆತ್ಮಸಾಕ್ಷಿಯುತವಾದ ದ್ದಾಗಿದೆ. ಮುಂದುವರಿದು ಬೆಂಕಿ ಕೆಂಡ್ವ ಅಂಗೈಯಲ್ಲಿ ಇಟ್ಗಂಡು ಅಣಬಾಸ ಮಾಡ್ತೀನಿ' ಎಂದು ಹೇಳುತ್ತಾಳೆ. ಬಸಪ್ಪ ಸೋಮಿ ಅಕ್ಕಮಾದೇವಮ್ಮಳನ್ನು ಕೇರು ಮಾಡದೆ ಹೊರಗೆ ನೂಕಿದರೂ ಅವರನ್ನು 'ದೇವ್ರಂಥ' ಲೇ ಭಾವಿಸುತ್ತಾಳೆ, ಸಂಭೋಧಿಸುತ್ತಾಳೆ. ದೇವನೂರರು ಅಕ್ಕಮಾದೇವಮ್ಮಳ ಮೂಲಕ ಬಸಪ್ಪ ಸೋಮಿಯಂಥ ಫ್ಯೂಡಲಿಸ್ಟ್‌ಗಳಿಗೆ (ಯಾಜಮಾನಿಕೆಗೆ)ವ್ಯಂಗ್ಯ ಮಾಡಿಸುತ್ತಾರೆ. ಇಂಥ ವ್ಯಂಗದ ಮೂಲಕವೇ ಪ್ರತಿಭಟನೆ ವ್ಯಕ್ತಪಡಿಸುತ್ತಾರೆ. ಏಕಕಾಲಕ್ಕೆ ಸುತ್ತಲಿನ ಸಮಾಜದೊಂದಿಗೆ ಹಾಗೂ ತನ್ನ ಕೌಟುಂಬಿಕ ಸಂಬಂಧಗ ಳೊಂದಿಗೆ ಮುಖಾಮುಖಿಯಾಗುವ ಅಕ್ಕನ ಪಾತ್ರ ಹಕ್ಕಿನ ಪಾತ್ರವಾಗಿ ಕಂಗೊಳಿಸುತ್ತದೆ. ಅಕ್ಕಮಾದೇವಮ್ಮಳ ಹಾಗೆ ಬರಗೂರ ಸೂರ್ಯ ಕಾದಂಬರಿಯಲ್ಲಿಯ ನಾಯಕಿ ಸೀತಮ್ಮ ಸಹ ಜಮೀನ್ದಾರನ ಬಳಿ ಲೈಂಗಿಕ ಸುಖ ಕಾಣದೆ ಖಿನ್ನಳಾಗಿ, ಬಳಲುತ್ತಿರುವಾಗ ಜಮೀನ್ದಾರ 'ಇವತ್ತೇನಾಗ್ಯೆತೆ ನಿಂಗೆ' ಎನ್ನುವ ಮಾತಿಗೆ "ನಂಗಿನ್ನೇನು ಬ್ಯಾಡ,ಗಂಡ

ಬೇಕು ಗಂಡ!''[೫೯] ಎಂದು ರೋಧಿಸುವುದರ ಹಿನ್ನೆಲೆಯು ಮಹತ್ವದ್ದು. ಸೀತಕ್ಕ ಜಮೀನ್ದಾರನಿಗೆ ಅಂಟಿಕೊಂಡಿದ್ದ ಲೈಂಗಿಕರೋಗದ ಬಗ್ಗೆ ತಿಳಿದುಕೊಂಡಿರುತ್ತಾಳೆ. ಹಾಗಾಗಿ ತನ್ನ ಮನೆಯ ಜೀತದಕರಿಯನೊಂದಿಗೆ ರಕ್ತ ಸಂಬಂಧ (ಲೈಂಗಿಕ) ಹೊಂದಿ ಗರ್ಭವತಿಯಾಗುತ್ತಾಳೆ. ಈ ವಿಷಯ ಮನೆಯ ಕೆಲಸದಾಳು ಕಾಳವ್ವಗೆ ಗೊತ್ತಗುತ್ತದೆ.ಕಾಳವ್ವ ಸೀತಕ್ಕಳನ್ನು ಕುರಿತು ನಿಮ್ಮಂಥ ದೊಡ್ಡ ಮನೆತನದವರು ಈ ರೀತಿ ಮಾಡಿದರೆ ಮಾರ್‍ಯದೆ.... ಅಲ್ಲದೆ ನಿಮ್ಮ ಹೆಸರು ನೋಡಿದರೆ ಸೀತಕ್ಕ, ಎಂದು ಹೇಳುವಷ್ಟರಲ್ಲೇ ಸೀತಕ್ಕ ತಡೆದು ''ನಾನೀಗ್ಲೂ ಸೀತಕ್ಕ, ಯಾವಾಗ್ಲೂ ಸೀತಕ್ಕ ಕಾಳವ್ವ, ನೋಡು ನಂಗ್ಯಾರ್ ಸುಖ ಕೊಟ್ರೊ ಅವ್ರಿಗ್ ನಾನು ಅನ್ಯಾಯ ಮಾಡಕಿಲ್ಲ. ಆಂದ್ ಮ್ಯಾಲೆ ನಾನ್ ಸೀತಕ್ಕನೇ ಅಲ್ವ ಕಾಳವ್ವ?''[೬೦] ಎನ್ನುವಲ್ಲಿ ಮಕ್ಕಳನ್ನು ಪಡೆಯುವ ಹಂಬಲವನ್ನು ವ್ಯಕ್ತಪಡಿಸುತ್ತಾಳೆ. ಇಲ್ಲೇ ಸೀತಕ್ಕಳ ಮಾತನ್ನು ವಿಶ್ಲೇಸುವುದಾದರೆ, ಸಂತೋಷ, ಸುಖ, ಮಗುವನ್ನು ಕೊಟ್ಟೋರನ್ನು ಅನ್ಯಮಾಡಕಿಲ್ಲವೆಂಬುದು ಗಮನಾರ್ಹ ಅಂಶವಾಗುತ್ತದೆ.

ಸೀತಕ್ಕ ಕೇವಲ ಲೈಂಗಿಕ ಸುಖ ಹೊಂದಿ ಕರಿಯನನ್ನು ಶೋಷಣೆ ಮಾಡುವುದಿಲ್ಲ.ಬದಲಾಗಿ ಕರಿಯನ ಸುಖ ದುಃಖಗಳಿಗೆ ಪಾಲುದಾರಳಾಗಿ ಕಾದಂಬರಿಯ ಕೊನೆಯಲ್ಲಿ ಪಂಚಾಯ್ತಿ ಎದುರಿಗೆ ಕರಿಯನ ಕೈ ಹಿಡಿದು ಹೊರಟು ಹೋಗುತ್ತಾಳೆ.ಇದೆಲ್ಲವನ್ನು ಗಮನಿಸಿದಾಗ ಬರಗೂರರು ಸೀತಕ್ಕನ ಪಾತ್ರಸೃಷ್ಟಿಯೊಂದಿಗೆ ಸೀತಕ್ಕ ಹಾಗೂ ಕರಿಯನ ಸಂಬಂಧದಿಂದ ಸಮಾನ ಸಾಮಾಜಕ್ಕೆ ಹಂಬಲಿಸುತ್ತಾರೆ. ದೇವನೂರು ಸೃಷ್ಟಿಸಿದ ಅಕ್ಕಮಾದೇವಮ್ಮ ಹಾಗೂ ಬರಗೂರರ ಸೀತಕ್ಕಳ ಪಾತ್ರದ ಸೃಷ್ಟಿಯನ್ನು ಗಮನಿಸಿದಾಗ ಪೌರಾಣಿಕ ವ್ಯಕ್ತಿಗಳಂತೆ ಕಾಣಿಸುತ್ತಾರೆ. ಆ ಪಾತ್ರಗಳು ಆಂತರ್ಯ ಹಾಗೂ ಬಾಹ್ಯವಾಗಿ ಅಸಮತಾ ವ್ಯವಸ್ಥೆಗೆ ಪ್ರತಿಭಟನೆ ವ್ಯಕ್ತಪಡಿಸುತ್ತಾರೆ.

ಈ ಎರಡು ಹೆಣ್ಣು ಪಾತ್ರಗಳು ವಿರುದ್ಧ ಚಲನೆಯನ್ನು ಹೊಂದಿದಂತವು . ಗರ್ಭದ ವಿಷಯದಲ್ಲಿ, ಮಕ್ಕಳ ವಿಷಯದಲ್ಲಿ ಸಮಾನ ಮನಸ್ಸನ್ನು ಹೊಂದಿದವೂ ಆಗಿವೆ. ಅನ್ಯ ಲೈಂಗಿಕ ಸಂಬಂಧಗಳಲ್ಲಿ ತಮ್ಮ ಜೀವನದ ಸಾಫಲ್ಯತೆ ಇರುವುದು ಕಾಣುತ್ತದೆ. ಹೆಣ್ಣಿನ ಗರ್ಭದಿಂದಲೇ ಮುಕ್ತಿ ಎನ್ನುವ ಮೂಲಕ ಅವಳ ವ್ಯಕ್ತಿವನ್ನು ಇಲ್ಲವಾಗಿಸಿದ ವೈದಿಕ ಮನಸ್ಸುಗಳ ಹುನ್ನಾರ ಇದಾಗಿದೆ. ವಿವಾಹ ಚೌಕಟ್ಟಿನಲ್ಲಿ ಗಂಡಸಿಗೆ ಹೆಣ್ಣಿನ ವ್ಯಕ್ತಿತ್ವವನ್ನು ಒತ್ತೆ ಇಡಲಾಗಿದೆ.ಶ್ರಮ ಬದುಕಲ್ಲಿ ಗರ್ಭಕ್ಕಿಂತ ಅವಳ ದೈಹಿಕ ಶ್ರಮಕ್ಕೆ ಆರ್ಥಿಕ ಸ್ವಾವಲಂಬನೆಗೆ ಪ್ರಾಧಾನ್ಯತೆಯಿದೆ. ವೈದಿಕ ಪ್ರಣೀತ ಊಳಿಗಮಾನ್ಯ ವ್ಯವಸ್ಥೆಯ ಪ್ರತೀಕಗಳಾದ ಜಮೀನ್ದಾರಿ ವ್ಯವಸ್ಥೆಗೆ ತಾಯಿಯಾಗಕ ಹೆಣ್ಣು ಅಸ್ತಿತ್ವ ರಹಿತಳಾಗೇ ಕಾಣುತ್ತಾಳೆ. ಇಲ್ಲಿ ಮಗು ಬೇಕು ಆ ಮೂಲಕ ತನ್ನ ಆಸ್ತಿ ಹಕ್ಕನ್ನು ತನ್ನ ಅಸ್ತಿತ್ವದ ಕುರುವನ್ನು ಸಾಭೀತುಪಡಿಸುವ ಈ ಪಾತ್ರಗಳಿಗೆ ಅದು ಬಿಟ್ಟು ಬೇರೆ ಉದ್ದೇಶವಿದ್ದಂತೆ ಅನಿಸುವುದಿಲ್ಲ. ಮಡಿಲು

ತುಂಬಿದವನಿಗೆ ಬದ್ಧರಾಗಿ ಉಳಿಯುವ ಮೂಲಕ ಜೀವ ವಿರೋಧಿ ಸಾಮಾಜಿಕ ವ್ಯವಸ್ಥೆಯನ್ನೇ ಹಂಗಿಸುತ್ತಾರೆ.

ಸೀತಕ್ಕಳಿಗೆ ಎಲ್ಲಾವೂ ಇದೆ. ಆದರೆ ಏನು ಇಲ್ಲ, ನಿವೀರ್ಯನಾದ ಗಂಡ ನಿರ್ಭಾವುಕ ಪರಿಸರ ನಿಸರ್ಗವಿಮುಖ ಬದುಕು. ಒಂದು ಕಾಲದಲ್ಲಿ ಇಡಿ ಸಾಂಸ್ಕೃತಿಕ ವ್ಯವಸ್ಥೆಯನ್ನೇ ನಿಯಂತ್ರಿಸಿದ ಜಮೀನ್ದಾರಿ ವ್ಯವಸ್ಥೆ ಇಂದು ನಿರ್ವೀರ್ಯವಾಗಿದೆ. ಭೂಮಿ ಮೇಲಿನ ಸಕಲ ಸಂಪನ್ಮೂಲವನ್ನು ತನ್ನ ಭೋಗ ವಸ್ತುವನ್ನಾಗಿಸಿಕೊಂಡ ಇದು ಇಂದು ತನ್ನ ಕೌಟುಂಬಿಕ ವ್ಯವಸ್ಥೆಯ ಮೇಲೆಯೇ ತನ್ನ ಹಿಡಿತವನ್ನು ಕಳೆದುಕೊಂಡಿದೆ. "ಮನೆಯೊಳಗೆ ಮಾತ್ರವಲ್ಲ, ಮನೆ ಹೊರಗೂ ಹಿಡಿತ ಇಲ್ಲ ಅನ್ನೋದು ಅವನಿಗೆ ಅರಿವಾಗಿತ್ತು. ಈಗ ಮೊದಲಿನಂತೆ ಇಲ್ಲ. ರಾಮಣ್ಣನ ರಾಜಕೀಯ ಶುರುವಾಗಿದೆ. ಅವನದೇ ಗುಂಪು ಹಿಂದೆ ಮುಂದೆ ಸುತ್ತಾಡ್ತ ಇದೆ. ಬಡವರ ಉದ್ಧಾರ,ಹರಿಜನ ಉದ್ಧಾರ,ಗಿರಿಜನ ಉದ್ಧಾರ ಅದೂ ಇದೂ ಹೇಳ್ಕೊಂಡು ಬಡವರ ಬಂಧು ಬೇರೆ ಆಗ್ತಾ ಇದ್ದಾನೆ.ಇಂಥಾದ್ರಲ್ಲಿ ತನ್ನ ದರ್ಪವೆಲ್ಲ ಸತ್ತ ಸರ್ಪವಾಗುತ್ತಿದೆಯೇನೋ ಅನ್ನಿಸಿ ಆಘಾತಗೊಂಡು, ಊರೊಳಗಿನ ಶಕ್ತಿಗಳೆಲ್ಲ ಸೀತಕ್ಕನ ರೂಪದ ಒಳಗೆ ಬಂದು ಸೇರಿಕೊಂಡಂತೆ ಕಾಣ್ತಿದೆಯಲ್ಲ ಅಂತ ಹಿಂಸೆಯ ಉಸುಕಿನಲ್ಲಿಒದ್ದಾಡಿದ"[೬೦] ಎಂಬುದು ಊಳಿಗಮಾನ್ಯ ವ್ಯವಸ್ಥೆಯ ಈ ಪಳಿಯುಳಿಕೆಗಳು ಕೆಡುಕಿನ ಮತ್ತು ನಿರ್ವೀರ್ಯತೆಗಳ ಸಂಕೇತಕವಾಗಿ ಕಾಣಿಸುತ್ತವೆ. ಇದು ವಸಾಹತುಶಾಹಿ ಕಟ್ಟಿ ಕೊಟ್ಟ ಶುಷ್ಕ ಬದುಕಿನ ಪರಿಣಾಮವೇ ಆಗಿದೆ.

ಚಂದ್ರಶೇಖರ ಕಂಬಾರರ ಸಿಂಗಾರೆವ್ವ ಮತ್ತು ಅರಮನೆಯ ಸಿಂಗಾರೆವ್ವ ಮತ್ತು ಸರಗಂದೇಸಾಯಿ ಇಲ್ಲಿ ನೆನಪಿಗೆ ಬರುತ್ತಾರೆ. ಷಂಡನಾದ ಗಂಡನಿಂದ ಬೇಸತ್ತು ಮಾರನಂತಹ ಸೃಷ್ಠಿಶೀಲ ಗುಣವುಳ್ಳ ಗಂಡಸಿನಿಂದ ವಂಶೋದ್ಧಾರತೆಯನ್ನು ಹೊಂದುತ್ತಾಳೆ. ಹಾಗೆ ತನಗೊದಗಿದ ಸಂಕಟವನ್ನು ಪರಿಹರಿಸಿಕೊಳ್ಳುತ್ತಾಳೆ. ಇಲ್ಲಿ ಸೀತಕ್ಕನು ಮಾಡುವುದು ಇದನ್ನೇ. ದೇಸಗತಿ ಊರ ಸಂಮೃದ್ಧಿಯ ಪ್ರತೀಕ. ಆ ಸ್ಥಾನವನ್ನು ಉಳ್ಳಿಸಿಕೊಳ್ಳಲು ಗಂಡಿಗಿಂತ ಹೆಣ್ಣಿಗೆ ಹವಣಿಕೆ ಜಾಸ್ತಿ ವಂಶಾಭಿವೃದ್ಧಿ ಮೂಲಕ ವಾರಸುದಾರಿಕೆಯನ್ನು ಮುಂದುವರಿಸುತ್ತವೇ.ಅಕ್ಕಮ್ಮನಲ್ಲಾಗಲಿ ಸೀತಕ್ಕನಲ್ಲಾಗಲ್ಲೀ ಇದೇ ಪ್ರಾಧಾನವಾದದ್ದು. ಮಾತೃಪ್ರಧಾನ ವ್ಯವಸ್ಥೆಯ ಮೂಲ ವಂಶಾಭಿವೃದ್ಧಿ. ಇದು ಮತ್ತೆ ಆಶಯ ದ್ರಾವಿಡ ಸಂಸ್ಕೃತಿಯತ್ತ ಬೆರಳು ಮಾಡಿ ತೋರಿಸುತ್ತದೆ. ಫರ್ಟಿಲಿಟಿ ಪ್ರಕ್ರಿಯೆ ದ್ರಾವಿಡರಲ್ಲಿ ರಕ್ತಗತವಾದದ್ದು. ಕೆಳವರ್ಗದ ಜೀತದಾಳಿನ ಮೂಲಕ ಗರ್ಭಧರಿಸುವ ಇಂಥ ಕ್ರಿಯೆಗಳು ಶ್ರಮಿಕ ವರ್ಗಗಳ ಸೃಷ್ಟಿಶೀಲತೆಯನ್ನು ಎತ್ತಿ ತೋರಿಸುವಂಥವು. ಆ ಮೂಲಕ ಮೇಲುವರ್ಗಗಳ ನಿರ್ಗಾಯತೆಯನ್ನು, ಒಣದರ್ಪವನ್ನು ತಣ್ಣಗೆ ಚಿತ್ರಿಸಿಕೊಡುತ್ತವೆ.

ಮೇಲುವರ್ಗದ ಸ್ತ್ರೀಯರೊಂದಿಗೆ ಕೆಳವರ್ಗದ ಪುರುಷರು ಅನೈತಿಕ ಸಂಬಂಧ ಹೊಂದುವುದು ವಂಶೋದ್ಧಾರತೆಗೆ ನೆರವಾಗುವುದು ಜಡಗಟ್ಟಿದ ಸಮಾಜದ ನಿರ್ವೀರ್ಯತೆಗೆ ಒಡ್ಡುವ ಪ್ರತಿಭಟನೆಯಾಗಿದೆ. ದಲಿತ- ಬಂಡಾಯ ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ಈ ವಿಧಾನವನ್ನು ಅನುಸರಿಸಿದ್ದಾರೆ. ದೇವನೂರರು ಕುಸುಮಬಾಲೆಯಲ್ಲಿ ಈ ವಿಧಾನವನ್ನು ಬಳಸಿಕೊಂಡು ಹೆಚ್ಚು ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಈ ಕಾದಂಬರಿಯ ಉದ್ದಕ್ಕೂ ಗಂಡು ಹೆಣ್ಣಿನ ಸಂಬಂಧ ಜಾತಿ ಮತವನ್ನು ಮೀರಿ ತೆಗೆದುಕೊಂಡಿದೆ. ಮನುಷ್ಯ ಮೇಲು ಎನ್ನುವ ಭ್ರಮೆಯಲ್ಲಿ ಬದುಕುತ್ತಿರುತ್ತಾನೆ. ಅದರೆ ಯಾವ ವಂಶದ ವೃಕ್ಷದ ಬೇರು ಎಲ್ಲಿದೆ ಎಂದು ಹೇಳಲೂಬಾರದು. ಯಾಡ ಅಪ್ಪ ಸತ್ತ ಹನ್ನೆರೆಡು ತಿಂಗಳಿಗೆ ಜೀತಗಾರನಿಗೆ ಹುಟ್ಟಿದವನು. ಹೊಲೆಯರ ಚನ್ನ ಮತ್ತು ಕುಸುಮರ ಸಂಬಂಧ ಬೇರೆಯವರಿಂದ ಅಪೇಕ್ಷಿಸುವ ಕೆಂಪಿ, ಯಾರಿಗೋ ಹುಟ್ಟಿ ಅಸ್ಪತ್ರೆಯಲ್ಲಿ ಅನಾಥಳಾಗಿ ಬಿದ್ದಿದ್ದ ಸೋಮೇಗೌಡರ ಹೆಂಡತಿ ಮಲ್ಲಾಜಮ್ಮ, ಆಚಾರ್‍ಯರ ಭಗವತಿ ಮತ್ತು ಹೊಲೆಯರ ಅಮಾಸಗ ಸಂಬಂಧ. ಗಮನಿಸಬೇಕಾದ ವಿಚಾರವೆಂದರೆ ಈ ಸಂಬಂಧಗಳ ಬಗೆಗೆ ಎಲ್ಲಯೂ 'ಪಾಪ ಪ್ರಜ್ಞೆ' ಕಾಡುವುದಿಲ್ಲ.ಇದು ಸಾಮಾನ್ಯ ಸಂಗತಿ ಎನ್ನುವುದನ್ನು ಜೋತಮ್ಮನು ಕಾದಂಬರಿಯ ಮೊದಲಿಗೆ ಐ.... ಎಲ್ರೂ ಮಾಡೋಯಥಾರ್ಥನೆ ಹೇಳ್ತಾಳೆ. ಏನ್ ವಿಚಾರ್ವ ಅದು' ಎಂದು ಹೇಳುವಲ್ಲಿ ಅಪರಾಧ ಭಾವ ಕಂಡು ಬಾರದಿರುವುದನ್ನು ಗಮನಿಸಬಹುದು. ಆದರೆ ಚೆನ್ನ ಕುಸುಮರ ಆನೈತಿಕ ಸಂಬಂಧ ದುರಂತದಲ್ಲಿ ಪರ್ಯಾವಸನಗೊಳ್ಳುತ್ತದೆ. ಮೇಲು ಜಾತಿಯ ಬಗ್ಗೆ ತನ್ನಲ್ಲಿದ್ದ ರಿವೇಂಜನ್ನು (ಸೇಡು) ಚನ್ನ ಕುಸುಮಗಳ ಮೇಲೆ ತೀರಿಸಿಕೊಂಡನೆಂದಾದರು ಅವನು ಮಾಡಿದ ತಪ್ಪಿಗೆ ಬೆಲೆ ಕೊಡಬೇಕಾಯಿತು, ಕೊಟ್ಟ, ಕೂಡಿದ ತಪ್ಪಿಗೆ ಇವಳ ಪ್ರಾಯಶ್ಚಿತ್ತ ಬೀಳಬೇಕಾಯಿತು. ಬಿದ್ದಳು, ಆಯಿತು, ಮೇಲುವರ್ಗದ ಸ್ತ್ರೀಯರೊಡನೆ ಕೆಳವರ್ಗದ ಗಂಡು ಶೋಷಣೆಗೆ ಒಳಗಾಗುತ್ತನೆಂಬುದನ್ನು ಸೂಕ್ಷ್ಮವಾಗಿ ಚೆನ್ನ ಪಾತ್ರದೊಂದಿಗೆ ಗುರ್ತಿಸಬಹುದು. ಆದರೆ ಈ ದುರಂತ ನೋವಿನಲ್ಲಿಯೇ ಹೊಸತೊಂದು ಜೀವ ಬೆಳೆಯುತ್ತಿದೆ. ಚನ್ನ ಕುಸುಮರ ಸಂಗಮದಿಂದ ಹುಟ್ಟಿದ ಎರಡು ಸಂಸ್ಕೃತಿಗಳಿಂದ ಕಸಿಗೊಂಡು ಕಪ್ಪು ಕಂದ ಕಸುಮಳ ತೊಡೆಯ ಮೇಲೆ ಆಡುತ್ತ ಪ್ರತಿ ಸಂಸ್ಕೃತಿಯ ನಿರ್ಮಾಣದಾತಾರನಾ ಮುಂದೆ ಬೆಳೆಯಲಿದ್ದಾನೆ ಎಂಬ ನಿರೀಕ್ಷೆಯೊಂದು ಗಟ್ಟಿಯಾಗಿ ನಿಲ್ಲುತ್ತದೆ. ಇದೇ ಕೃತಿಕಾರರ ಆಶಯವು ಕೂಡ. ಈ ಆಶಯವನ್ನು ಬರಗೂರರಲ್ಲಿಯೂ ಗುರ್ತಿಸಬಹುದು. ಸೀತಕ್ಕ- ಕರಿಯನ ಸಂಬಂಧದಿಂದ ಸೀತಕ್ಕನ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಕೂಸನ್ನು ಕುರಿತು ಸೀತಕ್ಕ ಕಾಳ್ಳಳಿಗೆ ಹೇಳುವ ಮಾತು ಅರ್ಥಪೂರ್ಣವಾಗಿದೆ.

"ನನ್ನೊಟ್ಟೇಗಿಂದ ಸೂರ‍್ಯನ್ ತರ ಮಗ ಹುಟ್ ಬಂದಾಗ ಎಲ್ಲಾ ಕಡೀಕ್ ಬೆಳಕ್ ಬೀಳೈತೆ. ದಿಕ್ಕುದೆಸೆ ಎಲ್ಲಾ ಕಾಣುಸ್ತೈತೆ. ನನ್ನೊಟ್ಟೆನಾಗೆ ಸೂರ‍್ಯಪ್ಪ ಅವ್ನೆ ಕಾಳವ್ವ ಸೂರ್ಯಪ್ಪ ಅವ್ನೆ. ಆ ಸೂರ‍್ಯಪ್ಪ ಹುಟ್ ಬಂದು ಹಟ್ಟಿನಾಗೆಲ್ಲಾ ಹೆಜ್ಜೆ ಹಾಕುತ್ತಾನೆ. ಆಗ....ಆಗ...."

ಎಂದು ಸಮರ್ಥಿಸಿಕೊಳ್ಳುವಲ್ಲಿ ಸ್ತ್ರೀಯಲಿದಮ್ಮ ತಾಯ್ತನದ ಹಂಬಲವನ್ನು ಗುರ್ತಿಸಬಹುದು. ಚನ್ನನ ಹಾಗೆ ಕರಿಯನು ಮಾಡಿದ ತಪ್ಪಿಗೆ ಬೆಲೆ ನೀಡುತ್ತಾನೆ. ಕರಿಯನ ಮೇಲಿನ ದ್ವೇಷದಿಂದಾಗಿ ಜಮೀನ್ದಾರ ಕರಿಯನ ಹೆಂಡತಿ ಚೆನ್ನಿಯನ್ನು ಅತ್ಯಾಚಾರ ಮಾಡಿ ಕೊಲೆ ಮಾಡುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಒಂದನ್ನು ಪಡೆಯುವುದರ ಜೊತೆಗೆ ಮತ್ತೊಂದನ್ನು ಕಳೆದುಕೊಳ್ಳುತ್ತಾರೆ. ಇದನ್ನು ಚೆನ್ನ- ಕರಿಯನ ಪಾತ್ರದಲ್ಲಿ ಕಾಣುತ್ತೇವೆ.

ಮೇಲುವರ್ಗದ ಸ್ತ್ರೀಯರೊಡನೆ ಕೆಳವರ್ಗದ ಗಂಡು ಅನೈತಿಕ ಸಂಬಂಧ ಹೊಂದುವಾಗ ಮೇಲುವರ್ಗದ ಪುರುಷ ಅಥವಾ ಫ್ಯೂಡಲಿಜಂ ಕೆಳವರ್ಗದ ಪುರುಷನ ಮೇಲೆ ದೌರ್ಜನ್ಯವೆಸಗುವುದು ವಾಸ್ತವ ಸತ್ಯ ಸಂಗತಿ. ಈ ಸಂಗತಿಯನ್ನು ದೇವನೂರರು ಯಾವ ಅಕ್ರೋಶವಿಲ್ಲದಂತೆ ಪಾತ್ರ ಸೃಷ್ಟಿಸಿದ್ದಾರೆ, ಅರವಿಂದ ಮಾಲಗತ್ತಿ, ಬರಗೂರರು ಶೋಷಕನ ದೌರ್ಜನ್ಯವನ್ನು ಆವೇಶ, ಆಕ್ರೋಶಗಳಿಂದ ಸಿಡಿಯುವಂತೆ ಚಿತ್ರಿಸುತ್ತಾರೆ, ಈ ಕಾದಂಬರಿಕಾರರ ಖಳನಾಯಕ ಅಥವಾ ಫ್ಯುಡಲಿಜಂ ಪಾತ್ರಗಳಾದ ಶಾಂತೇಗೌಡ, ಜಮೀನ್ದಾರ ಇವರಲ್ಲಿ ಗುರುತಿಸಬಹುದು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ ಲೈಂಗಿಕ ಸಂಪರ್ಕ ಹೊಂದಿದ ಕೆಳವರ್ಗಆಕ್ಷೇಪವೆತ್ತುವುದಿಲ್ಲ. ಈ ಅಂಶವನ್ನು ದೇವನೂರ ಕುಸುಮ ಬಾಲೆಯ ಚರ್ಚೆಯ ಸಂದರ್ಭದಲ್ಲಿ ಗಮನಿಸಿದೆ. ಆದರೆ ಮಾಲಗತ್ತಿಯವರ ಕಾರ್ಯದಲ್ಲಿ ಮೇಲುವರ್ಗದ ಸ್ತ್ರೀಯೊಂದಿಗೆ (ಸಂಪರ್ಕ) ಸಂಬಂಧ ಹೊಂದಿದ ದಲಿತನಿಗೆ ತನ್ನ ಸಮುದಾಯದಿಂದಲೂ, ಮೇಲುವರ್ಗಗಳಿಂದಲೂ ಆಕ್ಷೇಪಕ್ಕೆ ಗುರಿಯಾಗುತ್ತಾನೆ. ಹಾಗೆ ಶೋಷಣೆ ಗೊಳಗಾಗುವ ಪಾತ್ರ ಘಟೇಗಾರ ಮಲ್ಲಪ್ಪ, ಈತನು ಶಾಂತೇಗೌಡರ ಎರಡನೆ ಹೆಂಡತಿ ಪದ್ಮಾವತಿಯೊಂದಿಗೆ ಅನೈತಿಕ ಸಂಬಂಧ ಹೊಂದಿರುತ್ತಾನೆ. ವಿಚಿತ್ರವೆಂದರೆ, 'ಅನೈತಿಕ' ವೆಂದರೇನೇ ಗುಪ್ತವಾಗಿ ಲೈಂಗಿಕ ಸುಖ ಹೊಂದುವುದು. ಆದರೆ ಮಲ್ಲಪ್ಪನ ಗುಪ್ತವಿಷಯವನ್ನು ತಮ್ಮ ಅಜ್ಞಾನ, ಮೌಢ್ಯ, ಸಂಪ್ರದಾಯದಿಂದಲೋ ಮಚಗಾರರ ಪಂಚಾಯ್ತಿ ಯವರೆಗೂ ತಲುಪಿ, ವಿಷಯ ಬಹಿರಂಗವಾಗಿ ಹಬ್ಬಿಸಿಕೊಂಡು ಮಲ್ಲಪ್ಪ ಮಾಡಿದ ತಪ್ಪಿಗೆ ಇಡೀ ಸಮುದಾಯವೇ ಶಾಂತೇಗೌಡನಿಗೆ ಶರಣಾಗಿಬಿಡುತ್ತದೆ. ಹೀಗೆ ವಿಷಯ ಬಹಿರಂಗಗೊಳಿಸಲು ಕಾರಣವೂ ಇದೆ. ಪದ್ಮಾವತಿಯೊಂದಿಗೆ ಮಲ್ಲಪ್ಪ ಸಂಪರ್ಕ ಹೊಂದಿರುವುದು ಗೊತ್ತಾದರೆ ನಾವು ಬದುಕುವುದು ಕಷ್ಟ ಎಂಬ ಪ್ರಜ್ಞೆ ಒಂದಾದರೆ

ಮಚಗಾರರ ಸಂಪ್ರದಾಯದಲ್ಲಿ ಇಂಥ ಸಂಬಂಧಗಳು ಚಾಲ್ತಿಯಲ್ಲಿವೆ ಎಂಬುದು ಇನ್ನೊಂದು. ಈ ಅಂಶಗಳಿಗಿಂತಲೂ ಮುಖ್ಯವಾದುದೆಂದರೆ, ಚಂದಪ್ಪನ ರಾಜಕೀಯ ಆಕಾಂಕ್ಷೆ. ಈ ಹಿನ್ನಲೆಯಿಂದ ಮಲ್ಲಪ್ಪನಿಗೆ ಪಂಚಾಯ್ತಿಯಲ್ಲಿ ತನ್ನದೇ ಸಮುದಾಯದ ಹೆಂಗಸರು ಪ್ರತಿಭಟಿಸುವುದನ್ನು ಹೀಗೆ ಗುರ್ತಿಸಬಹುದು.

''ಹೇ ಮಲ್ಲ್ಯ! ಮುದುಕನಾಗಿ ಹೆಂಡ್ತಿ ಮಕ್ಕಳು ಕಟ್ಟಿಕೊಂಡು ಇಂಥ ಹಲ್ಕಾ ಬುದ್ಧಿ ಎಲ್ಲಿಂದ ಬಂತು''[೬೩]

ಮಲ್ಲಪ್ಪ ಹೀಗೆ ಸಂಪರ್ಕಹೊಂದಲು ಕಾರಣ ಕೊಡಬಹುದು. ತಾನು ಕುಸ್ತಿ ಪಟುವಾಗಿ ಶಾಂತೇಗೌಡನ ಪಟುವನ್ನು ಸೋಲಿಸಿದ್ದನು. ಇದರಿಂದ ಅವಮಾನಗೊಂಡ ಶಾಂತೇಗೌಡ ಮಲ್ಲಪ್ಪನನ್ನೇ ತನ್ನ ತೋಟದ ಆಳಾಗಿ ನೇಮಿಸಿಕೊಂಡು ಅವನ ಶಕ್ತಿಯನ್ನೆಲ್ಲಾ ಅಡಗಿಸಿದನು. ಈ ಕಾರಣದಿಂದಾಗಿಯೇ ಅವನ ಹೆಂಡತಿಯೊಂದಿಗೆ ಸಂಬಂಧವಿಟ್ಟುಕೊಂಡು ಸೇಡು ತೀರಿಸಿಕೊಂಡನು. ಮಲ್ಲಪ್ಪ ಎರಡು ವರ್ಗಗಳಿಂದಲೂ ಶೋಷಿತಗೊಂಡರೂ ಪದ್ಮಾವತಿಯೊಂದಿಗೆ ಓಡಿ ಹೋಗುತ್ತಾನೆ, ಹೀಗೆ ಓಡಿ ಹೋದ ಮಲ್ಲಪ್ಪ ಪ್ರತಿಷ್ಠಿತ ವರ್ಗಕ್ಕೆ ತಲೆನೋವಾಗಿ ಪರಿಣಮಿಸುತ್ತಾನೆ. ಕಾದಂಬರಿಕಾರನ ಆಶಯವು ಇದೇ ಆಗಿದೆ.

''ಗೌಡನ ಹೆಂಡತಿ ಪದ್ಮಾವತಿಯೊಂದಿಗೆ ದಲಿತ ಗಂಡೊಂದು (ಮಲ್ಲಪ್ಪ) ಸಂಪರ್ಕ ಪಡೆಯುವುದು ಸಾಧ್ಯ ಎನ್ನುವ ಕಲ್ಪನೆಯೂ ಆರ್ಥಿಕ ಮತ್ತು ಸಮಾಜಿಕವಾಗಿ ದಲಿತ ಬದಲಾವಣೆ ಹೊಂದಲು ಸಾಧ್ಯ ಎನ್ನುವ ಸೂಚನೆಯನ್ನು ಕೊಡುತ್ತದೆ. ಆದರೆ ವೈಯಕ್ತಿಕ ಮಟ್ಟದಲ್ಲಿ ಸಾಧ್ಯವಾಗುವಂತಹದು ಸಾಮೂಹಿಕ ಮಟ್ಟದಲ್ಲಿ ಸಾಧ್ಯವಾಗಬೇಕಾದರೆ ಸಮೂಹ ಸಂಸ್ಕೃತಿಯನ್ನು ಬಂಧಿಸಿರುವ ಸಂಪ್ರದಾಯ ಆಚರಣೆಗಳಿಂದ ಬಿಡುಗಡೆ ಹೊಂದುವುದರ ಮೂಲಕ ಎಂದು ಕಾದಂಬರಿ ತೋರಿಸುತ್ತದೆ''.[೬೪]

ಅನೈತಿಕ ಲೈಂಗಿಕ ಸಂಪರ್ಕ ಹೊಂದುವುದರಿಂದ ಮೇಲುವರ್ಗದ ಶೋಷಕನಿಗೆ ಮತ್ತೊಂದು ಬಗೆಯಾಗಿ ಪ್ರತಿಭಟನೆ ವ್ಯಕ್ತಪಡಿಸುವುದನ್ನು ಗುರ್ತಿಸಬಹುದು. ಮೇಲು ವರ್ಗದ ಸ್ತ್ರೀಯೊಂದಿಗೆ ಕೆಳವರ್ಗದ ಗಂಡೊಂದು ಲೈಂಗಿಕ ಸಂಪರ್ಕ ಹೊಂದಿ, ಸಂಪರ್ಕ ಹೊಂದಿದ ಸ್ತ್ರೀಯ ಗಂಡನ ಮೇಲಿನ ಸಿಟ್ಟನ್ನು ತಾನು ಸಂಪರ್ಕ ಹೊಂದಿದ ಸ್ತ್ರೀಯ ಮೇಲೆ ತೀರಿಸಿಕೊಳ್ಳುವುದು.ನಮ್ಮಿಬ್ಬರ ನಡುವಿನ ಅನೈತಿಕ ಸಂಬಂಧವನ್ನು ಬಹಿರಂಗ ಮಾಡುತ್ತೇನೆಂದು ದಲಿತ ಗಂಡು ಧಮಕಿ ಹಾಕುವುದು. ಇದು ಒಂದು ವ್ಯವಸ್ಥೆಯನ್ನು ಪ್ರತಿಭಟಿಸುವ ರೀತಿ. ಈ ರೀತಿಯನ್ನು ಮಜರವರು 'ಮಾಗಿ' ಕಾದಂಬರಿಯಲ್ಲಿ ಗಡಿಪಾಪನ ಪಾತ್ರ ಸೃಷ್ಟಿಯ ಮೂಲಕ ಸಾಧ್ಯಗೊಳಿಸಿದ್ದಾರೆ. ನಿದರ್ಶನವಾಗಿ

"ದಾನಿ, ನಿನ್ನ ಗಂಡಾ ಊರಲ್ಲಿ ನಾಕೈದ್ ಪ್ರಾಯದ ಯಣ್ಣೈಗಳ ಕೆಡಿಸಿರಾದು ನಿಂಗೇ ಗೊತ್ತು. ಈಗ ನನ್ನ ಬಾಳ್ಗೇ ಮುಳ್ಳೆಳೆದವ್ನೆ. ಈಗ ಉಳಿದಿರಾದೊಂದೇ ಹಾದಿ ನನಗೆ.ನನ್ನ ನಿನ್ನ ಸಂಬಂದ್ಕಾ ಊರ್‌ಸುತ್ತಾ ತಮಟೇ ಬಾರಿಸ್ಕಂಬತ್ತೀನಿ."[೬೫]

ಈ ರೀತಿಯ ಪ್ರತಿಭಟನೆ ತಾನು ಗೌಡನ ದೌರ್ಜನ್ಯದಿಂದ ಬಚಾವಾಗಲು ಅನಿವಾರ್ಯವೆನಿಸುತ್ತದೆ. ಏಕೆಂದರೆ ಆರ್ಥಿಕವಾಗಿ ಪ್ರಬಲವಾದ ವರ್ಗ ತಾನು ಮಾಡಿದ ತಪ್ಪು ಕಾರ್ಯದಲ್ಲಿ ಅಪರಾಧವಿದ್ದರೂ ಆರ್ಥಿಕವಾಗಿ ಹಾಗೂ ರಾಜಕೀಯ ವರ್ಚಿಸ್ಸಿನಿಂದ ದುರ್ಬಲ ವರ್ಗಗಳ ಮೇಲೆ ಆರೋಪ ಹೊರಿಸಿಬಿಡುತ್ತದೆ. ಗಾಡಿಪಾಪನಿಗೆ ಅಂಥ ಆರ್ಥಿಕ ಸ್ಥಿತಿ ಇಲ್ಲವಾದ್ದರಿಂದ ತಾನು ಮದುವೆಯಾಗಲಿದ್ದ ಪುಟ್ಟಸುಂದ್ರಿಯ ಸಾವಿಗೆ ಸ್ವಾಮೇಗೌಡ ಕಾರಣ ಎಂಬ ವಿಷಯ ತಿಳಿದಿದ್ದರೂ, ಕೋರ್ಟಿಗೆ ಹೋಗದೇ ಅಸಹಾಯಕ ಸ್ಥತಿಯಲ್ಲಿ ಬಳಲುತ್ತಿರುವಾಗ ತಟ್ಟನೆ ಹೊಳೆದಿದ್ದು ತನ್ನ ಹಾಗೂ ಧಾನವ್ವನ ಅನೈತಿಕ ಸಂಬಂಧ ಹೊಂದಿರುವುದನ್ನು ಬಹಿರಂಗಗೊಳಿಸುವುದು, ಇದೂ ವಾಸ್ತವ ಸ್ಥಿತಿಯಂತೆ ಕಾದಂಬರಿಕಾರ ಗಾಡಿಪಾಪನ ಪಾತ್ರ ಸೃಷ್ಟಿಸಿದ್ದಾರೆ.

ಈ ತರಹದ ಪ್ರತಿಭಟನೆ ಯಾವ ಆರ್ಥಿಕತೆಯನ್ನು ಬಯಸುವುದಿಲ್ಲ. ಅಲ್ಲದೇ ಸುಲಭ ಮಾರ್ಗವೂ ಕೂಡ. ಇಂಥ ಸಂದರ್ಭದಲ್ಲಿ ಮೇಲುವರ್ಗದ ಪುರುಷರಿಗೆ ಹಣಕ್ಕಿಂತ ಮರ್ಯಾದೆ ಮುಖ್ಯವಾಗುತ್ತದೆ. ಪ್ರತಿಷ್ಠೆಯ ವಿಷಯವಾಗಿ ಕಾಡುತ್ತದೆ. ತನ್ನ ಹೆಂಡತಿ ಕೆಳವರ್ಗದವನೊಂದಿಗೆ ಸಂಬಂಧ ಹೊಂದಿದ್ದಾಳೆಂದರೆ, ಸಮಾಜದ ದೃಷ್ಟಯಲ್ಲಿ ಗಂಡನಾದವನು ನಿರ್ವೀರ್ಯನಾಗಿರುತ್ತಾನೆಂದೇ ಭಾವಿಸುತ್ತದೆ ಅಧಿಕಾರ ಅ ಭದ್ರವಾಗಿರುತ್ತದೆ. ಬರಗೂರರ ಸೂರ್ಯದಲ್ಲಿ ಜಮಿನ್ದಾರನ ಇಂಥ ಮಾನಸಿಕ ತೊಳಲಾಟದ ಚಿತ್ರಣವನ್ನು ಮಾರ್ಮಿಕವಾಗಿ ಕಟ್ಟಿಕೊಟ್ಟಿರುವುದನ್ನು ಮತ್ತು ಅವನ ಗಮನಿಸಬಹುದು.

"ಈ ಕಳ್ಳ ಬಡ್ಡಿ ಮಗನೇ ಇದಕ್ಕೆಲ್ಲ ಮೂಲ. ಈ ಊರಿನ ಇತಿಹಾಸದಲ್ಲಿ ನನ್ನ ಮನೆ,ಮನ್ತನ ಅಂದ್ರೆ ಎಂಥಾ ಸ್ಥಾನ ಎನ್ಕತೆ ? ಒಬ್ಬ ಯಕಶ್ಚಿತ್ ಮಾದಿಗನ ಪರವಾಗಿ ನನ್ನ ಹೆಂಡ್ತಿ ವಾದ ಮಾಡೋದೆ? ಮಾತೇ ಹೊರಡದವನಿಗೆ ಮಾತಾಗಿ ನಿಂತು, ನನ್ನ ಮನಸ್ಸನ್ನೆಲ್ಲ ಬಗೆದು ಬೀದಿಗೆಸೆಯೋದೆ? ಹೊಟ್ಟೆಗಿಲ್ದೆ ಹಟ್ಟೀಲ್ ಬಿದ್ದಿದ್ದ ಈ ಬಡ್ಡಿ ಮಗನ್ನ ಜೀತಕ್ಕಿಟ್ಕೊಂಡ್ರೆ ಅವನ ಮನೆ ವಿಷ್ಯ ನನ್ನ ಮನೆ ವಿಷ್ಯವಾಯ್ತಲ್ಲ !ಅವನ ಹಟ್ಟಿಬದ್ಲು ನನ್ನ ಹಜಾರ ಹರಾಜಾತಲ್ಲ! ಜೀವ ಕೊರೆಯೋಕೆ ಜೀತದ ಕರಿಯ ಕಾರಣ ಆದನಲ್ಲ"[೬೬]

ಜಮೀನ್ದಾರನ ಈ ತರಹದ ಮಾನಸಿಕ ತಾಕಲಾಟವನ್ನು ಗಮನಿಸಿದರೆ,'ಅನೈತಿಕ ಸಂಬಂಧ' ದಂತಹ ಪ್ರತಿಭಟನೆಯಲ್ಲಿ ಎಂಥ ಶಕ್ತಿಅಡಗಿದೆ ಎಂಬುದು ಅರ್ಥವಾಗುತ್ತದೆ.ಇಂತಹ ಸ್ವರೂಪದಿಂದ ಇಡೀ

ಸಾಮಾಜವನ್ನು ಬದಲಿಸಲು ಅಸಾಧ್ಯವಾದಾರೂ ಆ ಮೂಲಕ ಲೈಂಗಿಕ ಅಸಮಾನತೆಯನ್ನಾದರೂ ಮುರಿಯಬಹುದು.ಶ್ರಮಬದುಕಿನ ಸೃಷ್ಟಿಶಕ್ತಿಯನ್ನು ಮನಗಾಣಬಹುದು ಆದರೆ ಈ ಕಾದಂಬರಿಗಳು ರಚನೆಗೊಂಡ ಸಂದರ್ಭದಲ್ಲಿ ಲೇಖಕನಿಗೆ ಇಂಥ ಸಂದರ್ಭಗಳನ್ನು ಚಿತ್ರಿಸುವುದು ಅನಿವಾರ್ಯ ಹಾಗೂ ಅಗತ್ಯವಾಗಿ ಕಂಡಿರಬೇಕು.ಏಕೆಂದರೆ ಕೆಳವರ್ಗದವರಲ್ಲಿ ಎಚ್ಚರ ಮೂಡಿಸುವಲ್ಲಿ ಅನೈತಿಕ ಸಂಬಂಧ ಪ್ರಾಥಮಿಕ ಅಂಶ ಹಾಗೂ ಪ್ರತಿಭಟನೆಯಾಗಿದೆ.

ಅನೈತಿಕ ಸಂಬಂಧ ಕೆಳವರ್ಗದ ಸಮುದಾಯಗಳ ನಡುವೆ ಬೇರೆ ಅರ್ಥಪಡೆಯುತ್ತದೆ. ಒಂದೇ ಸಮುದಾಯಗಳ ಅನೈತಿಕ ಸಂಬಂಧ ಹೊಂದಿದ ಹೆಣ್ಣು-ಗಂಡುಗಳಿಗೆ ಇತರರು ತೀವ್ರವಾದ ವಿರೋಧ ವ್ಯಕ್ತಪಡಿಸಲಾರರು.ಬದಲಾಗಿ ಆ ಸಂಬಂಧಗಳಿಗೆ ರಾಜಕೀಯ ಮೂಲಕ, ಇಲ್ಲವೆ ಸಂಪ್ರದಾಯದ ನೀತಿಗಳಅನುಸಾರ ಸ್ತ್ರೀಗೆ ಸ್ವತಂತ್ರ ಕೊಡುವುದು. ಮನಜರ ಮಾಗಿಯಲ್ಲಿ ಕರಿಯ ಹಾಗೂ ಕಮಲಿ ಗಂಡ ಹೆಂಡತಿಯಾಗಿದ್ದರೂ "ಕಮಲಿ ಕರಿಯನನ್ನು ಬಿಟ್ಟು, ರಾಜಪ್ಪನೊಂದಿಗೆ ಬಾಳ್ವೆ ನಡೆಸಲು ಅವಕಾಶವನ್ನೀಯುವ ದಲಿತರ ನ್ಯಾಯ ಪಂಚಾಯತಿಯ ನಡುವಳಿಕೆಗಳು, ವೈದಿಕ ಸಂಸ್ಕೃತಿಗೆ ಅಂದರೆ ಹಿಂದೂ ಸಂಸ್ಕೃತಿಗೆ ತುಂಬಾ ವಿರುದ್ಧವಾದವುಗಳು . ಆದರೆ ದಲಿತ ಸಂಸ್ಕೃತಿಯಲ್ಲಿ ಈ ರೀತಿಯ ಸ್ವಾತಂತ್ರ್ಯ ಹೆಣ್ಣಿಗೆ ಇರುವುದು ದಲಿತ ಪ್ರಜಾಸತ್ತಾತ್ಮಕ ಗುಣಕ್ಕೆ ಸಾಕ್ಷಿಯಾಗಿ ನಿಂತಿದೆ.ಇಂತಹ ಅನೇಕ ಪ್ರಸಂಗಗಳಿಂದ ದಲಿತ ಸಂಸ್ಕೃತಿ,ವೈದಿಕ ಸಂಸ್ಕೃತಿಗಿಂತ ತುಂಬಾ ಭಿನ್ನವಾಗಿ ಮತ್ತು ವಿಶಿಷ್ಟವಾಗಿ ಕಾಣುತ್ತದೆ." ಆದರೆ ದಲಿತ ಸಂಸ್ಕೃತಿಯ ಸೋದರ ಸಂಸ್ಕೃತಿಗಳಂತಿರುವ ಇತರ ಕೆಳ ಸಮುದಾಯಗಳಲ್ಲೂ ಇಂಥ ವಿಶಿಷ್ಟ ಸಂಪ್ರದಾಯವಿದ್ದರೂ, ಬಡತನದಿಂದ ಬಳಲಿ ಆರ್ಥಿಕ ದುಃಸ್ಥಿತಿಯಲ್ಲಿ ನರಳುತ್ತಿರುವವರು,ಅತೃಪ್ತಿ ಲೈಂಗಿಕತೆಯಿಂದ ನರಳುವ ಹೆಣ್ಣಿಗೆ ಸ್ವಾತಂತ್ರ್ಯವಿದ್ದರೂ, ಆ ಸಮುದಾಯದಿಂದಲೇ ತೀವ್ರ ಪ್ರತಿಭಟನೆ ವ್ಯಕ್ತವಾಗುತ್ತದೆ. ಆದರೂ ಸಂಪ್ರದಾಯದಂತೆ ಸ್ತ್ರೀಗೆ 'ಲಾಗೋಡ್' ವಿಧಿಸುತ್ತಾರೆ. ಇದು ಒಂದು ತರಹ ವಿವಾಹ ವಿಚ್ಛೇದನೆ ರೀತಿಯದು. ಇಂಥ ಸಂಪ್ರದಾಯ ವನ್ನು ಕೆಳವರ್ಗದ ಒಂದು ಭಾಗವಾಗಿ ಕೊರವರ ಸಂಸ್ಕೃತಿಯಲ್ಲಿ ಕಾಣಬಹುದು. ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ'ಯಲ್ಲಿ ಕೊರವರ ಬುಡ್ಡಮ್ಮನ ಪಾತ್ರದ ಮೂಲಕ ಚಿತ್ರಿತಗೊಂಡಿದೆ. ಬುಡ್ಡಮ್ಮ ಮಾರೆಪ್ಪನ ಹೆಂಡತಿಯಾಗಿದ್ದರೂ ಆತನ ಲೈಂಗಿಕ ನಿರಾಸಕ್ತಿಯಿಂದ ಬಳಲಿ ಅದೇ ಸಮುದಾಯದ ಜಂಬಯ್ಯನೊಂದಿಗೆ ಅನೈತಿಕ ಸಂಬಂಧ ಹೊಂದುತ್ತಾಳೆ. ಇದಕ್ಕೆ ಮಾರೆಪ್ಪ ಹಾಗೂ ಮಾರೆಪ್ಪನ ಸಂಬಂಧಿಕರು ತೀವ್ರ ವಿರೋಧ ವ್ಯಕ್ತ ಪಡಿಸಿ ಪಂಚಾಯ್ತಿಯಲ್ಲಿ ಜಂಬಯ್ಯನಿಗೆ ಬಡ್ಡಮ್ಮಾಳನ್ನು ಒಪ್ಪಿಸುವುದು ವಿಶಿಷ್ಟವಾಗಿದೆ. ನಿರ್ದಶನಕ್ಕಾಗಿ

"ಯಾರೇನ್ಹೇಳ್ಲಿ....ನಾಯಿ ಮುಟ್ಟಿದ ಗಡಗಿನ ನಾ ಮುಟ್ಟೋದಿಲ್ಲ. ಮನ್ನಗತಗೋದಿಲ್ಲ.... ನನಗಾದ ಮದ್ವಿ ಕರ್ಚು ಇನ್ನೂರು ರೂಪಾಯಿ ಕೊಟ್ಕೇಸಿ ಯಾರನ್ನ ತಗಬೌದು ಇವಳ ....ಇನ್ನ ಕೂಸು ನನಗ್ಹುಟ್ಯಾದ.... ನನತಾಕ ಇರಾದ"

ಎಂದು ಮಾರೆಪ್ಪ ಪಂಚಾಯ್ತಿಯಲ್ಲಿ ಹೇಳುವುದು ತನ್ನ ಲೈಂಗಿಕ ಅಸಹಾಯಕತೆಯ ಪ್ರಜ್ಞೆ ಇದ್ದರೂ ತನ್ನ ಹೆಂಡತಿ ಬೇರೊಬ್ಬನೊಂದಿಗೆ ಸಂಬಂಧವಿಟ್ಟುಕೊಳ್ಳುವುದು ಪುರುಷತ್ವದ ಮರ್ಯಾದೆ ಪ್ರಶ್ನೆಯಾಗಿ ಕಾಡಿದೆ. ತನ್ನ ಮರ್ಯಾದೆ ಉಳಿಸಿಕೊಳ್ಳಲು ಹೆಂಡತಿಗೆ 'ನಾಯಿ ಮುಟ್ಟಿದ ಗಡಿ'ಗೆ ಎಂದು ಬಿಟ್ಟು ಕೊಡುತ್ತಾನೆ. ಆದರೆ ಇಂಥ ಸಂಬಂಧ ಹೊಂದಿದ ಮೇಲು ವರ್ಗದ ಸ್ತ್ರೀಯರಿಗೆ ಆ ವರ್ಗದ ಗಂಡಸಿಗೆ ಹೆಂಡತಿಯನ್ನು ಬಿಟ್ಟು ಕೊಡುವುದು ಅವಮಾನ ವಾಗುತ್ತದೆ. ಹೆಂಡತಿಗೆ ಶೋಷಣೆ ಮಾಡುವ ಬದಲು ತನ್ನ ಹೆಂಡತಿಯೊಂದಿಗೆ ಸಂಬಂಧ ಹೊಂದಿದ ವ್ಯಕ್ತಿಯ ಮೇಲೆ ತ್ರೀವ್ರ ಪ್ರತಿಭಟನೆ ವ್ಯಕ್ತವಾಗುವುದನ್ನು ಹಿಂದಿನ ಪುಟಗಳಿಂದ ಗ್ರಹಿಸಬಹುದು . ಇಂಥ ಸಂಬಂಧಗಳಿಗೆ ಮೇಲು ವರ್ಗ ಹಾಗೂ ಕೆಳವರ್ಗಗಳಲ್ಲಿ ತದ್ವಿರುದ್ಧ ಪ್ರತಿಭಟನೆ ವ್ಯಕ್ತವಾಗುವುದನ್ನು ಮೇಲಿನ ಅಂಶಗಳಲ್ಲಿ ಗ್ರಹಿಸಬಹುದು. ಹೆಂಡತಿಯನ್ನು ಬೇರೆಯವರಿಗೆ ಮಾರುವ ಕೊರವರ ಇಂಥ ಸಂಸ್ಕೃತಿ ವಾಸ್ತವದಲ್ಲಿ ಚಾಲ್ತಿಯಲ್ಲಿದೆ.ಕೊರವ ಹೆಣ್ಣು ಅನೈತಿಕ ಸಂಬಂಧ ಹೊಂದುವಾಗಲೂ ಹಾಗೂ ಆ ವರ್ಗದ ಕುಟುಂಬದ ಆರ್ಥಿಕ ಸಮಸ್ಯೆ ಉಂಟಾದಾಗಲೂ ಹೆಣ್ಣನ್ನು ಮರಾಟ ಮಾಡುವ ಪದ್ಧತಿ ರೂಢಿಯಲ್ಲಿದೆ.[೬೮] ಕಾದಂಬರಿಕಾರು ಈ ಅಂಶವನ್ನು ಕಲ್ಪನೆಯಿಂದ ರಚಿಸಿಲ್ಲವೆಂಬುದು ಗಮನಾರ್ಹ.ಕೆಳವರ್ಗದ ಸಂಸ್ಕೃತಿಯನ್ನು ಜೀವಂತವಾಗಿ ಸಾಹಿತ್ಯಕವಾಗಿ ಕಾದಂಬರಿಯಲ್ಲಿ ಹಿಡಿದಿಟ್ಟಿದ್ದಾರೆ.

### ಬಂಡಾಯ ಕಾದಂಬರಿಗಳಲ್ಲಿ ಪ್ರತಿಭಟನೆ ಸ್ವರೂಪ

ಪ್ರತಿಷ್ಠಿತ ಸಮಾಜದ ಯಜಮಾನ ಸಂಸ್ಕೃತಿಯು ಎಸಗುವ ದೌರ್ಜನ್ಯವನ್ನು ತಾಳಲಾರದೇ ಹಾಗೆ ವಿರೋಧಿಸಲಾಗದೇ ಅಸಹಾಯಕ ಕೆಳವರ್ಗ ಯಾವ ರೀತಿಯ ಬಲಸಿಗದೇ ಮೂಕರಾಗಿ ಊರುಬಿಟ್ಟು ಬೇರೆ ಊರಿಗೆ ಹೋಗಿ ನೆಲೆಸುವುದು (ಜಮೀನ್ದಾರಿ) ಮೇಲ್ವರ್ಗಕ್ಕೆ ಒಡ್ಡಿದ ಪ್ರತಿಭಟನೆಯಾಗುತ್ತದೆ.

ಈ ರೀತಿಯ ಸ್ಥಿತ್ಯಂತರ ಮೂಲಕವೇ ಮೇಲುವರ್ಗದ ಹಿತಾಸಕ್ತಿಯನ್ನು ನಿರ್ವೀರ್ಯಗೊಳಿಸುತ್ತದೆ. ಈ ತರಹದ ಸ್ಥಿತ್ಯಂತರ ಶೀತಲ ಪ್ರತಿಭಟನೆಯಂತದ್ದು, ಶಕ್ತಿಯಾದದ್ದು , ಅಲ್ಲದೆ ಸಾಮಾಜಿಕ ಪರಿವರ್ತನೆಯಲ್ಲಿ ಪ್ರಮುಖ ಅಸ್ತ್ರವೂ ಹೌದು. ಆದರೆ ಸ್ಥಿತ್ಯಂತರಗೊಂಡ ಶೋಷಿತ ತಾನು ಹುಟ್ಟಿ ಬೆಳೆದು ತನ್ನ ಸಮಾಜದೊಂದಿಗೆ ಬೇರುಗಳನ್ನು ಕತ್ತರಿಸಿಕೊಂಡು ಬೇರೆ ಕಡೆ ನೆಲೆಸುವಾಗ ಆತನಿಗೆ ಸಹಜವಾಗೇ ಅಂತರ್ಗತವಾಗಿ ನೋವುಂಟಾಗುತ್ತದೆ. ಈ ತಾತ್ಕಾಲಿಕ ನೋವಿನ ನಡುವೆ ಬದುಕನ್ನು ಹಸನಗೊಳಿಸಲು ಪ್ರಯತ್ನಿಸುತ್ತಾನೆ.

ಈ ನಿಟ್ಟಿನಲ್ಲಿ ಬಂಡಾಯ ಕಾದಂಬರಿಕಾರ ಕುಂ.ವೀ. ಯವರು ತಮ್ಮ ಕಪ್ಪು ಕಾದಂಬರಿಯಲ್ಲಿ ಇಂಥ ವಸ್ತುವನ್ನು ಆಯ್ದುಕೊಂಡು ಫ್ಯೂಡಲ್ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಮಾಡುತ್ತಾರೆ. ಪಾರಂಪರಗತವಾಗಿ ನೆಲೆಗೊಂಡ ಫ್ಯೂಡಲಿಸಂಗೆ ಪ್ರತಿಭಟನೆ ಅಥವಾ ವಿರೋಧ ವ್ಯಕ್ತಪಡಿಸಲು ಶೋಷಿತರ ಸಂಘಟನೆಯ ಅಗತ್ಯತೆಯನ್ನು ಅವರ ಬರಹಗಳಲ್ಲಿ ಗುರ್ತಿಸಬಹುದು.ಇದನ್ನೇ ಆರ್.ವಿ.ಭಂಡಾಯರವರ ಮಾತಿನಲ್ಲಿ ಹೇಳುವುದಾದರೆ, "ಊಳಿಗಮಾನ್ಯ ವ್ಯವಸ್ಥೆಯ ರೋಗಗ್ರಸ್ತ ಅಧಿಕಾರ ಅಲ್ಲಿ ಜನ ಸಂಘಟಿತವಾಗದ ವರ್ಗಪ್ರಜ್ಞೆ ಕೆಲಸ ಮಾಡದ ಪ್ರಾದೇಶಿಕತೆಯ ಸಂದರ್ಭವನ್ನು ಕುಂ.ವೀ.ಚಿತ್ರಿಸುತ್ತಾರೆ.ಆದರೂ ಅಲ್ಲಿಯ ಶೋಷಣೆಯ ಒಡಲಲ್ಲೇ ವೈಯಕ್ತಿಕ ಮಟ್ಟದ ಪ್ರತಿಭಟನೆ ಅನಿವಾರ್ಯವಾಗೇ ಸಕಾರಣವಾಗೇ ಸ್ಫೋಟಿಸುವುದನ್ನು ಅವರು ಕಾಣುತ್ತಾರೆ. ಹೀಗಾಗುವುದರಿಂದಲೋ ಏನೋ ಕುಂ.ವೀ.ನಕ್ಸಲೈಟ್‌ಥರದ ಪ್ರತಿಭಟನೆಯ ಮುಖಾಂತರ ಪ್ರಭುತ್ವವನ್ನು ಎದುರಿಸುವ ಸಾಧ್ಯತೆಯನ್ನು ತೋರುತ್ತದೆಯೋ ಎಂದೆನಿಸುತ್ತದೆ.ಅದು ಕಲಾ ರೂಪದಲ್ಲಿ ಸಂಭವಿಸುವುದರಿಂದ ಅದಕ್ಕೊಂದು ಹೆಚ್ಚಿನ ಮಹತ್ವವಿದೆ"[೨೦] ಎನ್ನುವಲ್ಲಿ 'ಕಪ್ಪು' ಕಾದಂಬರಿ ಗಮನಾರ್ಹ.

ಈ ಕಾದಂಬರಿಯ ಮುಖ್ಯಪಾತ್ರ ಗೌರಿ. ಸಂಪ್ರದಾಯದ ಹೆಸರಿನಲ್ಲಿ ಗೌರಿಯನ್ನು ಬಸವಿ ಮಾಡುವ ಇರಾದೆಯಿಂದ ಮಾಸೂರು ಹಾಗೂ ಬಾಸೂರಿನ ಫ್ಯೂಡಲಿಸ್ಟ್‌ಗಳಾದ ಕರೀಗೌಡ, ಸಣ್ಣುದ್ರ ಇವರ ಕ್ರೌರ್ಯಕ್ಕೆ ಒಳಗಾದ ಕೆಳವರ್ಗದ ಭರಮಜ್ಜನ ಬಡಕುಟುಂಬ ನಾಶವಾಗುವ ದಾರುಣ ಚಿತ್ರವಿದೆ.

ಯಾವುದೇ ಬಗೆಯ ತುಳಿತಕ್ಕೊಳಗಾದ ನೋವು, ಅದರ ಬಗೆಗಿನ ಪ್ರತಿಭಟನೆ ಕಾವ್ಯಕ್ಕೆ ಖಂಡಿತಾ ವಸ್ತುವಾಗುತ್ತದೆ.ಕರ್ಮದ ನಿಯಮಗಳಿಂದ ಬಂಧಿತರಾಗಿರುವ ಶಯನೇಷು ರಂಭಾ ಕರುಣೇಷು ದಾಸಿ' ಗಳಾಗಿರುವ, ಸೂರ್ಯನ ಬೆಳಕು ಕಾಣದ ತೆರೆಯ ಹಿಂದಿನ ಎಲ್ಲಾ ಹೆಣ್ಣುಗಳು ಈ ದೇಶದಲ್ಲಿ ಶೋಷಿತರು. ದೇಶಭಕ್ತಿಯ ವಿಚಾರದಲ್ಲಿ ಸಂಶಯಗಣ್ಣುಗಳಿಂದ ಕಾಣಲ್ಪಡುವ ನಿರ್ದಿಷ್ಟ ಜನಾಂಗದಲ್ಲಿ ಹುಟ್ಟಿದ್ದಕ್ಕೆ ಆಮದಾದ ಜನರಂತೆ ಎರಡನೇ ದರ್ಜೆ ಉಪಚಾರ ಪಡೆವ ಬಬ್ಬ ಅಲ್ಪಸಂಖ್ಯಾತನು ಈ ದೇಶದಲ್ಲಿ ಸಾಂಸ್ಕೃತಿಕವಾಗಿ ಶೋಷಿತ. ಹಣವೇ ಗಂಡು ಹೆಣ್ಣುಗಳ ಸಂಬಂಧದ ತೀರ್ಪುಗಾರನಾದ ಸಂದಂರ್ಭದಲ್ಲಿ, ಬಡಹೆಣ್ಣು ಅವಳ ದುರ್ಬಲ ತಂದೆ ಇವರ ನೋವು ಜಾತಿ ವರ್ಗಗಳನ್ನು ಮೀರಿನಿಂತುದು ಇಂಥವರ ನ್ಯಾಯ ಪಡೆಯುವ ಉದ್ದೇಶಿತ ಪ್ರತಿಭಟನೆ ಬಂಡಾಯವಾಗುತ್ತದೆ.

ಜಮೀನ್ದಾರ ಕರೀಗೌಡ ಭರಮಜ್ಜನ ಮಗಳಾದ ಗೌರಿಯನ್ನು ಭೋಗಿಸುವ ಸಲುವಾಗಿ ಸಂಪ್ರದಾಯದ ನೆಪದೊಳಗೆ "ಈವೊತ್ತು ಎಲ್ಲಪ್ಪನ ಕನಸಿನ್ಯಾಗ ಅಮ್ಮ ಕಾಣಿಸಿಕೊಂಡು ನಿನ್ ಮಗ್ಳು ಗೌರಿನ ಬಿಡ್ರಿ

ಅಂತ ಕೇಳ್ಯಾಳಂತೆ ಭರಮಜ್ಜ"[೭೧] ಎಂದು ಹೇಳುತ್ತಾನೆ. ಕಾದಂಬರಿಕಾರ ತನ್ನ ನಿರೂಪಣೆಯ ಮೂಲಕವೇ ಮೊದಲ ಪ್ರತಿಭಟನೆಕಾರರಾಗುತ್ತಾರೆ.

"ಗೌಡನ ಮನಿಗೆ ಬರುವ ಮೊದಲು ಪೂಜಾರಿ ಎಲ್ಲಪ್ಪ ದೇವಿ ನಿನಮ್ಯಾಲ ದಯೆ ತೋರ್‍ಯಾಳ ಅಂತ ಹೇಳಿದ್ದು ಈಗ ಅರ್ಥವಾಯಿತು. ಮೈಯಲ್ಲಿ ಇದ್ದ ಅಲುಪ ಸಲುಪ ರಕ್ತಕಾದು ಕಣ್ಣಿಗೆ ನುಗ್ಗಿ ಬಂತು. ಶಿಥಲ ಬದುಕಿನ ಎಲ್ಲ ಮಗ್ಗಲನ್ನೂ ನಿರ್ವೀರ್ಯಗೊಳಿಸಿರುವ ಅಸಹಾಯಕತೆ ದೀನವಾಗಿ ಕಣ್ಣಿನಲ್ಲಿ ನೀರು ತುಂಬಿಕೊಂಡು ಬೆಂಕಿಯಂತಿದ್ದ ಗೌಡನ ಮುಖವನ್ನು ನೋಡಿದ ಭರಮಜ್ಜ".[೭೨]

ಭರಮಜ್ಜ ನೇರವಾಗಿ ಮಾತಿಗಿಳಿಯುವ ಸಾಹಸ ಮಾಡದೆ ಅಸಹಾಯಕನಾಗಿ ಶೀತಲ ಪ್ರತಿಭಟಣೆಯನ್ನು ವ್ಯಕ್ತ ಮಾಡುತ್ತಾನೆ. ಯಾಕೆಂದರೆ, ಆರ್ಥಿಕವಾಗಿ ದುರ್ಬಲವಾದ ವರ್ಗ ಜಮೀನ್ದಾರನಂಥ ಮೇಲುವರ್ಗದವರ ಕ್ರೌರ್ಯಕ್ಕೆ ಬೇರೆ ತೋಚದೇ ಹಾಕುವ ಸವಾಲದು. "ನನ್ನ ಮಗ್ಳೆಲ್ಲ ದಣಿ ನಿಮ್ಮಗಳು"[೭೩] ಎನ್ನುವಲ್ಲಿಯೂ ಜಮೀನ್ದಾರನ ಪುರುಷತ್ವವನ್ನು ಅಪ್ರತ್ಯಕ್ಷವಾಗಿ ವ್ಯಂಗ್ಯ ಮಾಡುತ್ತಾನೆ. ಹಂಗಿಸುವಲ್ಲಿ ಈ ಧ್ವನಿ ಗ್ರಹಿಕೆಗೆ ಬರುತ್ತದೆ.

ಯಾವೊತ್ತು ಮೇಲ್ವರ್ಗ ತನ್ನ ಕಕ್ಷೆಯನ್ನು ಸುಗಮಗೊಳಿಸಿಕೊಳ್ಳುತ್ತ ಯಜಮಾನ ಸ್ಥಾನದಲ್ಲಿಯೇ ಸಾಕಾಗುತ್ತದೆ. ಆದರೆ ಕೆಳವರ್ಗ ಅದರ ಪ್ರಭಾವಕ್ಕೆ ಒಳಗಾಗಿಯೂ ಅದರ ಸೆರೆಯಿಂದ ತನ್ನನ್ನು ಬಿಡಿಸಿಕೊಳ್ಳುವ ಮತ್ತು ಉಳಿಸಿಕೊಳ್ಳುವ ಹವಣಿಕೆಯಲ್ಲಿರುತ್ತದೆ. ಮೇಲುವರ್ಗವನ್ನು ನೇರವಾಗಿ ವಿರೋಧಿಸಲಾಗದ ಅಸಹಾಯಕತೆಯಲ್ಲಿದ್ದರೂ ಅದರ ಬಗೆಗೆ ಸದಾ ಅಸಹನೆಯ ಧ್ವನಿಯನ್ನು ಹೊಂದಿರುತ್ತದೆ. ಅಂದರೆ ಅಪರೋಕ್ಷ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತದೆ.[೭೪]

ಈ ಅಸಹನೆ ಧ್ವನಿಯನ್ನು ಭರಮಜ್ಜ ಹಾಗೂ ಮಗ ಚಂಬಸ್ಸನ ಪಾತ್ರದಲ್ಲಿ ವ್ಯಕ್ತವಾಗುವುದನ್ನು ಹೀಗೆ ಗಮನಿಸಬಹುದು."ಏನ್ ಮಾಡಕಾಗ್ಯೆತೆ ಚಂಬಸ್ಸ... ಒಟ್ಯಾಗಿರೋ ಸಿಟ್ಟು ರೆಟ್ಯಾಗಿಲ್ಲ...ನಿನ್ ಆರೇವು ನಂಗೇನಾರ ಇತ್ತಂತೆಂದ್ರ ಗೌಡ್ನ ಕಡ್ದು ಬರ್‍ತಿದ್ದೆ"[೭೫] ಎಂದು ಹೇಳುವ ಭರಮಜ್ಜನ ಮಾತುಗಳು ಗೌಡನನ್ನು ನಾಶಗೊಳಿಸಲು ದೈಹಿಕ ಬಲವನ್ನು ಅಪೇಕ್ಷಿಸುತ್ತಾರೆ. ಲೇಖಕನ ಆಶಯವೂ ಕೂಡ ಇದೇ ಆಗಿದೆ. ಈ ನಿಟ್ಟಿನಲ್ಲಿ 'ಮರಣ ಮಂಡಲ ಮಧ್ಯದೊಳಗಿನ' ಬಸುರಾಜನ ಪಾತ್ರ ಗ್ರಹಿಕೆಗೆ ಬರುತ್ತದೆ.ಬಸುರಾಜು ಚಂಬಸ್ಸನ ಹಾಗೆ ದೈಹಿಕ ಬಲ ಹೊಂದಿದ್ದರು ತಮ್ಮ ಸಮುದಾಯಗಳ ಬೆಂಬಲ ಸಿಗದೆ ತಾನು ಅಸಮತಾ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಏಕಾಂಗಿಯಾಗಿ ಹೋರಾಡಿ ವಿಫಲನಾಗುತ್ತಾನೆ.ಚಂಬಸ್ಸನ ಹಾಗೆ ದೈಹಿಕ ಬಲಹೊಂದಿದ್ದರೂ ತಮ್ಮ ಸಮುದಾಯಗಳ ಬೆಂಬಲಸಿಗದೆ

ತಾನು ಅಸಮತಾ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಏಕಾಂಗಿಯಾಗಿ ಹೋರಾಡಿ ವಿಫಲನಾಗುತ್ತಾನೆ. ಚಂಬಸ್ಸ ಬಸುರಾಜನ ಹಾಗೆ ಮುಖ ಮುಖಿಯಾಗಿ ಹೋರಾಟ ಮಾಡುವುದಿಲ್ಲ. ಬದಲಾಗಿ ಗೌಡನ ಕ್ರೌರ್ಯದ ಒಂದು ಓಳೆಯನ್ನು ತೆರೆದು "ಗೌಡನ ಕಡಿಯೋದು ಅಷ್ಟು ಸುಲಭದ ಮಾತಲ್ಲ ಎಪ್ಪಾ; ಕಡೀತಿನಂಥ ಬಂದು ಆಲೂರು ಇರಿಯನ ಎಣ ಎಲ್ಲಿ ಬಿದ್ದಿತ್ತು ನೀನೇ ನೋಡಿದ್ಯಲಾ!"[೭೬] ಎಂದು ಅಸಾಯಕ ಧ್ವನಿಯಾಗುತ್ತಾರೆ.

ಒಬ್ಬೊಬ್ಬರ ಪಾತ್ರದಲ್ಲೂ ವೈರುದ್ಯ ಬರುತ್ತದೆ. ಬಸುಗಾಜು ಏಕಾಂಗಿಯಾಗಿ ಹೋರಾಡಿ ಅಸಹಾಯಕನಾಗಿ ಉಳಿದುಕೊಂಡರೆ ಚೆಂಬಸ್ಸ ಆ ಅಸಹಾಯಕತೆಯ ಮೂಲಕವೇ ಜಮೀನ್ದಾರನ ವ್ಯವಸ್ಥೆಗೆ ಒಡ್ಡಿದ್ದ ಸವಾಲು ಪ್ರಮುಖ ಅಂಶವಾಗಿ ಕಾಣುತ್ತದೆ. ಏಕೆಂದರೆ , ಚಂಬಸ್ಸ ಗೌಡನಿಗೆ ನೇರವಾಗಿ ಪ್ರತಿಭಟಿಸಲಾಗದೇ ತನ್ನ ತಂಗಿ ಗೌರಿಯನ್ನು ಬಸವಿ ಬಿಡಲು ತಯಾರಿಲ್ಲದೆ "ನಮ್ಮನ್ತನದಾಗ ಅಕ್ಕ ತಂಗೇರರ್ನ ಇನ್ನೊಬ್ರೀಗೆ ಅಡ್ಡಾಕಿರೋದು ನೆಪ್ಪೆತಾ ಎಪ್ಪಾ? ಎಂಬ ಎಚ್ಚರದೊಂದಿಗೆ "ಓತ್ತು ಉಟ್ಯೋ ಮೊದ್ಲು ಈ ಊರಿಂದ ನಾವು ದೂರ ಒಯೋಗಬೇಕು"[೭೭] ಎಂದು ಪರಿವಾರ ಸಮೇತ ಮಾಸೂರು ಬಿಟ್ಟು ಬಾಸೂರಿಗೆ ಸ್ಥಿತ್ಯಾಂರವಾಗುವುದು ವಿಭಿನ್ನ ಆಲೋಚನೆಗೆ ದಾರಿ ಮಾಡಿಕೊಡುತ್ತದೆ.

ಗೌರಿಯ ಪಾತ್ರದಲ್ಲಿ ಪ್ರತಿಭಟನೆಯ ಧೋರಣೆಗಳು ವೈಚಾರಿಕವಾದದ್ದು. ಏಂಕೆದರೆ , ಆಕೆಯನ್ನು ಮಾರೆಮ್ಮನ ಹೆಸರಿನಲ್ಲಿ ಜಮೀನ್ದಾರ ತನ್ನ ಕಾಮ ದಾಹ ತೀರಿಸಿಕೊಳ್ಳುವ ಸಲುವಾಗಿ 'ಬಸವಿ'ಯನ್ನಾಗಿ ಮಾಡಲು ಪ್ರಯತ್ನಸಿದ್ದು . 'ಗೌರಿ'ಯ ಹಾಗೆ ಎಷ್ಟೋ ದುರ್ಬಲ ಸ್ತ್ರೀಯರು ಗೌಡನ ಕೆಂಗಣ್ಣಿಗೆ ಬಿದ್ದು ಹತಾಶಾಗಿದ್ದ ವಿಷಯ ಗೌರಿಗೆ ಗೊತ್ತಿರುತ್ತದೆ. ಹಾಗಾಗಿ ಗೌರಿಗೆ ತಾನು ಭವಿಷ್ಯತ್ತಿನಲ್ಲಿ ಪಡುವ ಅನಾಥ ಪ್ರಜ್ಞೆ, ದೈಹಿಕ ಹಿಂಸೆಯ ಪಾಪ ಪ್ರಜ್ಞೆ ಕಾಡುತ್ತದೆ. ನಿರೂಪಕರ ನಿರೂಪಣೆಯಲ್ಲಿ "ತಾನು ಬಸವಿಯಾದರೆ ಎಷ್ಟು ಜನ ಗಂಡಸರು ಮಗ್ಗುಲು ಮಲಗಿ ಎಲುಬು ಲಟ ಲಟ ಅನ್ನಿಸಬೇಕಾಗಿ ಬರುತ್ತದೊ ಎಂದು ಹೆದರಿದಳು. ಈ ಮನೆಯಲ್ಲಿ ಒಂದು ಗಂಡು ನಾಯಿಯೂ ಬಿಡದಂತೆ ತನ್ನನ್ನು ಬಿಡಲಿಕ್ಕಿಲ್ಲವೆನಿಸಿತು. ತಲೆ ಜಜ್ಜಿಕೊಂಡು ಸಾಯಬಹುದು. ಆದರೆ ಜಜ್ಜಿಕೊಳ್ಳುವುದು ಅಷ್ಟು ಸುಲಭದ ಕೆಲಸವಲ್ಲ. ಅಳು ಬಂತು, ಒಬ್ಬಳೇ ಅಳತೊಡಗಿದಳು."[೭೮]

ಈ ಕಣ್ಣೀರು ಹಾಕುವಂತಹ ಅಂತರ್ಗತ ಪ್ರತಿಭಟನೆಯ ಮೂಲಕವೇ ಜಮೀನ್ದಾರನಿಗೆ, ಹಾಗೂ ಈತನ ಸಹಚರರಿಗೆ 'ಗೌರಿ' ಸಮಸ್ಯೆಯಾಗಿ ಕಾಣುತ್ತಾಳೆ. ಈ ಅಂಶ ಅಧ್ಯಯನದಲ್ಲಿ ಹೆಚ್ಚು ಒತ್ತನ್ನು ಪಡೆಯುತ್ತದೆ. (ಊರು ಬಿಡುವ ಸಂದರ್ಭದಲ್ಲೂ ಭರಮಜ್ಜ, ಚಂಬಸ್ಸನ ಪಾತ್ರವೂ ಈ ಸಂದರ್ಭದಲ್ಲಿ ಗಮನಾರ್ಹ) ಏಕೆಂದರೆ, ವಂಶಪರಂಪರೆಯಾಗಿ ಆಚರಿಸಿಕೊಂಡು ಬಂದಂಥ ಮಾರೆಮ್ಮಾನ ಹೆಸರಿನಲ್ಲಿ ಬಸವಿ ಮಾಡುವ ಸಂಪ್ರದಾಯದೊಳಗೇ ಎಷ್ಟೋ ಬಡ ಕನ್ಯೆಯರು ತಮ್ಮ ಅಸಹಾಯಕತೆಯಲ್ಲಿ

ಯಾವುದೇ ರೀತಿಯ ಪ್ರತಿಭಟನೆ ವ್ಯಕ್ತ ಮಾಡದೇ ಇರುವುದರಿಂದ ಈ ರೀತಿ ಅಸಹಾಯಕತೆಯಲ್ಲಿ ಪ್ರತಿಭಟಿಸುವುದನ್ನು ಕಾದಂಬರಿಕಾರ ಎಲ್ಲಿಯೂ ನಿರೂಪಿಸಿಲ್ಲ. (ಅಂದರೆ ಗೌರಿ ಪಾತ್ರವನ್ನು ಹೊರತಾಗಿ) ಆದರೆ ಬಸವಿಯಾದ ಮೇಲೆ ಅವರಲ್ಲಿ ಕಾಡಿರುವ ಸಮಸ್ಯೆ ಅಂಥ ಸಮಸ್ಯೆಗಳುಂಟಾಗಲು ಕಾರಣವಾದ ಅಂಶಗಳ ಬಗ್ಗೆ ಇದ್ದ ಆಶಯವನ್ನು ಗುರ್ತಿಸಬಹುದು. ಗೌರಿಗೆ ಬಸವಿ ಮಾಡುವ ಸಂದರ್ಭದಲ್ಲಿ ಆಕೆಯನ್ನು ಸಿಂಗಾರ ಮಾಡಲು ಬಂದ ಮಧ್ಯ ವಯಸ್ಸಿನ ಬಸವಿಯೊಬ್ಬಳು ಎಣ್ಣಾಗಿ ಉಟ್ಟಿದ ಮ್ಯಾಗೆ ಇಂಥಾದ್ನೆಲ್ಲ ಅನುಭೋಗಿಸಬೇಕು ಮಗ್ಳೆ ಎಂದು ಗೌರಿಗೆ ಹೇಳುವ ಮಾತನ್ನು ಗ್ರಹಿಸಬೇಕು. ಇಂಥ ಪ್ರಸಂಗವು ಕುರುಮಯ್ಯ ಮತ್ತು ಅಂಕುಶ ದೊಡ್ಡಿಯಲ್ಲಿ ಕೊರವರ ಹನುಮವ್ವ ಹೇಳುವುದನ್ನು ನೆನಪಿಸುತ್ತದೆ. ಹೆಣ್ಣಾಗಿ ಹುಟ್ಟಬಾರದು ಹುಟ್ಟಿದರೂ ಕೊರವರ ಜಾತಿಯಲ್ಲಿ ಹುಟ್ಟಬಾರದು ಎನ್ನುವುದೂ ಹೆಣ್ಣು ಯಾವ ಜಾತಿಯಲ್ಲಿ ಹುಟ್ಟಿದರೂ ಶೋಷಿತಳೇ. ಹೀಗೆ ಹೇಳುವಲ್ಲಿ ಮತ್ತು ಬಸವಿಯಾಗುವ ಸಂದರ್ಭದಲ್ಲಿ ಪ್ರತಿಭಟಿಸಲಾರದ ಅಸಹಾಯಕತೆ ಉಂಟಾಗಲು ಗೌಡನ ಪ್ರಭುತ್ವ ಶಕ್ತಿ ಆ ಸಾಮಾಜದ ಮೇಲೆ ಎಂಥ ಒತ್ತಡ ಹೇರಿದ್ದರೆವೆಂಬುದನ್ನು ಊಹಿಸಬಹುದು.

ಇಂಥ ಸಂದರ್ಭದಲ್ಲಿ ಗೌರಿಯ ಪಾತ್ರಕ್ಕೆ ಕಾದಂಬರಿಕಾರರು ಹೆಚ್ಚು ಒತ್ತು ಕೊಡುತ್ತಾರೆ. ಏಕೆಂದರೆ, ಮುರಿದು ಕಟ್ಟುವ ಕ್ರಿಯೆಗೆ ಹೆಚ್ಚು ಒಲವುತೋರದೇ ಮುರಿದು ಹಂಗಿಸುವ ಕ್ರಿಯೆಯ ಕಡೆ ಲೇಖಕರು ಒಳಗಾಗುತ್ತಾರೆಂಬುದು ಪ್ರಮುಖವಾಗಿದೆ. ಬಸವಿ ಮಾಡುವ ಸಂದರ್ಭದೊಳಗೆ ಗೌರಿಗೆ ಸಿಂಗಾರ ಮಾಡುವಾಗಾಗಲಿ, ಊಟ ಮಾಡುವ ಸಂದರ್ಭದಲ್ಲಿ ಯಾದರೂ, ಸಿಂಗಾರ ಮಾಡಿ ಗಂಡನ ಹೆಸರನ್ನು ಕೇಳುವಾಗಲು, ಯಾವ ಮಾತಿಗೂ ಉತ್ತರಿಸದೆ ಕಣ್ಣೀರು ಇಡುತ್ತಾಳೆ. ಈ ಮೌನ ಮತ್ತು ಕಣ್ಣೀರುಗಳ ನಡುವೆ ಗೌಡ ಹತಾಶನಾಗುವುದನ್ನು ಬಸವಿಯರು ಗೌರಿ ಗಂಡನ ಹೆಸರು ಕೇಳುವ ಸಂಪ್ರಾದಯದ ಸಂದರ್ಭದಲ್ಲಿ ನಿರೂಪಣೆಕಾರರು ಹೇಳುವಂತೆ "ಯಾರು ಎಷ್ಟೇ ಪ್ರಯತ್ನಿಸಿದರೂ ಗೌರಿಯಿಂದ ಗೌಡನ ಹೆಸರನ್ನು ಹೇಳಿಸಲಾಗಲಿಲ್ಲ. ಅವರೆಲ್ಲರೂ ಇದು ತಮ್ಮ ಸೋಲೆಂದು ಭಾವಿಸಿದರು."[೨೮] ವಂಶಪರಂಪರೆಯಾಗಿ ಬಂದಂಥಹ ಹೆಸರು ಕೇಳುವ ಸಂಪ್ರದಾಯ ಗೌರಿಯ ಪ್ರತಿಭಟನೆಯ ಮೂಲಕ ಮುರಿದು ಬೀಳುವುದನ್ನು ಕಾದಂಬರಿ ಗುರ್ತಿಸುತ್ತದೆ. ಇದು ಗೌರಿಯ ಜಾಗೃತಿಯನ್ನು ಪ್ರಕಟಿಸುತ್ತದೆ. ಇದರ ಪ್ರಭಾವ ಇಡೀ ವ್ಯವಸ್ಥೆಯ ಮೇಲೂ ಆಗಿದೆ. ಸಂಪ್ರದಾಯದ ಪ್ರತೀಕವಾಗಿ ಆಚರಣೆಗಳನ್ನು ನಿರಾಕರಿಸುವುದು ಜೀವನ ದರ್ಶನಕ್ಕಾಗಿ, ತುಂಬ ಜೀವನ ಪ್ರಗತಿಗಾಗಿ ಎಂಬುದು ಗಮನಾರ್ಹ. ಇದರ ಎಳೆಯನ್ನು ಕಾದಂಬರಿಕಾರರು ಮಾನಸೂರಿನಲ್ಲಿ ಸಣ್ಣುದ್ರನ ತೋಳತೆಕ್ಕೆಯಲ್ಲಿ ಬಿದ್ದು, ಮದುವೆಯಾಗಲಿಕ್ಕೆ ಹಂಬಲಿಸಬೇಕೆಂದು ಗುರ್ತಿಸಬಹುದು. ಹಾಗೆಯೇ ಕಾದಂಬರಿಯ ಕೊನೆಯಲ್ಲಿ ಸಣ್ಣುದ್ರ ಹಾಗು ಕರೀಗೌಡನ ಹಳೆಯ ದ್ವೇಷದೊಂದಿಗಿನ ಆಚರಣೆಯ ಸಂದರ್ಭದಲ್ಲಿ ಅವರು ಸರ್ವನಾಶ ಹೊಂದಿ,

ಆ ಜಗಳದಲ್ಲಿ ಗೌರಿ ಬದುಕುಳಿದು ಹೇಗೋ ಗೌಡ ಸತ್ತ. ಬದುಕಲಿಕ್ಕೆ ಭೂಮಿ ಇದೆ ಎಂದು ಹೇಳುವಲ್ಲಿಯೂ ಜೀವ ಪ್ರೀತಿಯನ್ನು ಗುರುತಿಸಬಹುದು. ಇದು ಅವಳು ಕಂಡು ಕೊಳ್ಳಬೇಕೆಂದು ಕೊಂಡಿದ್ದ ಜೀವನ ಪ್ರೀತಿಯ ಪರ್ಯಾಯ ಹುಡುಕಾಟವಾಗಿತ್ತು. ಆದರೆ ಆ ಸಮಾಜದಲ್ಲಿ ಫ್ಯೂಡಲಿಸ್ಟ್‌ಗಳು ನಾಶವಾದರೂ, ಉಳಿದ ನವಫ್ಯೂಡಲಿಸ್ಟ್‌ರು ಬಸವಿಯ ಪಟ್ಟಕ್ಕೆ ಎರಿಸಲು ಅವರ ಪ್ರಯತ್ನಕ್ಕೆ ಮಸಿಬಳಿದಂತೆ 'ಗೌರಿ' ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಕೊನೆಯವರೆಗೂ ಗೌರಿಯನ್ನು 'ಬಸವಿ' ಮಾಡುವ ಪ್ರಯತ್ನ ಹಲವು ಬಗೆಯಿಂದ ನಡೆದರೂ ತಾನು 'ಬಸವಿಯಾಗದೇ' ಪ್ರಾಣತ್ಯಾಗ ಮಾಡಿಕೊಳ್ಳುವುದು ಧಾರ್ಮಿಕ ಸಂಪ್ರದಾಯವುಳ್ಳ ಸಮಾಜಕ್ಕೆ ಒಡ್ಡಿದ ಸವಾಲಾದರೆ, ಅ ಮೂಲಕ'ಬಸವಿ' ಬಿಡುವ ಸಂಪ್ರದಾಯವನ್ನು ಮುರಿದು ಹೊಸ ಸಾಮಾಜ ವ್ಯವಸ್ಥೆ ಹುಟ್ಟಲು ನಾಂದಿಯಾಗುತ್ತಾಳೆ. ೭೦ರ ದಶಕದ ಅಂಚಿನಲ್ಲಿ ಮಹಿಳೆಯರ ಧೋರಣೆ ಅನಿವಾರ್ಯವಾಗಿದ್ದಿತು. ಹಾಗಾಗಿ ಲೇಖಕ ವಾಸ್ತವಿಕ ಅಂಶಗಳನ್ನು ಕೃತಿ ರೂಪದಲ್ಲಿ ಎಚ್ಚರ ಮೂಡಿಸುವಲ್ಲಿ ಯತ್ನಿಸಿರುವುದು ಗಮನಾರ್ಹವಾಗಿದೆ. ದಲಿತ- ಬಂಡಾಯ ಕಾದಂಬರಿಯಲ್ಲಿಯ ಸ್ತ್ರೀಪಾತ್ರಗಳು ಶೋಷಕನಿಗೆ ಒಡ್ಡುವ ಪ್ರತಿಭಟನೆ 'ಮೌನ ''. ಈ ಮೌನವಹಿಸಲು ಕಾರಣಕೊಡುವುದಾದರೆ, ಸಾಮಾಜಿಕ ವ್ಯವಸ್ಥೆಯೊಂದರಲ್ಲಿಯ ಶೋಷಕನ (ಮೇಲುಮಾರ್ಗ) ಪ್ರಭುತ್ವ .ಸ್ತ್ರೀಗೆ ಸ್ವತಂತ್ರ ನಿರಾಕರಿಸಿದ ಸಾಮಾಜದ ಸಂಪ್ರದಾಯ ಹಾಗು ಅಸಾಹಯಕತೆ. ಈ ಅಸಾಹಯಕತೆ ನೆಲೆಯಲ್ಲಿ ಪ್ರತಿಭಟಿಸುವ ಗೌರಿ, ಕುಸುಮ, ಲಚ್ಮಿ, ಸೋನಿ, ಬುಡ್ಡಮ್ಮ, ಅಕ್ಕಮಾದೇವಿ ಸೀತಕ್ಕ, ಈ ಪಾತ್ರಗಳು ತಮ್ಮ ಸ್ವತಂತ್ರ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ, ಅಸ್ತಿತ್ವಕ್ಕಾಗಿ, ಎಲ್ಲರಂತೆ ಮಾರ್‍ಯಾದೆಯಿಂದ ಬದುಕುವ ಸಲುವಾಗಿ ಪರ್ಯಾಯ ಬದುಕಿನ ಸಲುವಾಗಿ ಪ್ರತಿಭಟನೆಯ ಮಾರ್ಗಗಳನ್ನು ಕಂಡುಕೊಳ್ಳುತ್ತವೆ. ಆ ಮೂಲಕ ಗಮನಾರ್ಹ ಹೆಜ್ಜೆಯನ್ನು ಇಡುತ್ತವೆ.

### ವರ್ಣ-ವರ್ಗವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಮತ್ತು ಪರ್ಯಾಯ ಹುಡುಕಾಟ

ಇನ್ನು ಜಾತಿ ವ್ಯವಸ್ಥೆ ಹೊಂದಿದ ಸಮಾಜಕ್ಕೆ ವಿರುದ್ಧವಾಗಿ ಕೆಳವರ್ಗಗಳು, ಪ್ರತಿಭಟಿಸುವ ಸ್ವರೂಪವನ್ನು ದಲಿತ ಬಂಡಾಯ ಕಾದಂಬರಿಯ ಪಾತ್ರಗಳ ಮೂಲಕ ಗುರ್ತಿಸಬಹುದು. ಜಾತಿ ಸಮಸ್ಯೆ, ವರ್ಣ ವ್ಯವಸ್ಥೆಯನ್ನು ಚಿತ್ರಿಸುವ ಕಾದಂಬರಿಗಳೆಂದರೆ, 'ಮುಳ್ಳೂರು ನಾಗರಾಜರ ಮರಣ ಮಂಡಳ ಮಧ್ಯದೊಳಗೆ', ದೇವನೂರರ ಕುಸುಮ ಬಾಲೆ, ಡಿ.ಎ.ಶಂಕರ್ 'ಅಸ್ಪೃಶ್ಯ' ಕಾದಂಬರಿಗಳು ಪ್ರಮುಖವಾದವುಗಳು. ಮುಳ್ಳೂರು ನಾಗರಾಜರ ಮರಣ ಮಂಡಲ ಮಧ್ಯದೊಳಗೆ ಕಾದಂಬರಿಯ ಬಸವರಾಜನು ಜಾತಿ ವ್ಯವಸ್ಥೆಯನ್ನು ತನ್ನ ಒರಟುತನದ ಹೊಸತನ ಹಾಗೂ ದೈಹಿಕ ಬಲದಿಂದ ಪ್ರತಿಭಟಿಸುತ್ತಾನೆ.ಇದರಿಂದ ದಲಿತರು ತಮ್ಮ ಸಮಾನತೆಗಾಗಿ ಮೇಲ್ವವರ್ಗದ ಮೇಲೆ ಹೋರಾಟ ನಡೆಸಬೇಕಾಗಿರುವುದು ಬಲದಿಂದಲೇ ಸಾಧ್ಯವೆಂಬ ಅಂಶ ಸ್ಪಷ್ಟವಾಗುತ್ತದೆ. ಏಕೆಂದರೆ, ಮೇಲುವರ್ಗ

ಇದುವರೆಗೂ ತನ್ನೆಲ್ಲಾ ಬಲವನ್ನು ದಲಿತರನ್ನು ಶೋಷಿಸಲು ಬಳಸಿತೇ ಹೊರತು ದಲಿತರಂತೆ ಶ್ರಮಕ್ಕಾಗಿ ಅಲ್ಲ, ದುಡಿಮೆಗಾಗಿ ಅಲ್ಲ ಎಂಬ ಅಂಶವನ್ನು ನಾವು ನೆನಪಿಡಬೇಕಾಗುತ್ತದೆ.

ಬಸುರಾಜು ದಲಿತ ಸಂಘರ್ಷ ಸಮಿತಿಯ ಹೋರಾಟದ ಪ್ರತಿನಿಧಿಯಾಗಿ ಕಾದಂಬರಿಯಲ್ಲಿ ಚಿತ್ರಿಸಲ್ಪಟಿದ್ದಾನೆ. ಆದರೆ ಮೇಲ್ನೋಟದ ವಿವರಗಳು ಬಸುರಾಜುವನ್ನು ಒಂದು ಪಂಗಡದ ಮುಖಂಡನಲ್ಲದಂತೆ ಜಾಳು ಜಾಳಾಗಿ ಕಾಣಬಹುದು. ನಿಂಗ - ನಿಂಗಿಯರ ನಗರ್ಲೆ ದೇವರಸು ಬೇಗಂರ ಪ್ರಕರಣಗಳು ಬಸುರಾಜು ಪಾತ್ರವನ್ನು ಬೆಳೆಸುವ ಮುಖ್ಯಘಟನೆಗಳಾಗಿವೆ. ಇವುಗಳ ಮಧ್ಯದ ಸಂಘರ್ಷವೇ ಬಸುರಾಜು ಬದುಕಿನ ಸಂಘರ್ಷವಾಗಿ ನೇರವಾಗಿ ಮೇಲ್ವರ್ಗ, ಪಂಚಾಯ್ತಿಯವರು ಮತ್ತು ದೈವಿಕ ಮೌಢ್ಯತೆಗಳು ಇಡೀ ಪಾತ್ರದ ವ್ಯಕ್ತಿತ್ವಕ್ಕೆ ಸವಾಲೊಡ್ಡಿ ನಿಲ್ಲುವುದನ್ನು ಕಾಣಬಹುದು.ಇಲ್ಲಿ ಬಸುರಾಜುವಿನ ಅಸ್ಪೃಶ್ಯತೆ ಆಚರಣೆಯ ವಿರುದ್ಧದ ಬಂಡಾಯ ಧ್ವನಿಸುವುದನ್ನು ಹೇಳಬೇಕು. ಒಟ್ಟು ದಲಿತ ಬಂಡಾಯ ಕಾದಂಬರಿಗಳ ಪಾತ್ರಗಳ ದೃಷ್ಟಿಯಿಂದಲೂ ಈ ಪಾತ್ರ ಗಮನಾರ್ಹ. ಉಳಿದ ದಲಿತ ಬಂಡಾಯ ಕಾದಂಬರಿಗಳಲ್ಲಿ ಬಸುರಾಜುವಿನಂಥ ಪಾತ್ರ ಬಹುಶಃ ಇರಲಾರರು ಎನಿಸುತ್ತದೆ. ಆ ಕಾರಣಕ್ಕಾಗಿ ಈ ಪಾತ್ರ ವಿಶೇಷವಾಗಿ ಕಾಣುತ್ತದೆ.

ಬಸುರಾಜು ಮೇಗಲಕೇರಿ ಸಂಕ್ರಪ್ಪನ ಹೋಟೆಲ್‌ನಲ್ಲಿ ಟೀ ಕುಡಿಯಲು ಹೋದಾಗ, ಹೋಟಲ್ ಮಾಲಿಕ ಟೀ ಕೊಡಲು ನಿರಾಕರಿಸಿದ ಸಂದರ್ಭದಲ್ಲಿ ವ್ಯಕ್ತವಾದ ಮಾತುಗಳು, ವೈಚಾರಿಕತೆಯಿಂದ ಕೂಡಿದ ಧೋರಣೆಯಾಗಿ ಕಂಡುಬರುತ್ತದೆ. ಈ ಪ್ರತಿಭಟನೆಯ ಧೋರಣೆಯಿಂದ ಟೀ ಬರುತ್ತದೆ. ಅಂದರೆ ಕಾದಂಬರಿಕಾರರು ಸೂಕ್ಷ್ಮವಾಗಿ ಕೆಳಸಮುದಾಯಗಳ ವೈಚಾರಿಕತೆ ಇರಬೇಕೆಂಬ ಸೂಕ್ಷ್ಮತೆಯನ್ನು ಸೂಚಿಸುತ್ತದೆ. ಇದನ್ನು ನಿರೂಪಣೆಯಲ್ಲಿ ಹೀಗೆ ಹೇಳಲಾಗಿದೆ......

"ಅದ್ಯೆ ಇದ್ಯಾವ ಸೀಮೆ ರೂಲಯ್ಯ ನಮ್ಕೇರಿಗೊಂದು ರೂಲ್ಸು ನಿಮ್ಕೇರಿಗೊಂದು ರೂಲ್ಸಯ್ಯ ನಮ್ಕೇರಿ? ನಮ್ಕೇರೀಗೆಗಾಳಿಬಂದ್ರ ನೀವೂ ಬ್ಯಾಡ ಅನ್ನಂಗಿಲ್ಲ.ಆ ಹೊಳೆ ನೀರುನ ಮೇಲ ನಿಮ್ಕೇರೀ ಹೆಸರೂ ಬರೆದಿಲ್ಲ ನಮ್ಕೇರಿ ಹೆಸರೂ ಬರೆದಿಲ್ಲ.ಹೊಲ್ಯಾರನ್ನೂ ಬಾಯಾರ್ಕಿ ಆಯ್ತದಪ್ಪ. ನೀರು ಕುಡುದರ ತಣ್ಣಗಾಯ್ತದ. ಲಿಂಗಾಯತನಗೂ ಅಪ್ಪಿಯ, ಬ್ರಮ್ಮಣಗೂ ಅಪ್ಪಿಯ, ಅವರಪ್ಪನ್ನೂ ಅಪ್ಪಿಯ. ಅವನವ್ವ ಜಾತಿ ಮಾಡ್ದವಳ ಬಾಯ್ಗ ನನ್ನೆಕ್ಕವ ಸಿಕ್ಕಾಕ್ಬುಕನ. ಸುಮ್ಮನೆ ಟೀ ಕೊಡಿ ಅಮ್ಮಮ್ಮ ಅಂದ್ರ ನಿಮ್ಮ ಟೀಗೆ ಎಂಟಾಣೆ. ಅದರ ಮಾಲ್ಯೆ ಎಂಟಾಣೆ ಕೊಡ್ತೀನಿಕನ ಮೊದ್ಲು ಟೀ ಕೊಡಿ ಮತ್ತ ಅನಲು ಸಾರುಜನಿಕವಾದ ಗಳಾಸನಲ್ಲಿಯ ಟೀ ಬಂತು"[೮೦] ಎನ್ನುವಲ್ಲಿ ಬಸುರಾಜು ತನ್ನ ವೈಚಾರಿಕತೆಯ ಮೂಲಕವೇ ಮಾನವತೆಯನ್ನು ಕಾಣುವುದು ಗೃಹಿತ. ಮನುಷ್ಯ ಪ್ರಕೃತಿಯ ಉದಾರತೆಯ ಮುಂದೆ ಎಷ್ಟೊಂದು ಹೀನವೆಂಬುದು ಈ ಧ್ವನಿ ವ್ಯಂಗ್ಯಗೊಳಿಸುತ್ತದೆ. ಬಸುರಾಜುವು

ಹರಿತ ಧ್ವನಿಯಿಂದ ಹೋಟಲ್‌ನಲ್ಲಿ ಟೀ ಕುಡುಯುವಂತಾದರೂ ಆ ಹೋಟಲ್‌ನಲ್ಲಿದ್ದ ಇತರ ಮೇಲು ಜಾತಿಯವರ ಅಪಹಾಸ್ಯಕ್ಕೆ ಈಡಾಗುತ್ತಾನೆ. ಈ ಅಪಹಾಸ್ಯಕ್ಕೆ ವಿರುದ್ಧವಾಗಿ

''ಯಾರು ಯಾರ್‍ಗ ಹುಟ್ಟಿದರು ಅಂಬುದ ಯಾರು ಕಂಡಿದ್ದಾರೆ? ನಾನೇ ನಿಮ್ಮಪ್ಪಗ ಹುಟ್ಟಿರಲುಬೋದು ಅಥ್ವಾ ನೀವೇ ನಮ್ಮಪ್ಪನುಗ ಹುಟ್ಟಿರಲೂ ಬೋದು. ನಿಜವು ಆದ್ಯಾನಿ? ಅಂದೆಂಗ್ಯೆ ಅಂಬುದ ಆ ಸಿವನೇ ಬಲ್ಲ. ನನಗೂ ನಿಮಗೂ ಅದೇನು ಗೊತ್ತಿದ್ದಳಿ''?[೮೧]

ಎಂದು ಹೇಳುವಲ್ಲಿ ಮೇಲ್ಜಾತಿಯವನಿಗೆ ರೋಷ ಉಕ್ಕಿ ಇಬ್ಬರ ನಡುವೆ ಸಂಘರ್ಷವೇರ್ಪಟ್ಟು, ಬಸರಾಜು ತನ್ನ ವೈಚಾರಿಕತೆಯನ್ನು ಸಮರ್ಥಿಸಿಕೊಳ್ಳುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಜಾತಿ ಪ್ರಧಾನ ಸಮಾಜದೊಳಗೆ ವೈಚಾರಿಕತೆ ಯಾಂತ್ರಿಕವಾಗುತ್ತದೆ. ಏಕೆಂದರೆ, ಪ್ರತಿಸಾರಿಯೂ ಈ ವೈಚಾರಿಕತೆಯ ಮೂಲಕವೇ ಮೇಲ್ವರ್ಗದವರ ಮನಸ್ಸನ್ನು ಪರಿವರ್ತಿಸಲು ಸಾಧ್ಯವಿಲ್ಲವೆಂಬುದು. ಏಕೆಂದರೆ ಬಸುರಾಜುನ ವೈಚಾರಿಕತೆಯಿಂದ ಸಾರ್ವಜನಿಕವಾಗಿ ಟೀ ಕುಡಿಯುವಂತಾದರೂ ಇತರ ಲಿಂಗಾಯತರ ವರ್ಗಕ್ಕೆ ಅಸಹನೀಯವಾಗಿ ಕಂಡು ಸಿಡಿದೇಳುತ್ತಾರೆ. ಆದ್ದರಿಂದಲೇ ಬಲಸಾಮರ್ಥ್ಯ ಪ್ರಯೋಗಿಸುವ ಪರಿಸ್ಥಿತಿ ಅನಿವಾರ್ಯವೆಂಬುದು ಕಾದಂಬರಿಯಲ್ಲಿ ಕಾಣುತ್ತದೆ.

ಹೋಟಲು ನಾಗವ್ವ ಕೈಗೊಂಡ ಅಸ್ಪೃಶ್ಯತೆ ಆಕೆ ಹೊಲ್ಯಾರನ್ನು ಕಾಣುವ ರೀತಿ.......... ''ಅಚಲಿ ನಿಲ್ಸಿ ಸಪರೇಟು ಲೋಟಾದಲ್ಲಿ ಟೀ ಕೊಡ್ತಾಳ, ತಾನು ಎಲ್ರಗಿಂತ ಮೇಲು ಅಂತೇಳುಕಳಕ ಅವಳೇನ ಗಾಂಧಿಮಾತ್ಮನ ಮಗಳ?''[೮೨] ಎಂಬಲ್ಲಿ, ಕಾದಂಬರಿ ಗಾಂಧಿ ಮಹಾತ್ಮನ ನಿಲುವುಗಳನ್ನು ಸ್ಪಷ್ಟವಾಗಿ ಗುರುತಿಸುತ್ತಾನೆ. ವಿಚಿತ್ರವೆಂದರೆ ಗಾಂಧಿ ಹರಿಜನರ ಪರವಿದ್ದರೂ, ಹೇಗೆ ವ್ಯತಿರಿಕ್ತವಾಗುತ್ತಾನೆಂಬ ದುರಂತ ನಿಂಗವ್ವನ ಪಾತ್ರದ ಮೂಲಕ ಮೂಡಿ ಬಂದಿದೆ. ಅಂಥ ಆಚರಣೆಯಲ್ಲಿದ್ದ ನಿಂಗವ್ವನೆ

''ಒಂಜಿನ ಜುಜಾಡತಾವು ನಾಕ್ಜನ ಮಾತಾಡ್ಕಂಡು ನಿಂಗವ್ವ ಅಂತಾ ಆ ಹೋಟಲ್‌ವುಳ್ಳ ಸಂದವೊತ್ತಲಿ ಹಿತ್ತಲುಗೋಗ ಟೇಮು ಕಾದ್ದಿದ್ದು ಸಂದುಸಾದ್ಸಿ ಕೊನೆಗೂ ಅವಳ ಹಿಡಿದು ಎಳೆದಾಡಿ, ಛೇ ಬ್ಯಾಡಿಕಪ್ಪ ಆ ಫಜೀತಿ, ಒಬ್ಬನಾದ ಮೇಲೊಬ್ಬ ನಾಕು ಜನೂವ ಸೇರ್ಕಂಡು ಆ ಪಾಯ್ಯ್ಗ ಆ ಉತ್ತಮ ಜಾತಿಯವಳಗ ಹುಟ್ಟುದ ಜಿನಾ ಕಾಣ್ಸುಬುಟ್ರು ನೋಡಿ''[೮೩]

ಎಂಬುದು ಅಸ್ಪೃಶ್ಯತೆಯ ಆಚರಣೆಗೆ ತಕ್ಕ ಪ್ರತಿಭಟನೆಯಾಗಿದೆ. ಇಲ್ಲಿ ಹೆಣ್ಣಿನ ಅಪಾಯ ಕಥೆಗಿಂತಲೂ ಕ್ರೂರವಾಗಿ ಕಾಣುವುದು. ಆಕೆಯ ಅಸ್ಪೃಶ್ಯ ಆಚರಣೆ ಕಾರಣ ಹೆಣ್ಣಿಗಾದ ಹಿಂಸೆಗೆ ನಮಗೆ ಮರುಕ ಹುಟ್ಟಬಹುದು. ಆದರೆ ಅಸ್ಪೃಶ್ಯರ ಮಾನಸಿಕ ಹಿಂಸೆಯನ್ನು ಅವರಲ್ಲದೆ ಮತ್ತಾರೂ ಅರ್ಥ ಮಾಡಿಕೊಳ್ಳಲಾರರು. ಅದು ಸಾಮೂಹಿಕ ಅತ್ಯಾಚಾರಕ್ಕಿಂತಲೂ ಕ್ರೂರವಾದುದು. ಅಸ್ಪೃಶ್ಯ

ಪಡುವ ಮಾನಸಿಕ ಹಿಂಸೆ ದೈಹಿಕ ಹಿಂಸೆಗಿಂತಲೂ ಮಿಗಿಲಾದದ್ದು. ಈ ದೃಷ್ಟಿಯಿಂದ ಅಸ್ಪೃಶ್ಯ ಕಾದಂಬರಿಯ ಬಾಕನ ಗ್ರಹಿಕೆಗೆ ಬರುತ್ತದೆ. ಸ್ವತಂತ್ರ ಪೂರ್ವದಲ್ಲಿ ಇದ್ದ ಸಾಮಾಜ ವ್ಯವಸ್ಥೆಯಲ್ಲಿದ್ದ ಅಸ್ಪೃಶ್ಯತೆಯಂತಹ ಕರಾಳ ಸ್ಥಿತಿಯನ್ನು ಚಿತ್ರಿಸುತ್ತದೆ.

ಅಂಥಮೇಲುವರ್ಗದವರ ಅಸ್ಪೃಶ್ಯತಾ ಪದ್ಧತಿಯ ವಿರುದ್ಧ ಕೆಳವರ್ಗದ ದಲಿತ ಬಾಕ ಮಾನಸಿಕವಾಗಿ ಹಿಂಸೆಗೊಳಗಾಗುತ್ತಾನೆ. ದೈಹಿಕ ಬಲ ಸಾಮರ್ಥ್ಯವಿದ್ದರೂ, ಮೇಲುವರ್ಗವನ್ನು ಮುಖಮುಖವಾಗಿ ಹೋರಾಡಲು ಅಸಹಾಯಕನಾಗುತ್ತಾನೆ. ಕಾದಂಬರಿಯ ಬೇರೆ ಬೇರೆ ಸನ್ನಿವೇಶಗಳಲ್ಲಿ ಭಿನ್ನವಾದ ಅಸ್ಪೃಶ್ಯತೆಯ ನೋವನ್ನು ಅನುಭವಿಸುತ್ತಾನೆ. ಈ ನೋವಿನಿಂದ ಅಸ್ಪೃಶ್ಯತೆ ಮಾಡುವ ಮೇಲ್ಜಾತಿಯನ್ನು ಅಂತರ್ಗತವಾಗಿ ಪ್ರತಿಭಟನೆ ಮಾಡುತ್ತಾನೆ. ಬಾಕ ಕಕ್ಕಸು ತೊಳೆಯುವಾಗ, ಬೀದಿ ಕಸಗುಡಿಸುವಾಗ, ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವಾಗ ತಾನು ಬರುವುದನ್ನು ಸೂಚಿಸುವಾಗ ಹಸಿದ ಹೊಟ್ಟೆಗೆ ಮೇಲ್ವರ್ಗದ ಸ್ತ್ರೀಯು ಚಾಪಾತಿ ಎಸೆಯುವಲ್ಲಿಯ ಬಾಕನನ್ನು ವಿರೋಧಿಸುವ ಸಾಮಾಜಿಕ ಕ್ರಿಯೆಗಳು ಅವನು ಅಸ್ಪೃಶ್ಯನೆನ್ನುವ ವಿಶಿಷ್ಟತೆಯ ಅರಿವನ್ನು ಅವನ ಮೇಲೆ ಹೇರಿಸಿದಾಗ ಪರಾಕಾಷ್ಠೆಯನ್ನು ಮುಟ್ಟುತ್ತದೆ.ಉಚ್ಚಜಾತಿಯ ಒಬ್ಬ ಲಲ್ಲಾನನ್ನು ಮುಟ್ಟಿ ಕೆಡೆಸಿದನೆನ್ನುವ ಆಪಾದನೆಯ ಮೇಲೆ ಬಾಕಾಗೆ ಸರ್ವಜನಿಕವಾಗಿ ಕೆನ್ನೆಗೆ ಹೊಡೆದಾಗ ಕ್ರಿಯ ಪರಾಕಾಷ್ಠಯಿದೆ.ಅವನಿಗೆ ಹೊಡೆದ ವ್ಯಕ್ತಿ ಬಖಾನಷ್ಟು ದೃಢಕಾಯನಲ್ಲವೆನ್ನುವಲ್ಲಿನ ಪರಿಸ್ಥಿತಿಯ ವ್ಯಂಗ್ಯವನ್ನು ಗಮನಿಸಬೇಕಾಗುತ್ತದೆ. ಬಾಕ ಅವನಿಗೆ ಸುಲಭವಾಗಿ ನೀರು ಕುಡಿಸಬಹುದಾಗಿತ್ತು. ಬಾಕ ಕೈ ಎತ್ತಿ ಹೊಡೆಯಲಾರ ಆದರೆ ಅವನು ದುರುಗಟ್ಟಿ ನೋಡುವಲ್ಲಿ ಪ್ರತಿಭಟನೆಯ ಧೋರಣೆಯಾಗಿದೆ. ನಿರೂಪಣಾಕಾರ ಬರೆಯುವಂತೆ

"ಬಾಕ ಕ್ಷಣ ಕಂಗೆಟ್ಟು ನಿಂತ. ನಂತರ ಅವನ ಇಡೀ ಮುಖ ಬೆಂಕಿಯಂತೆ ಉರಿಯ ತೊಡಗಿತು. ಜೋಡಿಸಿದ್ದ ಕೈ ತಾನಾಗಿಯೇ ಕೆಳಕ್ಕಿಳಿಯಿತು. ಅವನ ಸಧೃಡ ದೇಹದಲ್ಲಿ ಅಡಗಿದ್ದ ಶಕ್ತಿಯ ಹೊಳವು ಅವನ ಕಣ್ಣಲ್ಲಿ ಮಿಂಚಿ ಪ್ರತಿಕಾರವನ್ನು ಬಯಸಿತು. ಭೀತಿ,ಕೋಪ, ರೋಷಗಳು ಅವನ ದೇಹವನ್ನು ಹೊಕ್ಕು ಅಲ್ಲಾಡಿಸಿದವು ಒಂದೇ ಕ್ಷಣದಲ್ಲಿ ಅವನ ವಿನಮ್ರತೆ ಮಾಯವಾಗಿತ್ತು. ಮನಸ್ಸಿನ ಸಮಾನತೆ ಹಾರಿಹೋಗಿತ್ತು. ಆದರೆ ಹೊಡೆದಿದ್ದ ವ್ಯಕ್ತಿ ಅಷ್ಟರಲ್ಲೇ ತಪ್ಪಿಸಿಕೊಂಡು ಗುಂಪಿನಲ್ಲಿ ಎಲ್ಲೋ ಹೊರಟು ಹೋಗಿದ್ದ".[೮೮]

ಬಾಕನ ಪ್ರತಿಭಟನೇ ಈ ಸ್ವರೂಪವು 'ಸೂರ್ಯ'ದಲ್ಲಿ ಜೀತ ಕರಿಯನ ಪಾತ್ರದಲ್ಲೂ, ದೇವನೂರರ ಒಡಲಾಳದ ಗಾರೆಸಿದ್ರಾಮವನ ಪಾತ್ರಗಳಲ್ಲಿಯೂ ಗುರ್ತಿಸಬಹುದು. ಜಮೀನ್ದಾರ ಜೀತ ಕರಿಯನ ಹೆಂಡತಿ ಚೆನ್ನಿಯನ್ನು ಅತ್ಯಚಾರ ವೆಸಗಿ, ಕೊಲೆ ಮಾಡಿ ವಿಷಯವನ್ನು ಬಹಿರಂಗ ಪಡಿಸದಂತೆ ಬಂದೂಕಿನಿಂದ ಎಚ್ಚರಿಸುತ್ತಾರೆ. ಇದನ್ನು ಕೃತಿಯಲ್ಲಿ ಹೀಗೆ ಹೇಳಲಾಗಿದೆ.

"ಈಗಿಲ್ಲಿ ತೀರ್ಮಾನ ಆಗ್ಬೇಕು ಯಾರ್ರಾನ ಬಾಯ್ ಬಿಟ್ರೆ ಅಂದ್ರೆ
ನಾನು ಬಂದೂಕು ಬಾಯಿ ತೆಗೀತಿನಿ."[೮೫]

ಎಂಬುವಲ್ಲಿ ಕರಿಯನು ಹೆದರದೆ ಜಮೀನ್ದಾರನ ಕಣ್ಣಿಗೆ ಕಣ್ಣಿಟ್ಟು ದುರುಗುಟ್ಟಿ ನೋಡುತ್ತಾನೆ ಕರಿಯನ ದೃಷ್ಟಿ ತಾಳಲಾರದೇ ಜಮೀನ್ದಾರ ಅಳುಕಿ, ಬಂದೂಕನ್ನು ಇಳಿಸಿದನು ಎನ್ನುವಲ್ಲಿಯೂ, ಒಡಲಾಳದ ಕಡಲೆಕಾಯಿ ಕಳ್ಳರನ್ನು ಹುಡುಕುವ ನೆಪದಲ್ಲಿ ಬಂದ ಪೋಲೀಸರು, ವಿಫಲರಾಗಿ ಸಾಕವ್ವನ ಕುಟುಂಬವನ್ನು ವಿಚಾರಿಸುವ ಸಂರ್ಭದಲ್ಲಿ ಪೋಲೀಸ್ ಇನ್‌ಸ್ಪೆಕ್ಟರ ಪುಟ್ಟ ಗೌರಿಯ ಕೆನ್ನೆಯ ಮೇಲೆ ರೂಲು ಕಟ್ಟಿಗೆ ಸವರತೊಡಗಿದಾಗ ಗುರುಸಿದ್ಧ ಇನ್‌ಸ್ಪೆಕ್ಟರನ್ನು ದುರುಗುಟ್ಟಿ ನೊಡುತ್ತಾನೆ. ಗುರುಸಿದ್ಧನ ಸಿಟ್ಟಿನ ನೇರ ನೋಟಕ್ಕೆ ಇನ್‌ಸ್ಪೆಕ್ಟರನ ಎರಡು ಮೈರೋಮ ಅಳುಕಿತು ಎಂದಾಗಲೂ ಇಡೀ ದಲಿತ ಲೋಕ ಸಿಟ್ಟುಗೊಂಡರೆ ಒಂದು ಸಲ ಕ್ಷುದ್ರವಾಗಿ ವ್ಯವಸ್ಥೆಯ ಕಡೆ ನೋಡಿತೆಂದರೆ ಇಡೀ ವ್ಯವಸ್ಥೆ ಕುಸಿಯಬಹುದಾದ ಸಂಭಾವ್ಯತೆ ಇದೆ ಎಂಬುದೇ ಇಲ್ಲಿಯ ಕಲಾವಂತಿಕೆ.

ಅಕ್ಷರ ಜ್ಞಾನದ ಮೂಲಕ ಸಾಮಾಜಿಕ ಅಸಮತೆಯನ್ನು ಹೋಗಲಾಡಿಸುವಲ್ಲಿ ಸಫಲತೆ ಪಡೆಯುತ್ತದೆ. ಅಕ್ಷರ ಜ್ಞಾನಹೊಂದಿ ಅಸಮತಾ ವ್ಯವಸ್ಥೆಯನ್ನು ಪ್ರಶ್ನಿಸುವುದೂ ಪ್ರತಿಭಟನೆಯ ಧೋರಣೆಯನ್ನು ಹೊಂದುತ್ತದೆ. ಇಂತಹ ಸಂದರ್ಭವು ಬಿ.ಟಿ. ಲಲಿತಾ ನಾಯ್ಕರ 'ಗತಿ' 'ಕುಸುಮ ಬಾಲೆ', ಹಾಗೂ ಕಾ.ತ.ಚಿಕ್ಕಣ್ಣ ನವರ 'ಮುಂಜಾವು' ಕಾದಂಬರಿಗಳು ಕಟ್ಟಿಕೊಡುತ್ತವೆ.

'ಗತಿ' ಕಾದಂಬರಿಯಲ್ಲಿ ಚಂದುವಿನ ಪಾತ್ರ ಗಮನಾರ್ಹವಾದುದು ಲೇಖಕಿ ನಿರ್ಮಿಸುವ ದಿಬ್ಬ ತಾಂಡದ ಅನಕ್ಷರಸ್ಥ, ಮೌಢ್ಯಕ್ಕೊಳಗಾದ ಜನಗಳ ಮಧ್ಯೆ ಲಚ್ಮಿ ದೇವರು ಧರ್ಮದ ಹೆಸರಿನಲ್ಲಿ ಹಿಂಸೆಯನ್ನು ಅನುಭವಿಸುತ್ತಿರುತ್ತಾಳೆ. ಅವಳು ತಾಂಡ್ಯದ ಪಂಚಾಯ್ತಿಯಲ್ಲಿ ದುರ್ವರ್ತನೆ ವೆಸಗಿದ್ದಾಳೆಂಬ ಆರೋಪದ ಮೇರೆಗೆ ಕಂಬಕ್ಕೆ ಕಟ್ಟಿ ಹೊಡೆಯುತ್ತಿರುತ್ತಾರೆ. ಇಂಥ ಸಂದರ್ಭದಲ್ಲಿ ಅಕ್ಷರ ಕಲಿತ ಚಂದುವು ಅಡ್ಡ ಬಂದು ಹಿಂಸಕರಿಗೆ ಒಡ್ಡುವ ಪ್ರತಿಭಟನೆ ಗಮನಾರ್ಹವಾಗಿದೆ ಕಾದಂಬರಿಯಲ್ಲಿ ಹೀಗೆ ನಿರೂಪಿತವಾಗಿದೆ.

"ಕಾನೂನಿನ ಪ್ರಾಕಾರ ಹೆಣ್ಣು ಮಕ್ಕಳನ್ನು ನೀವೆಲ್ರೂ ಕೂಡಿ ಈ ರೀತಿ ಕಂಬಕ್ಕೆ ಕಟ್ಟಿ ಬಡಿತಿರೋದು ಭಾರಿ ಅಪರಾಧ ಆಗ್ತದ. ನೀವು ಹಿಂದೆ ಸರದ್ರಿ ಅಂದ್ರ ನೆಟ್ಟಗಾತು. ಇಲ್ಲಕ್ಕಂದ್ರ ನಾ ಪೋಲೀಸರಿಗೆ ದೂರು ಕೊಡ್ತೀನಿ ನಿಮ್ಮನ್ನೆಲ್ಲ ಸಾಲು ಹಚ್ಚಿ ಕೋರ್ಟಗೆಳೆತೀನಿ ! ನ್ಯಾಯ ಅಂಬೋದೇನು ಅನ್ನೋದು ನಿಮಗೆಲ್ಲ ಅಲ್ಲಿ ಗೊತ್ತಾಗತದ"[೮೬] ಎಂದು ಚಂದು ಹೇಳುವಲ್ಲಿಯೂ ಕುಸುಮಬಾಲೆಯ ಗಾರಸಿದ್ಮವ ಲಿಂಗಾಯತರ ತೋಟದಲ್ಲಿ ಎಳನೀರು ಕದ್ದು ಅಪಾದನೆ ಮೇರೆಗೆ ಲಿಂಗಾಯತರ

ಮುಖಂಡರಲ್ಲಿ ಕಂಬಕ್ಕೆ ಕಟ್ಟಿ ಹೊಡೆಯುತ್ತಿರುವ ಸಂದರ್ಭದಲ್ಲಿ ಆ ಊರಿಗೆ ಹೊಸದಾಗಿ ಬಂದ ದಲಿತ ಮೇಷ್ಟ್ರು ನಾಗರಾಜು ಲಿಂಗಾಯತರ ಮುಖಂಡನನ್ನು ಕುರಿತು ಹೇಳುವ ಮಾತನ್ನು ಗಮನಿಸಬಹುದು. "ಆ ಎಳನೀರನ್ನು ಅದ ಕೆತ್ತವಾನ್ನು ಪೋಲೀಸಗೆ ಕೊಡಬೇಕಿತ್ತು". ಎನ್ನುತ್ತಾರೆ. ಚಂದು, ಹಾಗು ನಾಗರಾಜ ಇವರ ಪಾತ್ರಗಳ ಮನೋಧರ್ಮ ಒಂದೇ ರೀತಿಯಾಗಿ ಗುರ್ತಿಸಲ್ಪಡುತ್ತದೆ. ಲಚ್ಮಿ ತನ್ನದೆ ಆದ ಸಮುದಾಯದ ಮೇಲ್ವವರ್ಗದವರಿಂದ (ಶೋಷಣೆಗೊಳಗಾದರೆ) ಹಿಂಸೆಯನ್ನು ಅನುಭವಿಸುತ್ತಾಳೆ. ಆದರೆ ಗಾರೆಸಿದ್ಮಾವ ಮೇಲ್ವವರ್ಗದ ಲಿಂಗಾಯತರಿಂದ ಹಿಂಸೆಗೆ ಒಳಪಡುತ್ತಾನೆ. ಈ ಪಾತ್ರಗಳ ಅಪರಾಧವು ಚಂದು ಹಾಗೂ ನಾಗರಾಜನ ಪ್ರವೇಶದಿಂದ ಕಾನೂನಿನ ತಿರುವನ್ನು ಪಡೆದುಕೊಳ್ಳುತ್ತಿರುವುದನ್ನಿಲ್ಲಿ ಗಮನಿಸಬೇಕು. ಮೇಲ್ವರ್ಗ ಹಾಗು ಕೆಳವರ್ಗಗಳ ನಡುವೆ ಸಂಘರ್ಷದಲ್ಲಿ ಕನೂನಿನ ಪ್ರಜ್ಞೆ ಯಿಂದಾಗಿ ಕೆಳವರ್ಗಗಳ ಶೋಷಿತ ಪ್ರತಿನಿಧಿಗಳಾದ ಲಚ್ಮಿ, ಹಾಗು ಗಾರಸಿದ್ಮವ ಪಾರಾದರು, ಮೇಲ್ವರ್ಗ ಹಾಗು ಕೆಳಜಾತಿಯ ಶೋಷಿತರಲ್ಲಿ ಈ ಪ್ರಜ್ಞೆ ದ್ವಂದ್ವ ನಿಲುವನ್ನು ಪಡೆದುಕೊಳ್ಳುತ್ತದೆಂಬುದುನ್ನು ಇಲ್ಲಿ ಗಮನಿಸಬೇಕಾದ ಅಂಶ, ಕೆಳಜಾತಿ ಶೋಷಿತ ಮೇಲ್ವರ್ಗದ ಅನಕ್ಷಸ್ಥರು ಕಾನೂನಿಗೆ ಹೆದರಿ ಅಪರಾದವನ್ನು ಧಾರ್ಮಿಕತೆಯ ಅಡಿಯಲ್ಲಿ ಒಪ್ಪಿಸಿದರೆ, ಮೇಲ್ಜಾತಿಯ ಮೊಕಂಡರು ತಮ್ಮದೆ ಸಮುದಾಯದ ನ್ಯಾಯ ಪರಿಕಲ್ಪನೆಯಲ್ಲಿ ನಿಲುವನ್ನು ಸಮರ್ಥಸಿಕೊಳ್ಳುತಾರೆ. ಅದ್ಯಾಕಯ್ಯ ಮೇಸ್ಟ್ರ ಪೋಲೀಸಗ? ನಂಕಯ್ನ ಬಳ ತೊಳ್ಕಂಡಿದ್ದವ ನಾವುಃ ಆಗಾರ ನಮ್ಮೂರ್ಲಿ ನ್ಯಾಯವಂತರೆ ಇಲ್ವಯ್ಯ"[೮೭] ಎನ್ನುವ ಮಾತು ಸಮುದಾಯದಲ್ಲಿಯ ದೌರ್ಜನ್ಯ ಇನ್ನೂ ಜಡಗೊಂಡಿರುವದು ಸ್ಪಷ್ಟವಾಗಿರುತ್ತದೆ. ಜಾತಿಯಾಧಾರಿತ ಸಮಾಜವನ್ನು ದೇವನೂರರು ನೇರವಾಗಿ ಪ್ರತಿಭಟಿಸದೇ ವಿಡಂಬನಾತ್ಮಕವಾಗಿ ಬಂಡಾಯ ಧ್ವನಿ ಎತ್ತುತ್ತಾರೆ ಕುಸುಮ ಬಾಲೆಯಲ್ಲಿ ಕುರುಮಯ್ಯನ ನನ್ನಿ ಪ್ರಸಂಗ, ಗುರು ಮಧ್ವಾಚಾರ್ಯರ ಹಾಗೂ ಚನ್ನನ ಸಂಭಾಷಣೆಯ ಪ್ರಸಂಗ, ಹಾಗೂ ದಲಿತ ಸಂಘದ ಮೆರವಣಿಗೆಯ ಸಂದರ್ಭದಲ್ಲಿ, ಮೇಲುಜಾತಿಯವರು ಚನ್ನನ ತಂದೆಗೆ ಅಪಹಾಸ್ಯ ಮಾಡುವ ಸಂದರ್ಭದಲ್ಲಿ ಚನ್ನನ ತಂದೆ ಲಿಂಗಾಯತರಿಗೆ ನರಿ ಕಥೆ ಹೇಳುವ ಪ್ರಸಂಗಗಳನ್ನು ಗ್ರಹಿಕೆಗೆ ತರುತ್ತದೆ. ನಿದರ್ಶನಕ್ಕಾಗಿ ಮಧ್ವಾಚಾರ್ಯರ ಪ್ರಸಂಗವನ್ನು ನೋಡಲಾಗಿದೆ.

ಮಧ್ವಾಚಾರ್ಯನು ಜಾತಿಯಾಧಾರದ ಹಿನ್ನಲೆಯಿಂದ ಅಸ್ಪೃಶ್ಯರನ್ನು ಕೀಳಾಗಿ ಕಾಣುವ ಮನಸ್ಸು ಹೊಂದಿರುತ್ತಾನೆ. ತಮ್ಮ ಸಮುದಾಯದ ಶಾಸ್ತ್ರಿಯ ಮಗಳು ಸಾವಿತ್ರಿ ಅಸ್ಪೃಶ್ಯನೊಂದಿಗೆ ಸಂಬಂಧವಿಟ್ಟುಕೊಂಡಿರುವುದನ್ನು ಕೇಳಿ ಕಾಲವನ್ನು ಹಂಗಿಸುತ್ತಾನೆ. ಆದರೆ ತನ್ನ ಮಗಳು ಭಗವತಿ ಅಮಾಸನೊಂದಿಗೆ ಲೈಂಗಿಕ ಸಂಬಂಧ ಹೊಂದಲು ಹಂಬಲಿಸುವುದು ಮಧ್ವಾಚಾರ್ಯರಿಗೆ ಅರ್ಥವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ದೇವನೂರರು ಮಧ್ವಾಚಾರ್ಯರಿಗೆ ಸಂಸ್ಕೃತ ಕನ್ನಡ

ಭಾಷೆಗಳ ಮೂಲಕ ವಿಢಂಬಿಸುತ್ತಾ ಅಂಥ ವ್ಯವಸ್ಥೆಗೆ ಪ್ರತಿಭಟನೆ ಮಾಡುತ್ತಾರೆ. ಈ ಪ್ರಸಂಗವು ಮಧ್ವಾಚಾರ್ಯ ಹಾಗೂ ಚನ್ನನ ಸಂಭಾಷಣೆಯಲ್ಲಿ ಹೀಗೆ ನಿರೂಪಿಸುತ್ತಾರೆ.

ಅಂದ ಹಾಗೆ ಚನ್ನ ಆ ನಮ್ಮ ಪಕ್ಕದ ಮನೆಯ ಶಾಸ್ತ್ರಿಗಳ ಮಗಳು ಸಾವಿತ್ರಿಃ ಮೈಸೂರು ಪಟ್ಟಣದಲ್ಲಿ ಇದ್ದಾಳಲ್ಲಃ ಅವಳ ಬಗ್ಗೆ ಕೇಳ ಬಾರದ್ದ ಕೇಳಿದೆನಯ್ಯಃ ನಿಜವೇನಪ್ಪಃ?''

ನಿಜಸಾ.ನಮ್ ಜಾತ್ಯವರ ಮದ್ವಾಗಿ ಮಡಿಕಂಡು ಈಗೊಂದು ಕೂಸು.......''

''ನಿಲ್ಸಪ್ಪಃ ಚನ್ನಃ ನಿಲ್ಸಯ್ಯ ಚನಃ ಆಗೇ ಬಿಟ್ಟಿತ್ಯೆಃ? ರಾಮ ರಾಮಃ ಕೇಳುವುದು ಉಂಟ್ಯೆ? ನಾನು ನನ್ನ ಈ ಕಿವಿಗಳಿಂದ ಕೇಳಲಾರೆನಪ್ಪಃ ಉಂಟ್ಯೆ?''[೪೪] ಹೀಗೆ ದಲಿತ ಬಂಡಾಯ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಂಡ ಈ ಲೋಕ ನಡೆಯತ್ಯೆ? ಪ್ರತಿಭಟನೆಯು ಮೌನ, ಸಿಟ್ಟು, ಆಕ್ರೋಶ, ವಿಡಂಬನೆ,ವ್ಯಂಗ್ಯಗಳ ಮೂಲಕ ವ್ಯಕ್ತಪಡಿಸುವ ಸ್ವರೂಪ ಒಂದು ರೀತಿಯದು. ಅದೇ ರೀತಿ 'ಗಾದೆ'' ಗಳನ್ನು ಹೇಳುವುದರ ಮೂಲಕವೂ ವಿರೋಧ ವ್ಯಕ್ತಪಡಿಸುತ್ತಾರೆ. ನಮ್ಮ ಗ್ರಾಮೀಣ ಸಮಾಜಗಳಲ್ಲಿ ಕೆಳ ಸಮುದಾಯ ವ್ಯವಸ್ಥೆಯನ್ನು ಗಾದೆಗಳ ಮೂಲಕ ಪ್ರತಿಭಟಿಸುವುದು ವಾಸ್ತವ ಸಂಗತಿ. ಈ ಪ್ರತಿಭಟನೆ ಕೆಳವರ್ಗಗಳ ಅಸಹಾಕ ಸ್ಥಿತಿಯಲ್ಲಿ ವ್ಯಕ್ತವಾಗುತ್ತೆಂಬುದನ್ನು ದಲಿತ-ಬಂಡಾಯ ಕಾದಂಬರಿಗಳಲ್ಲಿಯ ಸನ್ನಿವೇಶಗಳು ಮತವರಿಕೆ ಮಾಡಿಕೊಡುತ್ತವೆ.

''ನನಗೆ ಹಗೆತನ ನಿಮಗೆ ನಂಟಸ್ತಾನ''?

''ಆಯಿಗೆ ಅಳ್ಳಿಚಿಂತಿ ಹತ್ತಿದ್ರ ಮಗಳಿಗೆ ಮಿಂಡಗಾರನ ಚಿಂತಿ ಹತ್ತಿತ್ತಂಗ ಹಾಂಗಾತು,ಯಾರಿಗೇನಾದ್ರೆ ಅವರಿಗೇನಂತೆ? ಎಷ್ಟೇ ಅಂದ್ರು ತಿಳಿಲಾರದ ಮಕ್ಕಳಲ್ಲಾ? ದೊಡ್ಡ ಆದ್ರು ದೊಡ್ಡವ್ರೆ ದೊಡ್ಡ್ಯಾಂಗ ತಿಂದ ದುಂಡಕ ಉಳ್ಯಾಡ್ವಾಗ ಮಕ್ಕಳದೇನು''?[೬೦] ''ಸುಮ್ಮನೆ ಕುಂತಿದ್ರಾದ್ದ ಮಂತ್ರಕ ಮಾವುನ ಕಾಯಿ ಉದುರುದದ''?[೬೧] ನೀರಿನಾಳವ ಅಳೆಯಲುಬಹುದು, ಮೀನಿನ ಹೆಜ್ಜೆಯ ಜಾಡನು ತಿಳಿಯಬಹುದು. ಈ ಮುಂಡ ಮಗನ ಹೆಣ್ಣು ಕುಲದ ಮನದಾಳವ ಅಳೆಯಲು ಆಗಲ್ಲ ತಿಳಿಯಲು ಆಗಲ್ಲ.''[೬೨] ಕೊಟ್ಟ ಹೆಣ್ಣು ಕುಲಕ್ಕ ಹೊರಗು. ನಿನ ಗಂಡ ಎಷ್ಟಾರ ಹಿಂಸೆ ಕೋಡವಲ್ಲನ್ಯಾಕ ಸೈಸಿಕೊಂಡು ಬಾಳ್ವೆ ಮಾಡ ಬೇಕವ್ವ!''[೬೩]

''ತಗಾ ಅದ್ಯಾರೊ ಒಬ್ಬಳು ಕುಟ್ಕೊ ಬತ್ತ ಬುಟ್ಟು ಹುಟ್ಕೋ ಶ್ಯಾಟ ನೊಡ್ಕತ್ತಿದ್ಲಂತೆ''[೬೪]

''ಸಾಖ ಹೋಗಾ ಹೊತ್ತಲಿ ಸಾಬರ ಗಡ್ಡದ್ನ ಉಸಾಬರಿ ನಮಗ್ಯಾಕ''?[೬೫] ''ಅದ್ ಸರೀ ಅನ್ನವ್ವಾ, ಮೂರಾಳ್ ಉದ್ದದ್ಮೂರಾಗಲದ್ ಅಗ್ಗಾ ಬಿಟ್ರೆ ಅದೆಲ್ ಇಳದದು? ಅದಕ್ಕೆ ಪೋಟಿ ಆಕದ್ರೂ ಸರಿಯೇ, ಮೂರಳ್ ಉದ್ವೇ ಇರ್ಬೇಕು''[೬೬]

" ಬಾಳಾಟ್ನ ಹಿಂಗ್ ಮಾಡ್ಡವಳ್ಳಾ, ಗ್ರಾಚಾರ ಅನ್ನೋದು ಗುದ್ದಕ ಬಂದ್ರಾ, ನೋಡ್ಕ ಎಲ್ಲಿಗೆ ತಂದಿಟ್ಟದ''" "ಬೆಂಕಿ ಮ್ಯಾಲ ಕಲ್ಲ ಹೇರಿ ನಮ್ಮ ಕುಡಿ ಆರ್ಸಗೋಬೇಕಂತ ಮಾಡಿಯೇನು''"

ಇಲ್ಲಿನ ಇಡೀ ತಾತ್ವಿಕತೆ ಪಾರಂಪರಿಕ ಜಡತೆಯನ್ನು ಮೀರಿ ಹೊಸ ಸಮಾಜದ ನಿರ್ಮಾಣಕ್ಕೆ ಹಂಬಲಿಸುವುದೇ ಆಗಿದೆ. ಶೋಷಣೆಯ ಅಸ್ತ್ರಗಳಾದ ಸಮಾಜಿಕ ಅಸಮಾನತೆ, ಆರ್ಥಿಕ ಅಸಮಾನತೆ, ಲೈಂಗಿಕ ಕಿರುಕಿಳದಂತಹ ಹೀನಾಯ ಕ್ರಿಯೆಗಳು ನೆಲೆಗೊಂಡು ಮತ್ತು ಅವು ಶೋಷಿತವರ್ಗದ ಆಂತರಿಕ ಮತ್ತು ಬಾಹ್ಯ ಎಚ್ಚರದ ನಿಮಿತ್ಯ ಸಡಿಲಗೊಂಡ ಬಹುಮುಖ್ಯ ಸಂಗತಿಗಳನ್ನು ಕಾಣಬಹುದಾಗಿದೆ. ವಿಶೇಷವಾಗಿ ಕಾಮಸಂಬಂಧಿಯಾದ ಇಲ್ಲಿನ ಕ್ರಿಯೆಗಳು. ಅಪರಾಧದ ಮಧ್ಯೆಯೂ ಹೆಣ್ಣು ಪಾತ್ರಗಳು ತೋರುವ ಆತ್ಮವಿಶ್ವಾಸ, ವ್ಯವಸ್ಥೆಯ ನಿರ್ಣೀಯತೆಯನ್ನು ಕೆಳವರ್ಗಗಳ ಸೃಷ್ಟ್ಯಾತ್ಮಕ ಶಕ್ತಿಯನ್ನು ಎತ್ತಿತ್ತೋರಿಸುವುದೇ ಆಗಿದೆ. ಆಂತರಿಕವಾದ ಪರ್ಯಾಯಗಳು ಇನ್ನೊಂದು ಬಗೆಯವು. ಕೆಳವರ್ಗಗಳ ಎಚ್ಚರ ಮತ್ತು ಹೊಸ ಬದುಕಿನ ಹುಡುಕಾಟ ಒಟ್ಟು ಕಾದಂಬರಿಗಳಲ್ಲಿ ಬಹುಮುಖ್ಯವಾಗಿ ಚಿತ್ರಿತವಾಗಿರುವುದು ಗಮನಾರ್ಹ. ಪ್ರತಿಸಂಸ್ಕೃತಿ ನಿರ್ಮಾಣ ಕೆಳವರ್ಗಗಳ ತನ್ನ ಸಾಂಸ್ಕೃತಿಕ ಬದುಕಿನ ಅವಲೋಕನ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

## ಪ್ರಕೃತಿ ಹಾಗೂ ಸಂಸ್ಕೃತಿ

ನವ್ಯ ಘಟ್ಟದಲ್ಲಿ ಸೃಷ್ಟಿಗೊಂಡ ಕಾದಂಬರಿಗಳು ಪ್ರಕೃತಿಯನ್ನು ರಮ್ಯವಾಗಿ ವರ್ಣಿಸುತ್ತವೆ. ಆ ಮೂಲಕ ಓದುಗ ವರ್ಗಕ್ಕೆ ಮನರಂಜನೆ ಒದಗಿಸುವ ಸಲುವಾಗಿ ಕಥೆಯ ನಿರೂಪಣೆಯಲ್ಲಿ ಪ್ರಕೃತಿಯನ್ನು ದಟ್ಟವಾಗಿ ವರ್ಣಿಸುತ್ತವೆ. ಇಂಥ ವರ್ಣನೆ ದಲಿತ ಬಂಡಾಯ ಕಾದಂಬರಿಗಳು ಚಿತ್ರಿಸುತ್ತವೆಯಾದರೂ, ಇದನ್ನು ಪ್ರಮುಖವಾಗಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಬದಲಾಗಿ ಪ್ರಕೃತಿಯ ಪ್ರತಿಸೃಷ್ಟಿ ಕ್ರಿಯೆಯಿಂದ ಶ್ರಮ ಸಂಸ್ಕೃತಿಗಳ ಸೃಷ್ಟಿಸುವ ಮತ್ತು ನಾಶಗೊಳಿಸುವ ಪರ್ಯಾಯದ ಹಂಬಲಗಳನ್ನು ಗಂಭೀರವಾಗಿ ಕಟ್ಟಿಕೊಡುತ್ತವೆ. ಇಲ್ಲಿಯ ತಾತ್ವಿಕ ಅನ್ವೇಷಣೆ ಮಾನವೀಯ ಅವಸ್ಥೆಯ ಮೂಲಭೂತ ದ್ವಂದ್ವಗಳೊಂದಾದ ಪ್ರಕೃತಿ ಹಾಗೂ ಸಂಸ್ಕೃತಿಗಳಿಗೆ ಸಂಬಂಧಿಸಿದೆ. ಈ ಅನ್ವೇಷಣೆ ಕಾದಂಬರಿಗಳಿಗೆ ಸಾರ್ವತ್ರಿಕ ಆಯಾಮ ದೊರಕಿಸಿಕೊಡುತ್ತದೆ.

ದಲಿತ ಬಂಡಾಯ ಕಾದಂಬರಿಕಾರರು ಪರಿಸರದ ಪ್ರತಿಸೃಷ್ಟಿಯನ್ನು ಪ್ರಾದೇಶಿಕ(ಪ್ರಾಕೃತವಾದ) ಭೌಗೋಳಿಕ ಹಿನ್ನೆಲೆಯಲ್ಲಿ ಶೋಷಿತರ ಜೀವನ ವಿಧಾನ, ನೋವು-ನಲಿವುಗಳನ್ನು ಚಿತ್ರಿಸುತ್ತಾ ಈ ವರ್ಗದ ನಿಸರ್ಗಮುಖಿ ಬದುಕಿನ ಜೀವನ ಕ್ರಮಗಳನ್ನು ಎತ್ತಿ ತೋರಿಸುತ್ತಾರೆ. ಈ ಕಾದಂಬರಿಗಳಲ್ಲಿ ಚಿತ್ರಿತಗೊಂಡಿರುವ ಕಾಡೂರು, ಆನಂದಪುರ, ಪಾಂಡವಪುರ(ಕುಂತೀಬೆಟ್ಟ) ಅಂಕುಶದೊಡ್ಡಿ, ದಿಬ್ಬ

ತಾಂಡ್ಯೆ, ಮಾಸೂರು, ಬಾಸೂರು ಇತ್ಯಾದಿ ಊರುಗಳನ್ನು ಸಂಕೇತವಾಗಿಸಿಕೊಂಡು ಆ ಪ್ರದೇಶಗಳನ್ನು ವರ್ಣಿಸುತ್ತಾ ಅದರೊಂದಿಗೆ ಶೋಷಿತರ ಬದುಕಿನ ಸೃಷ್ಟಿಕ್ರಿಯೆಗಳನ್ನು ಚಿತ್ರಿಸುತ್ತಾರೆ. ಸಂವೇದನಾಶೀಲ ಬರಹಗಾರರಾದ ದಲಿತ ಬಂಡಾಯ ಕಾದಂಬರಿಕಾರರು ತಾನಾಡಿ ಬೆಳೆದು ಬಂದ ಸಮುದಾಯ ಮತ್ತು ಸಂಸ್ಕೃತಿಗಳೊಂದಿಗೆ ತನ್ನನ್ನು ಗುರುತಿಸಿಕೊಳ್ಳುವುದರೊಂದಿಗೆ ಅವುಗಳ ಜೀವನ ಹಾಗೂ ಅರ್ಥಪೂರ್ಣ ನೆಲೆಗಳನ್ನು ಹಿಡಿದು ಸಮಕಾಲೀನ ತುರ್ತುಗಳಿಗೆ ಹೊಸ ಅರ್ಥದಲ್ಲಿ ಮುಖಾಮುಖಿಯಾಗಿಸುತ್ತಾರೆ.

ಮರಣ ಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿ ಬರುವ ಪ್ರಾಕೃತಿಕ ಪರಿಸರದ ಊರಾದ ಕಾಡೂರು. ಆ ಹೆಸರೇ ಸೂಚಿಸುವಂತೆ ಮನುಷ್ಯನ ಕಾಡಿನ ಬದುಕನ್ನು, ಆಧುನಿಕತೆ ಬಂದರೂ ಯಾವ ಹಂತದ ಬದಲಾವಣೆಯೂ ಇಲ್ಲದ ವ್ಯವಸ್ಥೆಯ ಕ್ರೂರತೆಯನ್ನು ಹೇಳಿದರೆ, ಮತ್ತೊಂದು ಅರ್ಥದಲ್ಲಿ ಸ್ವಾತಂತ್ರ್ಯದ ನಂತರದ ದಾರಿದ್ರ್ಯವನ್ನು ಪ್ರತಿಬಿಂಬಿಸುತ್ತದೆ. ಕಾದಂಬರಿಕಾರರು ಬರೆಯುವಂತೆ

"ಕಾಡೂರು ಅಂದರೆ ಕಾಡೂರು. ಈಚೀಚಲಾಗಿ ಇಲ್ಲುಗಾ ಒಂದು ಜರ್ನಲ್ ಬಸ್ ಅಂಬುದು ಬರುತಾವೋಗುತಾವುಂಟು. ವಾರಕೊಂಜಿನಾ ದೂರದೂರಿನ ಸಂತೆಗೆ ಜನರೋಗುತಾ ಬರುತಾ ನಡೆದಿತ್ತು. ವರುಸಕ್ಕೊಂದು ಸಲ ಜಾತ್ರೆಗಾಗಿ ಮಿಸಲಿದ್ದ ಮಾಳದಲ್ಲಿ ಜಾತ್ರೆಯು ಪೂರ್ವಕಾಲದಿಂದಲೂ ನಡೆದು ಇಂದಿಗೂ ಬಂದಿರಬಹುದು. ಕಾಡೂರ ಒಡಲಲ್ಲಿ ಅನೇಕ ದಂತಕಥಾ ವೃತ್ತಾಂತಗಳು ಆವಿತಿದ್ದು ಜನರ ಬಾಯಲಿ ಪ್ರಚಲಿತಕೆ ಬಂದಿದ್ದೊ. ಕಥಾಲೋಕದ ರಾಜಕೀಯವು ಅಲ್ಲಿಲ್ಲದ ಪ್ರಯುಕ್ತವಾಗಿ ಯಾವ ಸೆನ್ಸಾರಿಗರ ಮಾಯದ ಕತ್ತರಿಗೂ ಸಿಲುಕದೆ ಹಳ್ಳಿಗಾಡಿನ ಆ ಕಥೆಯು ಜಾನಪದ ವೇದರೂಪದಲ್ಲಿ ಆ ಕಗ್ಗಾಡಿನ ಜನರ ಎದೆಗಳಲ್ಲಿ ಮಲುಗಿತ್ತು. ಅದಾದರೂ ಸುಮ್ಮಾನೆ ಮಲುಗಿರದೆ ಮುಲಮುಲ ಅಂತ ಜೀವನ ಕೊರೆದು ಕಿವಿಯಿಂದ ಕಿವಿಗೆ ದಾಟಿ ಹಿಂದಲ ತಲಮಾರುಗಳಿಂದ ಈಗಲ ತರಮಾರುಗೂ ತಲುಪಿ ಜೀವದಿಂದ ಜೀವಕ್ಕೆ ನಡೆದಾಡುತಲಿಹುದು. ಆ ಪೂರ್ವಿಕರ ಪೂರ್ವಕಲಾದಿಂದಲೂ ನಡೆದು ಬಂದಿರಾ ಈ ಜೀವನ ಕ್ರಮದಲ್ಲಿ ಜಾತ್ರಾ ಹಿಂದಲ ಆ ಪುರಾತನ ಕತಾವು ಈ ನೆಲದ ಬದುಕಿನ ಕರುಳಬಳ್ಳಿ ಸಂಬಂದ್ಗಳ ಇರಿಸಿಕೊಂಡಿದೆ".[೯೯]

ಈ ಪ್ರದೇಶ ತನ್ನ ಒಡಲಲ್ಲಿ ಚರಾಚರ ವಸ್ತುಗಳನ್ನು ಗರ್ಭೀಕರಿಸಿಕೊಂಡಿರುವುದರಿಂದಲೇ ಪ್ರಕೃತಿಯ ಸಹಜ ಕ್ರಿಯೆಯ ಮನುಷ್ಯನ ಸಂಬಂಧವನ್ನು ಕಾಡೂರಿನೊಂದಿಗೆ ನಿಕಟ ಸಂಬಂಧವನ್ನಿರಿಸಿ ಕೊಂಡಿದೆ. ಪ್ರಕೃತಿಯ ಸ್ವಾಭಾವ ಹಾಗೂ ನಿಸರ್ಗ ಸಹಜ ಗುಣಗಳು. ಈ ಸಹಜ ಗುಣಗಳೊಂದಿಗೆ ಮನುಷ್ಯ ಸ್ವಭಾವಗಳನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಮನುಷ್ಯ ಪ್ರಕೃತಿಯ ಸೃಷ್ಟಿ ಎಂದಾದರೆ, ಮನುಷ್ಯನೂ ಪ್ರಕೃತಿ ಸಹಜ ಗುಣಗಳನ್ನು ಪಡೆದಿರುತ್ತಾನೆ. ಮನುಷ್ಯನ ಸಹಜ ಗುಣವೆಂದರೆ ಅವನ ಸ್ವಭಾವ. ಈ ಸ್ವಭಾವ ಅನೇಕ ಸ್ಥರಗಳಲ್ಲಿ ಪ್ರಕಟಗೊಳ್ಳುತ್ತದೆ. ಮನುಷ್ಯನ ಸ್ವಭಾವ ಎರಡೂ

ಬಗೆಯಲ್ಲಿ ಕ್ರಿಯಾಶೀಲಗೊಳ್ಳುತ್ತದೆ. ಒಂದು ಆಂತರಿಕ ಸ್ವಭಾವ ಮತ್ತೊಂದು ಬಾಹ್ಯ ಸ್ವಭಾವವಾಗಿರುತ್ತದೆ. ಇದನ್ನೇ ಮತ್ತೊಂದು ರೀತಿಯಲ್ಲಿ ಹೇಳುವುದಾದರೆ, ಆತನ ಭಾವ ಪ್ರಪಂಚ, ಬಾಹ್ಯಪ್ರಪಂಚ. ಈ ಎರಡು ಸಂಕೀರ್ಣತೆಗಳೊಂದಿಗೆ ವರ್ತಿಸುವ ಮನುಷ್ಯನ ಕ್ರಿಯೆಗಳೇ ಸಂಸ್ಕೃತಿಗಳೆನಿಸಿಕೊಳ್ಳುತ್ತವೆ.

ಇಂಥ ಮನುಷ್ಯರ ಮನೋಲಹರಿ ಪ್ರವಹಿಸುವುದನ್ನು ಕಾಡೂರು ಕಟ್ಟಿಕೊಡುತ್ತದೆ. ಪ್ರಕೃತಿ ಮನುಷ್ಯನನ್ನು ಪೋಷಿಸಿದರೆ, ಸಂಸ್ಕೃತಿ ಅವನ ಪ್ರಜ್ಞೆಯ ಸ್ಥರವನ್ನು ವಿಸ್ತರಿಸುತ್ತದೆ. ಹಾಗಾಗಿ ಕಾದಂಬರಿಕಾರರು ಮನುಷ್ಯನ ಪ್ರಜ್ಞೆಯ ಸ್ತರದ ಒಳನೋಟಗಳನ್ನು ಗುರುತಿಸುವ ಹಿನ್ನೆಲೆಯಲ್ಲಿ ಪ್ರಾದೇಶಿಕತೆಯನ್ನು ಸಂಕೇತವಾಗಿಟ್ಟುಕೊಂಡು ವರ್ಣಿಸುತ್ತಾರೆ. ಮನಜ ಅವರ 'ಮಾಗಿ' ಕಾಂದಬರಿಯನ್ನು ಉದಾಹರಣೆಯಾಗಿ ಇಲ್ಲಿ ಹೇಳಬಹುದು. 'ಮಾಗಿ' ಕಾದಂಬರಿಯಲ್ಲಿ ಬರುವ 'ಆನಂದಪುರ' ಹಾಗೂ 'ಪಾಂಡವಪುರ'(ಕುಂತಿಬೆಟ್ಟ) ಎಂಬೆರಡು ಊರು. ಈ ಹೆಸರುಗಳೇ ಸೂಚಿಸುವಂತೆ, ಮನುಷ್ಯನ ಸುಖ ದುಃಖಗಳನ್ನು ತಿಳಿಸುತ್ತದೆ. ಆನಂದಪುರ ದಲಿತವರ್ಗದ ಯಜಮಾನ್ ದಾಸಪ್ಪನ ನಾಯಕತ್ವದಲ್ಲಿ ವೈಭವಯುತವಾಗಿ ಮೆರೆದಿರುತ್ತದೆ. ದಾಸಪ್ಪನು ದೇಹ ಸೌಷ್ಠ್ಯವುಳ್ಳ ಪೈಲ್ವಾನ್ ಆಗಿದ್ದ. ಹಾಗಾಗಿ ಮೈಸೂರು ಸಂಸ್ಥಾನದಲ್ಲಿ ಸನ್ಮಾನಗಳನ್ನು ಸ್ವೀಕರಿಸಿದ್ದ. ಹೀಗೆ ತನ್ನ ಪ್ರಕೃತಿ ಸಹಜ ಗುಣಗಳಿಂದ ವ್ಯಕ್ತಿತ್ವ ರೂಪಿಸಿಕೊಂಡಂತೆ, ಆರ್ಥಿಕವಾಗಿಯೂ ಪ್ರಬಲವಾಗಿ, ಜನರ ಕಷ್ಟ ಸುಖಗಳಿಗೆ ಸ್ಪಂದಿಸುತ್ತಿರುತ್ತಾನೆ. ಈ ಎಲ್ಲಾ ಕಾರಣಗಳಿಂದ ಆನಂದಪುರ ಸಮೃದ್ಧಿಗೊಂಡಿದ್ದನ್ನು ಕಾದಂಬರಿಕಾರರು ವರ್ಣಿಸುತ್ತಾರೆ. ಆನಂದಪುರ ಸಮೃದ್ಧಿಯನ್ನು ಕಟ್ಟಿಕೊಟ್ಟರೆ, ಪಾಂಡವಪುರ ಕಷ್ಟದ ದಿನಗಳನ್ನು ನೆನಪಿಸುತ್ತದೆ. ಕಾದಂಬರಿಕಾರ ನಿರೂಪಿಸುವಂತೆ,

"ಪಾಂಡುಪುರದಿಂದ ಸುಮಾರು ಆರು ಮೈಲು ದೂರದಲ್ಲಿ ಕರಿಯಕಲ್ಲು ಗುಡ್ಡವಿದೆ. ಅದನ್ನು ಕುಂತಿಬೆಟ್ಟ ಎನ್ನುವರು. ಪ್ರತಿವರ್ಷವೂ ಅಲ್ಲಿ ಕುಂತಿ ಜಾತ್ರೆ ನಡೆಯುವುದುಂಟು. ಆ ಬೆಟ್ಟದ ಬಗ್ಗೆ ಆ ಸುತ್ತಲ ಜನರಲ್ಲಿ ಒಂದು ದಂತ ಕಥೆ ಪ್ರತೀತಿಯಿದೆ. ಮಹಾಭಾರತದ ಕುಂತಮ್ಮ ಮತ್ತು ಅವಳ ಐದು ಜನ ಮಕ್ಕಳು ತಮ್ಮ ವನವಾಸದ ಕಾಲದಲ್ಲಿ ಅಲ್ಲಿಗೆ ಬಂದು ಕೆಲಕಾಲ ತಂಗಿದ್ದರಂತೆ. ಆದ್ದರಿಂದಲೇ ಅದನ್ನು ಕುಂತಿಬೆಟ್ಟ ಎನ್ನುವರು. ಆ ದಂತ ಕಥೆಯ ಅಂಗವೇ ಈ ಪಾಂಡವಪುರ ಎನ್ನುವ ಹೆಸರು ಕೂಡ ಎನ್ನುತ್ತಾರೆ. ಅದರ ಎಡಗುಡ್ಡದ ತುದಿಯ ಮೇಲೆ ಒಂದು ದೊಡ್ಡ ಒನಕೆ ನೆಟ್ಟಿದೆ. ಅದು ಭೀಮಸೇನ ಕುಟ್ಟುತ್ತಿದ್ದ ಒನಕೆಯಂತಲೂ ಭಯಭಕ್ತಿಯಿಂದ, ಹೆಂಗಸರು, ಗಂಡಸರೆಲ್ಲಾ ಅದಕ್ಕೆ ಹಾಸಿ ಹಾಸಿ ಅಡ್ಡ ಬೀಳುವರು. ಈ ಎರಡು ಬೆಟ್ಟಗಳ ನಡುವೆ ಒಂದು ದೊಡ್ಡ ಕೊಳವಿದೆ. ಕೊಳದ ಪಕ್ಕದಲ್ಲಿ ಒಂದು ಡೊಳ್ಳೊಟ್ಟೆಯ ಕಲ್ಲಿನ ಗಣಪತಿ ವಿಗ್ರಹವುಂಟು. ವಿಹಾರಾರ್ಥವಾಗಿ ಬರುವ ಜನ ವಿರಮಿಸಿಕೊಳ್ಳುವ ತಂಪಾದ ಬಯಲು ಅದು. ದನ, ಎಮ್ಮೆ, ಆಡು,

ಕುರಿ ಮೇಯಿಸಲು ಬರುವ ಗಂಡೈಕಳು ಈಜಾಡುವುದು, ತೊಪ್ಪೇ ಮಂಕ್ರಿ ಐಕಳೆಲ್ಲಾ ಆಟ ಆಡುವ ಅಗಲವಾದ ಕಲ್ಲಿನ ಕಿಂಡಿಗಳೂ ಅಲ್ಲೇ, ಪಕ್ಕದಲ್ಲೇ ಇವೆ''.[೧೦೦]

ಕಾದಂಬರಿಯ ಕೇಂದ್ರ ಪಾತ್ರವಾದ ಮಾಗವ್ವ ಈ ಎರಡೂ ಸ್ಥಿತಿಗಳಲ್ಲಿ ಬದುಕನ್ನು ಅನುಭವಿಸಿದವಳು. ಆನಂದಪುರದಲ್ಲಿ ದಾಸಪ್ಪನ ಸೊಸೆಯಾಗಿ ಗುರುತಿಸಿಕೊಂಡರೆ, ನಂತರದ ದಿನಗಳಲ್ಲಿ ಪಾಂಡವಪುರದಲ್ಲಿ ಎಲೆಕಟ್ಟಿ ವ್ಯಾಪರಸ್ಥಳಾಗಿ ಗುರುತಿಸಲ್ಪಡುತ್ತಾಳೆ. ಈ ವೈರುಧ್ಯಗಳೊಂದಿಗೆ ಮಾಗಿಯ ಸಹಜ ಪ್ರಕೃತಿಯ ಭಾವ ಪ್ರಪಂಚ, ಬಾಹ್ಯ ಪ್ರಪಂಚವನ್ನು ಕಾದಂಬರಿಕಾರರು ಎರಡೂ ಪ್ರಾದೇಶಿಕ ಸಂಕೇತದೊಂದಿಗೆ ಚಿತ್ರಿಸುತ್ತಾರೆ. ಇದನ್ನು ಸ್ಪಷ್ಟವಾಗಿ ಗುರುತಿಸಬಹುದಾದರೆ ಕಾದಂಬರಿಯ ಅಂತ್ಯದಲ್ಲಿ ''ದಾಸಪ್ಪನವರು ಕಳೆದು ಕೊಂಡಿದ್ದ ಅಕ್ಷರಗಳು ವಸಂತನ ಅಂತರಾಳದಿಂದ ಮೂಡಿದಂತೆ ತೆಂಗಿನ ಸಸಿಗಳು ಗರಿಯೊಡೆದಿದ್ದವು''[೧೦೧] ಎನ್ನುವದು ಹೊಸ ಬದುಕಿನ ಆಶಯ ವ್ಯಕ್ತವಾಗುತ್ತದೆ.

ಕಾದಂಬರಿಕಾರರು ಪ್ರಕೃತಿ ಹಾಗೂ ಮನುಷ್ಯರ ಸಂಬಂಧವನ್ನು ಏರ್ಪಡಿಸಲು ಕಾದಂಬರಿಯ ಶಿರೋನಾಮೆಯೇ ಪ್ರಕೃತಿಯ ಸಂಕೇತವಾಗಿಸುತ್ತಾರೆ. 'ಮಾಗಿ' ಮತ್ತು 'ವಸಂತ' ನಾಮಪದಗಳ ಬರಿಯ ಉಚ್ಚಾರ ಮಾತ್ರದಿಂದಲೇ ಇಡೀ ಋತುಚಕ್ರವೇ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಈ ಋತು ಚಕ್ರವೆಂಬುದು ಕಾಲದ ಅಥವಾ ಬದಲಾವಣೆಯ ಸಂಕೇತವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಋತು ಚಕ್ರದಲ್ಲಿ ತುಂಬಾ ಕಷ್ಟಕರವಾದುದು ಮಾಗಿ ಕಾಲ. ಆನಂತರ ಬರುವುದೇ ಸಮೃದ್ಧಿ ಸಂಕೇತದ ವಸತಂಕಾಲ ಎಂಬಲ್ಲಿ ಮಾಗವ್ವಳ ಪ್ರಕೃತಿಯನ್ನು ಅರ್ಥೈಸಬಹುದು. ಅವಳ ಅಂತರ್ಮುಖಿ ಬಹಿರ್ಮುಖಿಯಾಗಿ ವಿಕೃತಗೊಳ್ಳದೇ ಸಹಜ ಸ್ಥಿತಿಯನ್ನು ಕಾಯ್ದುಕೊಳ್ಳುತ್ತಾಳೆ. ಹೀಗಾಗಿ ಗಿರಿಯಪ್ಪನೊಂದಿಗೆ ವಿವಾಹ ಸಂಬಂಧ ಹೊಂದಿದ ನಂತರ ಪಡಬಾರದ ಕಷ್ಟಗಳನ್ನು ಪಡುತ್ತಾಳೆ. ಹೀಗಾಗಿ ಪ್ರೊ. ಸುಜನಾ ಅವರು ಮಾಗವ್ವಳನ್ನು ಪ್ರಾಕೃತ ಸಹಜ ಗುಣಗಳಿಗೆ ಹೋಲಿಸಿ ಹೀಗೆ ಹೇಳುತ್ತಾರೆ.

''ಯಾವುದಕ್ಕೂ ಸೊಪ್ಪು ಹಾಕದೇ ಕಂಕುಳಲ್ಲಿ ಎಲೆಯ ಕುಕ್ಕೆ ಹೊತ್ತು ಕೈಬೀಸುತ್ತಾ, ದಾಪುಗಾಲಿಡುತ್ತಾ ಹೋಗುವ ಅವಳ ಗಾಳಿ ನಡೆಯು ನಡೆ. ಪಶ್ಚಿಮ ಘಟ್ಟದ ನದೀ ಪಾತ್ರದ ಹೆಬ್ಬಂಡೆಯೊಂದು ಎಂಥ ಪ್ರವಾಹಕ್ಕೂ ಕೊಚ್ಚಿ ಹೋಗದೆ ರೂಪಗೊಳ್ಳುತ್ತ ನಯಗೊಳ್ಳುವ ಮಾಟವಿದೆ ಇಲ್ಲಿ. ಅವಳು ಪಟ್ಟ ಪಾಡಿಗೆ ಅವಳ ತಳಮನಸ್ಸಿನ ಹೊಂಗನಸು ಆಕೆಯ ಮಗ ವಸಂತನಲ್ಲಿ ಚಿಗುರೊಡೆಯುತ್ತದೆ. ಮಾಗಿಯ ಪ್ರಾಕೃತಿಕ ಸಾಹಸದಲ್ಲಿ ವರಹ ಸಾಹಸವಿದೆ. ಇಡೀ ದಲಿತ ವರ್ಗದ ಉದ್ಧಾರದ ಶ್ರಮ ಶಕ್ತಿಯ ರೀತಿಗೆ ಇದು ಪ್ರತೀಕವಾಗಿದೆ''[೧೦೨] ಎನ್ನುವಲ್ಲಿ ಅವಳ ಸ್ವಾಭಾವವು ಪ್ರಾಕೃತಿಕ ಸಹಜ

ಗುಣಗಳಾಗಿವೆ ಎಂಬುದೇ ಇಲ್ಲಿಯ ಕಲಾವಂತಿಕೆ. ಇಂಥ ಪ್ರಾಕೃತಿಕ ಪರಿಸರವನ್ನು "ಕುವೆಂಪು ಅವರು 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಕಾನೂರು, ಕೆಳಕಾನೂರು, ಸೀತೆಮನೆ, ನೆಲ್ಲುಹಳ್ಳಿ, ಮುತ್ತಹಳ್ಳಿ ಈ ಗ್ರಾಮಗಳನ್ನು ಕೇಂದ್ರವಾಗಿಟ್ಟುಕೊಂಡು ಒಂದು ಕಾಲದ ಮಲೆನಾಡಿನ ಪ್ರಾಕೃತಿಕ ಕೌಟಂಬಿಕ ಮತ್ತು ಗ್ರಾಮ ಜೀವನದ ದೊಡ್ಡ ಪ್ರಪಂಚವನ್ನೇ ತೆರೆದು ತೋರಿಸುತ್ತಾರೆ".[೧೦೩]

ದಲಿತ ಬಂಡಾಯ ಕಾದಂಬರಿಕಾರರು ಇಂಥ ಪ್ರಯತ್ನ ಮಾಡಿದರಾದರೂ ಇವರ ಉದ್ದೇಶ(ಪ್ರಕೃತಿ) ಪ್ರದೇಶಗಳನ್ನು ವರ್ಣಿಸುವುದಕ್ಕೆ ಆಗಿರುವುದಿಲ್ಲ. ಬದಲಾಗಿ ಇಂಥ ಪ್ರದೇಶಗಳಲ್ಲಿ ಪರಂಪರಾಗತವಾಗಿ ಉಳಿದುಕೊಂಡು ಬಂದಿರುವ ಯಜಮಾನ ಸಂಸ್ಕೃತಿಯ ಮೂಲಕ ಆಳವಾಗಿ ಬೇರು ಬಿಟ್ಟಿರುವ ಸಾಮಾಜಿಕ ಅಸಮಾನತೆಗಳನ್ನು ಮನಸ್ಸಿನ ಆಳದಿಂದ ಕಿತ್ತೊಗೆಯಬೇಕೆಂಬ ಹಂಬಲವುಳ್ಳದ್ದಾಗಿದೆ. ಇದರಿಂದಾಗಿ ಕೆಳಸಂಸ್ಕೃತಿಗಳ ಅಸ್ತಿತ್ವವನ್ನು ಭದ್ರಗೊಳಿಸುವುದರ ಮೂಲಕ ಸಾಮಾಜಿಕ ಸ್ಥಿರತೆಯನ್ನು ಕಾಯ್ದುಕೊಳ್ಳುವುದೂ ಆಗಿದೆ. ಪ್ರಕೃತಿಯ ವೈಪರೀತ್ಯಗಳಿಂದಾದ ಮನುಷ್ಯನನ್ನು ಚಿತ್ರಿತಗೊಳಿಸುವುದೂ ಆಗಿದೆ. ಆ ಮೂಲಕ ವ್ಯವಸ್ಥೆಯ ದೌರ್ಬಲ್ಯತೆಯನ್ನು ತೋರಿಸುತ್ತವೆ. "ಲೋಕ ವಿಕೃತಿ ಎಂದು ತಿಳಿದುಕೊಂಡಿರುವ ಕೀಳುಜಾತಿ, ಬಡತನ, ಅಂಗವಿಕಲತೆ, ಕಪ್ಪುಬಣ್ಣ, ದೇಶೀ ಭಾಷೆ ಇವುಗಳು ಗಾಢವಾದ ಅನುಭವದೊಂದಿಗೆ ಸಾಹಿತ್ಯ ಕೃತಿಯಲ್ಲಿ ಬರಬೇಕು ಹಾಗೂ ಅಂಥದು ತಲತಲಾಂತರದಿಂದ ಓದುಗರ ಮನಸ್ಸಿನಲ್ಲಿ ನಾಟಿರುವ ಸೌಂದರ್ಯದ ಬಗೆಗಿನ ತಿಳುವಳಿಕೆಯನ್ನು ಅಲ್ಲಾಡಿಸುವಂತ ಕೆಲಸ ಮಾಡಬೇಕಲ್ಲದೆ ಹೊಸರೀತಿಯ ಸೌಂದರ್ಯ ಮತ್ತು ಸಹಾನುಭೂತಿಯನ್ನು ಓದುಗರೆದೆಯಲ್ಲಿ ಬೇರೂರುವಂತೆ ಮಾಡಬೇಕಾಗುತ್ತದೆ. ಆಗ ಅಂತರಾಳದಲ್ಲಾದ ಬದಲಾವಣೆ ಸಾಮಾಜೀಕರಣ ವಾಗುವುದು".[೧೦೪]

ಹಾಗಾಗಿ ಈ ಪಂಥದ ಲೇಖಕರು ಕೆಳವರ್ಗಗಳ ಪ್ರಾಕೃತಿಕ ಪರಿಸರದ ಸಾಂಸ್ಕೃತಿಕ ಜೀವನದ ಅಂಗಗಳಾದ ಸಂಪ್ರದಾಯ, ಮದುವೆ ಹಬ್ಬ ಹರಿದಿನ, ಉತ್ಸವ, ನಂಬಿಕೆ ಮುಂತಾದವುಗಳು ಎಷ್ಟೇ ಕ್ಷುದ್ರವಾದ ವಿಷಯವಾದರೂ ಅದನ್ನು ಸಂಪೂರ್ಣ ವಿವರಣೆಗಳೊಡನೆ ಪರಿಗ್ರಹಿಸುತ್ತಾರೆ. ಶ್ರಮ ಸಂಸ್ಕೃತಿಯ ಸಮೃದ್ಧ ನೆಲೆಗಳಾದ ಇಂಥ ಪಾಕೃತಿಕ ಹಾಗೂ ಸಾಂಪ್ರದಾಯಿಕ ಸಂಗತಿಗಳು ಸ್ವತಂತ್ರ ಹಾಗೂ ಸ್ವಾಭಿಮಾನಿ ಸಂಸ್ಕೃತಿಯ ಸಶಕ್ತ ಪ್ರತೀಕಗಳಾಗಿವೆ. ಜೈವಿಕ ಎನ್ನಬಹುದಾದ ನೆಲದೊಡಲಿನಿಂದ ಪರಿಪೂರ್ಣ ವ್ಯಕ್ತಿತ್ವದೊಂದಿಗೆ ಪರಂಪರೆಯ ನೆಲೆಗಳನ್ನು ಮೀರುವ ಮತ್ತು ಎಲ್ಲ ಅಂತಃಸತ್ವ ಗಳೊಡನೆ ಬೆಳೆಯುವ ಇಲ್ಲಿನ ಪಾತ್ರಗಳಿಗೆ ಸಾಂಸ್ಕೃತಿಕ ಜವಾಬ್ದಾರಿಯಿದೆ. "ಮುದಾಮ್ ಬೋವರಿಯಲ್ಲಿ ಚಾರ್ಲ್ಸ್‌ನ ವ್ಯಕ್ತಿತ್ವವನ್ನು ಅವನ ಟೊಪ್ಪಿಗೆಯ"[೧೦೫] ವರ್ಣನೆಯ ಮೂಲಕ ತೋರುವ ರೀತಿಯಲ್ಲೇ ದಲಿತ ಬಂಡಾಯಕಾರರು ಕೆಳವರ್ಗದವರ ವೈಯಕ್ತಿಕ ವರ್ಣನೆ ಹಾಗೂ ಸಂಸ್ಕೃತಿಯ ವಿವಿಧ

ಆಯಾಮಗಳನ್ನು ತೆರೆದು ತೋರಿಸುತ್ತಾರೆ. ಪರ್ರ್ಯಾನ ದೈಹಿಕ ಸ್ಥಿತಿಯನ್ನು ದೇವನೂರರು ಕುಸುಮ ಬಾಲೆ ಕಾದಂಬರಿಯಲ್ಲಿ ಹೀಗೆ ವರ್ಣಿಸುತ್ತಾರೆ.

"ಪರ್ರ್ಯಾದನು, ಏಳ್ಜನ ಗಂಡು ಮಕ್ಕಳ ಮ್ಯಾಲ ಒಬ್ಬಳು ಮಗಳಾಗಿ ಕುಸುಮಳು ಹುಟ್ಟಿ ಇನ್ನೂ ಮಕ್ಕ ಮರಿ ಸಾಕು ಎಂದಿರುವಾಗ ಅರಿವುಗಬಾರದೆ ಹುಟ್ಟಿ ಬುಟ್ಟಿದ್ದನು. ಚೂಜಿ ಮದ್ದುಗೆಲ್ಲ ಜಗ್ಗದೆ ಗೆದ್ದು ಹುಟ್ಟಿ ಬಂದ ಪರ್ರ್ಯಾದನ ಬೆಪ್ಪು ಮತ್ತು ಅವನ ಜೊಲ್ಲು ಅವನು ಬೆಳೆದಂತೆಲ್ಲಾ ಅವೂ ಬೆಳೀತಾ ಯಕಾರು ಹುಟ್ಟಿದನೋ ಅನ್ನುಸ್ತ ಹುಟ್ಯಾಗಿತ್ತು".[೧೧೬] ದೇವನೂರು ಅವರು ಒಡಲಾಳದಲ್ಲಿ ಗೌರಮ್ಮನ ರೋಗಿಷ್ಟ ಮಗನನ್ನೂ ದುಷ್ಟ ಕಮಿಷನರ್ ಎಂದು ವರ್ಣಿಸುತ್ತಾರೆ. ಇಂಥ ವರ್ಣನೆಯ ಮೂಲಕ ಮಾನವೀಯ ಅರ್ಥಗಳನ್ನು ಕಾಣಿಸುತ್ತಾರೆ. ಕುವೆಂಪು ಅವರು ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ವಾಸುವಿನ ಜೇಬಿನ ವರ್ಣನೆಯನ್ನು ಮಾಡುತ್ತಾರೆ. ಈ ಹಿನ್ನೆಲೆಯಲ್ಲಿ ಪರ್ರ್ಯಾನಂಥವರ ವ್ಯಕ್ತಿತ್ವ ಹವ್ಯಾಸ, ಅವನ ಚಟುವಟಿಕೆಗಳು ಎಲ್ಲದರ ಅದ್ಭುತ ಪರಿಚಯವನ್ನು ಈ ವರ್ಣನೆ ಮಾಡಿಕೊಡುತ್ತದೆ. ವ್ಯಕ್ತಿಗತವಾಗಿ ಈ ರೀತಿಯ ವರ್ಣನೆ ಪ್ರಕೃತಿ ವಿಘಟನೆಯು ಒಂದು ಬಗೆಯದಾದರೆ ದೇಹಸೌಷ್ಟತೆಯುಳ್ಳವರನ್ನು ವರ್ಣಿಸುವುದು ಮತ್ತೊಂದು ಬಗೆ. ಹೀಗೆ ವರ್ಣಿಸುವಲ್ಲಿ ಪ್ರಕೃತಿಯ ಭಿನ್ನರೂಪಗಳನ್ನು ಅರಿಯಲು ಸಹಕಾರಿಯಾಗುತ್ತದೆ.

ದಲಿತ ಬಂಡಾಯ ಕಾದಂಬರಿಗಳಲ್ಲಿ ಈ ರೀತಿಯ ವರ್ಣನೆಗಳು ವಿಪುಲವಾಗಿ ಕಾಣಸಿಗುತ್ತವೆ. ಕುಂ.ವೀ.ಯವರ ಕಪ್ಪುವಿನಲ್ಲಿ ಪರುಷ್ಯ, ಚಂಬಸ್ಯ, ಸೂರ್ಯದಲ್ಲಿ ಜೀತ ಕರಿಯ, ಮರಣ ಮಂಡಲ ಮಧ್ಯದೊಳಗೆ ಬಸುರಾಜು, ಕುಸುಮಬಾಲೆಯಲ್ಲಿ ಅಮಾಸ, ಮಾಗಿಯಲ್ಲಿ ದಾಸಪ್ಪ, ಗಾಡಿಪಾಪ, ಕಾರ್ಯದಲ್ಲಿ ಘಟೇಗಾರ ಮಲ್ಲಪ್ಪ ಮುಂತಾದವರು. ಇವರೆಲ್ಲಾ ಕಟ್ಟುಮಸ್ತಾದ ವ್ಯಕ್ತಿಗಳು. ಸ್ವಾಭಾವಿಕವಾಗಿ ಬೆಳೆದ ದೇಹವು ಕೆಳವರ್ಗದ ಪ್ರತಿನಿಧಿಯಾಗಿ ಗುರುತಿಸಲ್ಪಡುತ್ತಾರೆ. ಆ ಮೂಲಕ ವ್ಯವಸ್ಥೆಯ ಕ್ರೂರತನವನ್ನು ಪ್ರತಿರೋಧಿಸುವ ಶಕ್ತಿಯೂ ಅಡಗಿರುತ್ತದೆ. ಇಂಥ ಶರೀರ ಹೊಂದಿದ ಪಾತ್ರಗಳು ಕಾದಂಬರಿಗಳಲ್ಲಿ ಭಿನ್ನರೂಪದಲ್ಲಿ ಪ್ರತಿಭಟನೆಯ ಧೋರಣೆ ತಾಳುವುದನ್ನು ಹಿಂದೆ ಗಮನಿಸಿದೆ. ಇಲ್ಲಿ ನಿದರ್ಶನಕ್ಕಾಗಿ ಕಪ್ಪು ಕಾದಂಬರಿಯ ಮಸೂರಿನ ಸಣ್ಣುದ್ರ ಚಂಬಸ್ಯನ ಕಟುಮಸ್ತಾದ ದೇಹವನ್ನು ನೋಡಿ ಅಳುಕುವುದನ್ನು ಕಾದಂಬರಿಕಾರರು ಹೀಗೆ ನಿರೂಪಿಸುತ್ತಾರೆ.

"ಚಂಬಸ್ಯನಂಥ ಗಟ್ಟಿಮುಟ್ಟಾದ ಆಳು ಪ್ರೀತಿ ವಿಶ್ವಾಸ ತೋರಿಸಿದರೆ ನಾಯಿಗಿಂತಲೂ ವಿಧೇಯತೆ ತೋರಬಹುದು. ಅವನನ್ನು ಕೆರಳಿಸಿದರೆ ತನ್ನ ಜೇಬಿನಲ್ಲಿರುವ ಪಿಸ್ತೂಲಿಗಿಂತ ಮಾರಕವಾಗಬಹುದು ಎಂದು ಸಣ್ಣುದ್ರ ಮನಸ್ಸಿನಲ್ಲೇ ಗುಣಕಾರ, ಭಾಗಕಾರ ಮಾಡುತ್ತಿದ್ದನು" ಎಂಬುದು ಕೆಳವರ್ಗಗಳ ಎಚ್ಚರದ ಪ್ರತೀಕವಾಗಿದೆ. ಇದರಿಂದಾಗಿಯೇ ಆರ್ಥಿಕವಾಗಿ ದುರ್ಬಲವಾದ ಕೆಳವರ್ಗ ದೈಹಿಕವಾಗಿ

ಸದೃಢ ಹೊಂದಿರುತ್ತದೆ. ಮನುಷ್ಯನ ಪ್ರಕೃತಿಯ ಗುಣಗಳಾದ ಕಾಮ ಮತ್ತು ದೈಹಿಕ ಬೆಳವಣಿಗೆಗಳು ಆತನ ಅಸ್ತಿತ್ವವನ್ನು ಪ್ರತಿಪಾದಿಸುವ ಅಂಶಗಳಾಗಿವೆ. ಕಾಮ ನೈಸರ್ಗಿಕ ಕ್ರಿಯೆ. "ಯೌವನಕ್ಕೆ ಕಾಲಿಡುತ್ತಿದ್ದಂತೆ ಕಾಮದ ಬಗೆಗೆ ಏನೆಲ್ಲ ಆಸೆಗಳು, ಭ್ರಮೆಗಳು ಚಿಗಿತುಕೊಳ್ಳುತ್ತವೆ. ತಡಕೊಳ್ಳಲಾರದಷ್ಟು ಉದ್ವೇಗ ಉನ್ಮಾದಗಳಲ್ಲಿ ಒದ್ದಾಡುತ್ತಿರುತ್ತಾರೆ. ಆದರಲ್ಲೂ ಭಾರತೀಯ ಸಮಾಜದ ಸಂದರ್ಭದಲ್ಲಿ ಸಂಪೂರ್ಣವಾಗಿ ವಿಸ್ತಾರವಾಗುವ ಸಾಧ್ಯತೆಯೂ ಇಲ್ಲ ಅದರೂ ಉಕ್ಕಿ ಹರಿಯುವ ಕಾಮವನ್ನು ಅದಮಿಡಲೂ ಆಗುವುದಿಲ್ಲ. ಅದುಮಿಟ್ಟಂತೆಲ್ಲ ಮತ್ತಷ್ಟು ಪುಟಿಯುತ್ತದೆ".[೧೦೭] ಹಾಗಾಗಿ ದಲಿತ ಬಂಡಾಯ ಕಾದಂಬರಿಗಳು ಸೃಷ್ಟಿಶಕ್ತಿಯುಳ್ಳ ಕಾಮವನ್ನು ಸಹಜ ಕ್ರಿಯೆ ಎಂದು ಗ್ರಹಿಸುತ್ತವೆ. ಆ ಮೂಲಕ ಪರ್ಯಾಯ ಅಸ್ತಿತ್ವವನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತವೆ. ಮೇಲುವರ್ಗ ಕಾಮವನ್ನು ಪ್ರತಿಷ್ಠೆಯ ವಿಷಯವನ್ನಾಗಿ ಮಾಡಿಕೊಂಡರೆ, ಕೆಳವರ್ಗ ಅದನ್ನು ಸೃಜನಶಕ್ತಿಯ ಅರ್ಥದಲ್ಲಿ ಬಳಸಿಕೊಳ್ಳುತ್ತವೆ. ಆದ್ದರಿಂದ ದಲಿತ ಬಂಡಾಯ ಕಾದಂಬರಿಗಳಲ್ಲಿ ಮೇಲುವರ್ಗದ ಸ್ತ್ರೀಯರೊಂದಿಗೆ ಕೆಳವರ್ಗದ ಪುರುಷರು ಅನೈತಿಕ ಸಂಬಂಧ ಹೊಂದಿರುವುದನ್ನು ಗಮನಿಸಬಹುದು. "ಸಾಮಾಜಿಕ ಶ್ರೇಣಿಯಲ್ಲಿ ಮೇಲಕ್ಕೆ ಏರುತ್ತಾ ಪ್ರಕೃತಿಯಿಂದ ದೂರವಾದಂತೆ ಲೈಂಗಿಕ ಜೀವನದ ಸಹಜತೆ ಕೂಡಾ ಕಡಿಮೆಯಾಗುತ್ತಾ ಬರುತ್ತದೆ. ಪರ್ಯಾಯವಾಗಿ ಸಾಮಾಜಿಕ ಶ್ರೇಣಿಯಲ್ಲಿ ಕೆಳಗಿದ್ದು ಪ್ರಕೃತಿಗೆ ನಿಕಟವಾಗಿರುವ ವ್ಯಕ್ತಿಗಳಲ್ಲಿನ ಲೈಂಗಿಕ ಸಂಬಂಧಗಳು ಸಹಜವಾಗಿ ಮುಕ್ತವಾಗಿರುತ್ತವೆ".[೧೦೮]

ಮನುಷ್ಯನ ವರ್ಗೀಕರಣದ ವೈರುಧ್ಯಗಳಲ್ಲಿ ಕಾಮವನ್ನು ನಿಯಂತ್ರಿಸುವ ಕ್ರಿಯೆಗಳು ನಡೆಯುತ್ತವೆ. ಇದರಿಂದಾಗಿಯೇ ಮೇಲುವರ್ಗದ ಸ್ತ್ರೀಯರು ಕೆಳವರ್ಗದವನೊಂದಿಗೆ ಅನೈತಿಕ ಸಂಬಂಧ ಹೊಂದುತ್ತವೆ. ಸೂರ್ಯ ಕಾದಂಬರಿಯಲ್ಲಿ ಗೌಡತಿ ಸೀತಕ್ಕ ಜೀತಕರಿಯನೊಂದಿಗೆ ಸಂಬಂಧ ಹೊಂದುತ್ತಾಳೆ. ಕಾದಂಬರಿಕಾರರು ಈ ಲೈಂಗಿಕತೆಯ ಸಹಜತೆಯನ್ನು ನಿಸರ್ಗದ ಮೂಲಕ ಖಚಿತಗೊಳಿಸುತ್ತಾರೆ. ಪ್ರಕೃತಿ ಪರಿಸರದ ಹೊಲದಲ್ಲಿ 'ನಿನ್ನ ಹೊರೆ ನಾನು ಹೊರಿಸ್ತಿನಿ, ನಾನ್ ಹೊರೆ ಇಳಿಸುತ್ತಿಯಾ' ಎಂದು ಸೀತಕ್ಕ ಕರಿಯನನ್ನು ಕೇಳುವುದನ್ನು ಗಮನಿಸಬೇಕು. ಇಲ್ಲಿ ಹುಲ್ಲು ಪ್ರಕೃತಿಯ ಸಂಕೇತವಾಗಿದೆ. ಹಾಗಾಗಿ ಸೀತಕ್ಕಳ ಕಾಮ ವಿಕೃತಿಗೊಂಡಿದೆ. ಇಲ್ಲಿ ಹುಲ್ಲು ಹಸಿರಾಗಿರುವಂತೆ ಅವಳ ಕಾಮವೂ ಹಸಿರಾಗಿರುವಂತೆ ಬಯಸುವುದೇ ಆಗಿದೆ. ಕುಸುಮ ಬಾಲೆ ಕಾದಂಬರಿಯಲ್ಲಿ ಬರುವ ಕೆಂಪಿಯೂ ಸೀತಕ್ಕಳ ಹಾಗೆ ಪರಪುರುಷನೊಂದಿಗೆ ಸಂಬಂಧ ಹೊಂದುತ್ತಾಳೆ. ಇಲ್ಲಿ ಕೆಂಪಿ ಗಂಡನನ್ನು ತಿರಸ್ಕರಿಸುವುದಿಲ್ಲ. ಬದಲಾಗಿ ಪ್ರೀತಿಸುತ್ತಾಳೆ. ಈ ಸಂದರ್ಭದಲ್ಲಿ ಅರಿವಿನ ಮಾರಿತಂದೆಗಳ ಒಂದು ಬೆಡಗಿನ ವಚನ ಇಲ್ಲಿ ಹೇಳಬಹುದು.

"ಕೋಣೆಯೊಳಗಿನ ಮಿಂಡ, ನಡುಮನೆಯೊಳಗಣ ಗಂಡ
ಇವರಿಬ್ಬರ ಒಡಗೂಡುವಳ ಛಂದವ ನೋಡಾ!
ಕೈಯಲ್ಲಿ ಕಣ್ಣು ಹುಟ್ಟಿ, ಬಾಯಲ್ಲಿ ಬಸರು ಹುಟ್ಟಿ
ಮೊಲೆ ತಲೆಯಲ್ಲಿ ಭಗ ಬೆನ್ನಲ್ಲಿ
ಈ ಹಾದರಗಿತ್ತಿಯಂದವ ಸದಾಶಿವಮೂರ್ತಿ ಲಿಂಗವೇ ಬಲ್ಲ"[೧೦೯]

ಈ ವಚನವನ್ನು ಒಮ್ಮೆ ಓದಿದರೆ, ಅತ್ಯಂತ ಆಶ್ಚರ್ಯವುಂಟಾಗುತ್ತದೆ. ಎತ್ತಣಿಂದೆತ್ತ ಸಂಬಂಧವಯ್ಯಾ ಎಂದು ಅನಿಸುತ್ತದೆ. ಕೋಣೆಯಲ್ಲಿರುವ ಮಿಂಡನಿಗೂ ನಡುಮನೆಯಲ್ಲಿರುವ ಗಂಡನಿಗೂ ಒಂದೇ ಕಾಲದಲ್ಲಿ ಆಕೆ ತನ್ನನ್ನು ಅರ್ಪಿಸಿಕೊಳ್ಳುವುದು ಹೇಗೆ ಎಂಬ ಅನುಮಾನದ ಪ್ರಶ್ನೆ ಕಾಡುತ್ತದೆ. ಅವಳ ಪ್ರಕೃತಿಯೂ ವಿಕೃತವಾಗಿದೆ. ಕೈಯಲ್ಲಿ ಕಣ್ಣಿವೆ. ಬಾಯಲ್ಲಿ ಬಸರು ಬಂದಿದೆ. ಮೊಲೆ ತಲೆಯಲ್ಲಿ ಮತ್ತು ಬೆನ್ನಿನಲ್ಲಿ ಭಗವಿದೆ ಅಂದರೆ ಇಲ್ಲಿ ಶರಣಸತಿಗೆ ಪ್ರಾಣಲಿಂಗ ಮಿಂಡ, ಇಷ್ಟಲಿಂಗ ಗಂಡ. ಈ ಪ್ರಾಣಲಿಂಗ ಇಷ್ಟಲಿಂಗಗಳನ್ನು ಒಂದೇ ಕಾಲದಲ್ಲಿ ಪೂಜಿಸುವಿಕೆಯೇ ಇಲ್ಲಿನ ಅರ್ಥ. ಕೆಂಪಿಯೂ ಮಕ್ಕಳು ಹಡೆಯುವ ಹಂಬಲ ವ್ಯಕ್ತಪಡಿಸುತ್ತಾಳೆ. ಅವಳ ಈ ಹಂಬಲಿಕೆಯೂ ಪ್ರಕೃತಿ ಸಹಜ ಗುಣವಾಗಿದೆ. ಇದರಿಂದಾಗಿ ತಾನು ಅನೈತಿಕ ಸಂಬಂಧ ಹೊಂದಿದ ಪುರುಷನನ್ನು ಹಾಗೂ ಗಂಡನನ್ನು ಒಂದೇ ಪ್ರಮಾಣದಲ್ಲಿ ಇಷ್ಟ ಪಡುತ್ತಾಳೆ. ಗಂಡ ಕಿಟ್ಟಯ್ಯನು ಕೆಂಪಿಗೆ ಕಂದ ಹುಟ್ಟಿದಾಗ ಪಡುವ ಸಂತೋಷವನ್ನು ಈ ಹಿನ್ನೆಲೆಯಲ್ಲಿ ಗುರ್ತಿಸಬಹುದು.

ದೇವನೂರು ಮಹಾದೇವ ಅವರು ಕುಸುಮಬಾಲೆ ಕಾದಂಬರಿಯಲ್ಲಿ ಮೇಲುವರ್ಗದ ಸ್ತ್ರೀಯರೊಂದಿಗೆ ಕೆಳವರ್ಗದ ಪುರುಷನೊಂದಿಗಿನ ಸಂಬಂಧವನ್ನು ಚಿತ್ರಿಸಿರುವುದು ಪ್ರಕೃತಿ ಸಹಜವಾಗಿದೆ. ಏಕೆಂದರೆ, ಕಾದಂಬರಿಯ ಆರಂಭದಲ್ಲಿ 'ಎತ್ತಣ ಮಾಮರ ಎತ್ತಣ ಕೋಗಿಲೆ? ಎತ್ತಣಿಂದೆತ್ತಣ ಸಂಬಂಧವಯ್ಯ?! ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ?! ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯ'?! ಎಂದು ಅಲ್ಲಮ ಪ್ರಭುವಿನ ವಚನವನ್ನು ಉಲ್ಲೇಖಿಸಿದ್ದಾರೆ. ಈ ವಚನದಲ್ಲಿ ನೈಸರ್ಗಿಕ ವಸ್ತುಗಳು ಒಂದಕ್ಕೊಂದು ಸಂಬಂಧವಿಲ್ಲದವು ಸಂಬಂಧ ಹೊಂದುವಂತೆ, ಇಲ್ಲಿ ಹೆಣ್ಣು ಗಂಡುಗಳು ಜಾತಿ, ವರ್ಗಗಳನ್ನು ಮೀರಿ ಮಿಲನ ಹೊಂದುತ್ತವೆ. ಇಂಥ ಸಂಬಂಧ ಹೊಂದಿದ ಸ್ತ್ರೀ ಪಾತ್ರಗಳು ಸಂಸ್ಕೃತಿಕರಣಗೊಳ್ಳುತ್ತವೆ. ಕೆಂಪಿಯು ಪರಪುರುಷನೊಂದಿಗೆ ಮಗುವನ್ನು ಪಡೆದು, ಆ ಮಗುವನ್ನು ರಕ್ಷಿಸಲು ತೂರಮ್ಮ ಶ್ರಮವಹಿಸುತ್ತಾಳೆ. ಕುಸುಮ, ಚನ್ನನೊಂದಿಗೆ ಸಂಬಂಧ ಹೊಂದಿರುವ ವಿಷಯವನ್ನು ಎಲ್ಲಾರು ಮಾಡುವ ಯಥಾರ್ಥವೆಂದು ಹಟ್ಟಿ ಜೊತಮ್ಮಗಳು ಸರಳೀಕರಿಸಿ ಬಿಡುತ್ತಾರೆ. ಅಂದರೆ, ಇಂಥ ಸಂಬಂಧಗಳಿಗೆ ಹೊಂದುವ ಪಾತ್ರಗಳ ಭಾವ ಪ್ರಪಂಚವು ಮುಕ್ತವಾಗಿರುತ್ತವೆ. ಆದರೆ, ಶಾಸ್ತ್ರಿಯ ಮಗಳು ಭಗವತೀ ಹಾಗೂ ಕಾರ್ಯ

ಕಾದಂಬರಿಯಲ್ಲಿನ ಪದ್ಮಾವತಿಯ ಪ್ರಕೃತಿಯು ಸಂಸ್ಕೃತಿ ನಿಯಂತ್ರಣವಾಗಿದೆ. ಭಗವತಿಗೆ ಲೈಂಗಿಕತೆಯಲ್ಲಿ ಉತ್ಕಟ ಬಯಕೆಯಾದರೂ ಅವಳ ಬಯಕೆಗೆ ಜಾತಿಯು ಮಿತಿಯು ಆಗಿದೆ. ಹಾಗಾಗಿ ಅವಳ ಪ್ರಕೃತಿಯನ್ನು ಅವಳ ನೈಸರ್ಗಿಕ ಕ್ರಿಯೆಯೊಂದಿಗೆ ಲೇಖಕರು ಸಮೀಕರಿಸಿದ್ದಾರೆ. ''ಅಲ್ಲವೇ? ಈ ಮೂರುದಿನ ಹೊಲೆಯು ಆತನು ಹೊಲೆಯನು ಎರಡೂ ಹೊಲೆಯಗಿರುವ ಪ್ರಸಂಗವಿರುವಾಗ ಹೊಲೆಗೆ ಹೊಲೆಯು ಕೂಡಿದರೆ ಅಗುವ ಅಧರ್ಮ ಅದಾವುದು?''[೧೧೦] ಎನ್ನುವ ಅವಳ ಭಾವಪ್ರಪಂಚ ಮಿಡಿಯುತ್ತದೆ. ಇಂಥದೊಂದು ಪ್ರಸಂಗ ಬಸವರಾಜ ಕಟ್ಟೀಮನಿಯವರ 'ಜರತಾರಿ ಜಗದ್ಗುರು' ಕಾದಂಬರಿಯ ಹದಿನಾರು ವರುಷದ ಹುಡುಗಿ (ವೇಶ್ಯೆ) ಆಗ ತಾನೆ ಮೈನೆರೆದು ತಾರುಣ್ಯದ ಬಯಕೆಯ ಸವಿಯನ್ನು ತಿಳಿಯಲು ಪ್ರಾರಂಭಿಸುತ್ತಾಳೆ. ಅವಳು ಹೇಳುವ ಮಾತುಗಳು ಮಾರ್ಮಿಕವಾಗಿವೆ.

''ಜಗತ್ತಿನಲ್ಲಿ ಪುಣ್ಯವಂತರೆಷ್ಟು ಜನರಿದ್ದಾರೆ. ಹೇಳಿ,ಲಕ್ಷಕ್ಕೊಬ್ಬನೋ ಕೋಟಿಗೊಬ್ಬನೋ ಪವಿತ್ರ ವ್ಯಕ್ತಿ ಇದ್ದಾನು. ಉಳಿದವರೆಲ್ಲಾ ಪಾಪಿಗಳೇ. ಒಂದಿಲ್ಲೊಂದು ದೃಷ್ಟಿಯಿಂದ ಪಾಪಿಗಳೇ ದುರ್ಬಲರೇ ಪತಿತರೇ, ಜೀವನವೊಂದು ನದಿಯಿದ್ದ ಹಾಗೆ ಅಂತ ಹೇಳುತ್ತಾರೆ ಕವಿಗಳು. ದಾರಿ ಒಂದೇ ಸಮನಾಗಿರುವುದಿಲ್ಲ. ಹಳ್ಳ, ತಿಟ್ಟುಗಳಿರುತ್ತವೆ. ಏರಿಳಿತಗಳಿರುತ್ತವೆ. ಆಗಾಗ ಎಡಹುವ ಪ್ರಸಂಗಗಳು ಬರುತ್ತವೆ. ಹೇಗೋ ನಡೆದು ಸಮುದ್ರವನ್ನು ತಲುಪಿದರಾಯಿತು. ಹರಿಯುವ ಹೊಳೆಗೆ ಪಾಪವೇನು, ಪುಣ್ಯವೇನು''[೧೧೧] ಎನ್ನುವುದು ಅವಳ ಭಾವಲಹರಿ ಹಾಗೂ ಭಗತೀಯ ಭಾವಪ್ರಪಂಚ ಗಮನಾರ್ಹವಾಗಿವೆ. ಇದರಿಂದಾಗಿ ದಲಿತ ಬಂಡಾಯ ಕಾದಂಬರಿಕಾರರು ಕಾಮವನ್ನು ಸುಖದಲೋಲುಪತೆಯಲ್ಲಿ ನೋಡದೇ ಬದುಕಿನ ತುಡಿತಕ್ಕಾಗಿ ವಿಶಿಷ್ಟವಾಗಿ ಕುಣುತ್ತಾರೆ. ಹಾಗಾಗಿ ''ಪ್ರಕೃತಿಯಿಂದಲೇ ಮೂಡಿ ಬಂದ ನಾವು ನಿಸರ್ಗದ ಲಯಬದ್ಧ ಶೃತಿಗೆ ಸರಿಯಾಗಿ ನಮ್ಮ ಗತಿಯನ್ನು 'ಟ್ಯೂನಿಂಗ್' ಮಾಡಿಕೊಂಡಾಗ ಮಾತ್ರ ಪರಿಪೂರ್ಣ ಪರಿಪಕ್ವತೆಯಿಂದ ಅರಳಲು ಸಾಧ್ಯ. ಪ್ರಕೃತಿಯ ತಾಳಕ್ಕೆ ಸರಿಯಾಗಿ ನಮ್ಮ ಬದುಕನ್ನು ಮೇಳೈಸಿಕೊಂಡಾಗ ಬದುಕು ಸುಂದರವಾಗುತ್ತದೆ. ಪ್ರಕೃತಿಯ ಆಶಯಕ್ಕೆ ವಿರುದ್ಧ ಸೆಟೆದುಕೊಂಡು ಹೋದಷ್ಟು ಬದುಕು ಹೋರಾಟವಾಗುತ್ತದೆ. ಸುಖ ಕೇವಲ ಮರೀಚಿಕೆಯಾಗುತ್ತದೆ''.[೧೧೨]

ದಲಿತ ಬಂಡಾಯ ಕಾದಂಬರಿಗಳಲ್ಲಿ ಬರುವ ಲೈಂಗಿಕವಾಗಿ ಅತೃಪ್ತಗೊಂಡ ಸ್ತ್ರೀ ಪುರುಷ ಪಾತ್ರಗಳು ಅನೈತಿಕ ಸಂಬಂಧ ಹೊಂದಿ ತಮ್ಮ ಲೈಂಗಿಕ ತೃಷಿಯನ್ನು ನಿಸರ್ಗದ ಮಡಿಲಲ್ಲಿ ತೀರಿಸಿಕೊಳ್ಳುವುದು ಕಂಡುಬರುತ್ತದೆ. ನಿಸರ್ಗದ ಮಡಿಲಾದ ಕಾಡು, ಬೆಟ್ಟ, ಗುಡ್ಡ, ಹೊಲ ಇತ್ಯಾದಿ. ಕುರುಮಯ್ಯ ಮತ್ತು ಅಂಕುಶದೊಡ್ಡಿಯಲ್ಲಿ ಬುಡ್ಡಮ್ಮ, ಜಂಬಯ್ಯ-ತಾಯೇರಿ-ಬುಡ್ಡಪ್ಪ, ಕಾರ್ಯದಲ್ಲಿ ಘಟೇಗಾರಮಲ್ಲಪ್ಪ-ಪದ್ಮಾವತಿ ಕಪ್ಪುವಿನಲ್ಲಿ ಸಣ್ಣುದ್ರ-ಗೌರಿ, ಮುಂತಾದವರನ್ನು ಇಲ್ಲಿ ಉದಾಹರಿಸಬಹುದು. ಇವರೆಲ್ಲರೂ ಒಂದಲ್ಲ ಒಂದು ವಿಧವಾಗಿ ನಿಸರ್ಗದ ಮಡಿಲಲ್ಲಿ

ಕೂಡಿಕೊಳ್ಳುತ್ತಾರೆ. ವಿವಿಧ ಕಾದಂಬರಿಗಳಲ್ಲಿ ಚಿತ್ರಿತವಾಗಿರುವಂತೆ ಇಂಥ ಸಂಬಂಧಗಳು ಹೆಚ್ಚಾಗಿ ಗುಡ್ಡ ಬೆಟ್ಟಗಳಲ್ಲಿ ಸಂಪರ್ಕವನಿಟ್ಟುಕೊಂಡಿವೆ. ಹೀಗಾಗಿ ಕಾದಂಬರಿಗಳಲ್ಲಿ ಬೆಟ್ಟಗಳ ವರ್ಣನೆಯೂ ಸಹಜ ಕಾಮದ ಸಂಕೇತವಾಗಿಯೂ ಹಾಗೂ ಲೈಂಗಿಕ ಕ್ರಿಯೆಯ ತಾಣವಾಗಿಯೂ ಗುರುತಿಸುತ್ತಾರೆ.

"ಈ ತುಡುಗು ಕೆಲಸಕ್ಕೆ ಊರಿಗೆ ಅಂಟಿಕೊಂಡಂತಿರುವ ಒಂದು ಗುಡ್ಡವು ಆಶ್ರಯ ನೀಡುತ್ತದೆ. ಗುಡ್ಡದ ಕಲ್ಲಿನ ಬಂಡೆಗಳ ಮ್ಯಾಲೆ ಈ ಜಾತ್ರೆಯ ಸಮಯದಲ್ಲಿ ಆಗುವ ನೂರಾರು ಸಾವಿರಾರು ಕಪ್ಪು, ನಸುಗಂದು ಬಣ್ಣದ ಕಲೆಗಳು ಮುಂದಿನ ಮಳೆಗಾಲದಲ್ಲಿ ಉತ್ತಾರೆ ಮಳೆ ಗಟ್ಟಿಯಾಗಿ ಬಿದ್ದರೆ ಮಾತ್ರ ಕರಗಿ ಹೋಗುತ್ತವೆ. ಗುಡ್ಡಗಳ ಕಲ್ಲುಗಳು ನುಣುಪಾಗಿಯೂ ಮತ್ತು ವಿಶಾಲವಾಗಿಯೂ ಇದ್ದು ಜಾತ್ರೆಯ ಸಮಯದ ವಾರ್ಷಿಕ ತುಡಿಗಿಗೆ ಪ್ರಾಶಸ್ತ್ಯವಾಗಿದೆ. ಬಿಡಿ ದಿನಗಳಲ್ಲಿ ಬಹಳ ಅಪರೂಪವಾಗಿ ಗುಡ್ಡದ ಸಂದು ಗೊಂದುಗಳಲ್ಲಿ ನಡೆಯುತ್ತದೆ"[೧೧೩] ಎಂದು ಕುಂ.ವೀ.ಯವರು 'ಕಪ್ಪು'ವಿನಲ್ಲಿ ಬರೆಯುತ್ತಾರೆ.

ಕಾದಂಬರಿಕಾರ ಇಲ್ಲಿ ಗುಡ್ಡದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸುವುದರ ಜೊತೆಗೆ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುತ್ತಾರೆ. ಈ ಗುಡ್ಡದ ಮೇಲೆ ಜಾತ್ರೆ ನಡೆಯುತ್ತದೆ. ಊರ ಜಾತ್ರೆ, ಹಬ್ಬ ಕೆಳವರ್ಗಗಳ ಸಂಸ್ಕೃತಿಯ ಪ್ರತೀಕವಾಗಿದೆ. ಇಂಥ ಸಂಸ್ಕೃತಿಯ ಬೆಸುಗೆಯನ್ನು ಪ್ರಕೃತಿಯೊಂದಿಗೆ ಸಮೀಕರಣಗೊಳ್ಳುತ್ತದೆ. ಕೆಳವರ್ಗಗಳ ಆಚರಣೆಯಲ್ಲಿ ಬರುವ ಮಾರಮ್ಮ, ದುರ್ಗಮ್ಮ ಜಾತ್ರೆ ಮುಂತಾದ ಜಾತ್ರೆಗಳು ಇಲ್ಲೇ ನಡೆಯುತ್ತವೆ. ಉತ್ತಮನೂರು ರಾಜಮ್ಮ ವಿ.ಶೆಟ್ಟಿ ಬರೆಯುವಂತೆ "ಹಿಂದಿನಿಂದ ಅಂದರೆ ಊರು ಹುಟ್ಟುವ ಮೊದಲೇ ಈ ಶಕ್ತಿ ದೇವತೆ ಕಾಡು, ಮೇಡು, ಗುಡ್ಡ, ಕಲ್ಲುಗಳ ಮಧ್ಯೆ ನೆಲೆಸಿದ್ದು ಈ ಊರಿನ ಮೂಲದ ಜನ ಸುತ್ತಲ ಪಾಸಲೆಯಲ್ಲಿ ಏಳು ಕಡೆ ಊರು ಕಟ್ಟಲು ಅಸ್ತಿಭಾರ ಹಾಕಿದರೂ ಯಾವ ಜಾಗದಲ್ಲಿ ಆಗಬರದೆ ಕಡೆಗೆ ಈ ಸತ್ಯ ಮಾರೆಮ್ಮ ನೆಲೆಸಿದ್ದ ಜಾಗದಲ್ಲಿ ಊರು ವೃದ್ಧಿಯಾಗಿ ಯಾವುದೇ ಕಷ್ಟ ಬಾಧೆಗಳಿಲ್ಲದೆ ಬೆಳೆದು ಬಂತು" ಎನ್ನುವಲ್ಲಿ ಶ್ರಮಿಕ ವರ್ಗ ವರ್ಷವೆಲ್ಲಾ ದುಡಿದು ವರ್ಷಕ್ಕೆ ಒಂದು ಬಾರಿ ಜಾತ್ರೆಯ ನೆವದಲ್ಲಿ ಪ್ರಕೃತಿಯ ಸೊಬಗನ್ನು ಸವಿಯುತ್ತಾ ನೋವುಗಳನ್ನು ಮರೆಯುತ್ತಾರೆ. ಇದರಿಂದಾಗಿ ಕಾದಂಬರಿಗಳು ಚಿತ್ರಿಸುವ ಇಂಥ ವರ್ಣನೆಗಳು ಪ್ರಕೃತಿ ಹಾಗೂ ಮನುಷ್ಯರ ಸಂಬಂಧಗಳನ್ನು ಖಚಿತಗೊಳಿಸುತ್ತವೆ. ಆ ಮೂಲಕ ಪ್ರಕೃತಿ ವಿಮುಖವಾಗಿ ಬೆಳೆಯುತ್ತಿರುವ ಆಧುನಿಕತೆಯನ್ನು ಟೀಕಿಸುತ್ತಾರೆ.

ನಿಸರ್ಗ ಎಲ್ಲ ಸಮುದಾಯಗಳಿಗೆ ಜಾತಿ ಭೇದವಿಲ್ಲದಂತೆ ಸಮವಾಗಿ ಅವರವರ ಪ್ರಕೃತಿಯಂತೆ ಸುಖವನ್ನು ನೀಡುತ್ತದೆ. ವಾಸ್ತವದಲ್ಲಿ ಆರ್ಥಿಕವಾಗಿ ಸದೃಢವಾದ ಪ್ರತಿಷ್ಠಿತವರ್ಗ, ಮಧ್ಯಮವರ್ಗದವರು ತಮ್ಮ ದಣಿವಾರಿಸಿಕೊಳ್ಳಲು ನಿಸರ್ಗದತ್ತವಾದ ಆಧುನಿಕ ಪಾರ್ಕ್‌ನಲ್ಲೋ, ಊಟಿಯಂತಹ ಸ್ಥಳಗಳಿಗೆ

ಹೋಗುತ್ತಾರೆ. ಆದರೆ, ಅದೇ ಶ್ರಮಿಕವರ್ಗ ತಮ್ಮ ನೋವು, ದಣಿವಾರಿಸಲು ಹೊಲ, ಗದ್ದೆ, ಇಲ್ಲವೆ ಜಾತ್ರೆಯಂಥವುಗಳಿಗೆ ಹೋಗುತ್ತಾರೆ. ದಿನವಿಡೀ ಶ್ರಮವಹಿಸಿ ದಣಿದಿರುವ ದೇಹವನ್ನು ವಿರಮಿಸಿಕೊಳ್ಳಲು ರಾತ್ರಿ ಚಂದ್ರನ ಬೆಳಕಿನಲ್ಲಿ ಕೂತು ಅವನ ಸೊಬಗಿನ ಸವಿಯನ್ನು ಸವಿಯುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಬೆಳದಿಂಗಳ ವೇಳೆಯಲ್ಲಿ ಬಗೆ ಬಗೆಯ ಆಟಗಳನ್ನು ಆಡುತ್ತಾರೆ. ಕುಟುಂಬ ಸಮೇತವಾಗಿ ಅವರವರ ಮನೆಯ ಅಂಗಳದಲ್ಲಿ ಕೂತು ಊಟಮಾಡುತ್ತಾರೆ. ಚಂದ್ರ ಬೆಳದಿಂಗಳು ಚೆಲ್ಲುವಷ್ಟು ದಿನ ಕೆಳವರ್ಗಗಳು ಅದರ ಸವಿಯನ್ನು ಅನುಭವಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಕಪ್ಪು ಕಾದಂಬರಿಯಲ್ಲಿ ಬಾಸೂರಿನ ಕೆಳಸಮುದಾಯದ ಹುಡುಗರು ಗಂಡು ಹೆಣ್ಣು ಭೇದವಿಲ್ಲದೆ ಸಮೂಹಿಕವಾಗಿ ಬೆಳದಿಂಗಳಲ್ಲಿ ಆಟವಾಡುವುದನ್ನು ಚಿತ್ರಿಸುತ್ತದೆ. ಮಸೂರಿನ ಕರೀಗೌಡ ಗೌರಿಯನ್ನು ಬಸವಿ ಮಾಡುವ ಏರ್ಪಾಟು ಮಾಡಿರುತ್ತಾನೆ. ಈ ಕೊರಗಿನಲ್ಲಿರುವ ಗೌರಿ ಗೆಳತಿಯರೊಡನೆ ಚಂದಿರನ ಬೆಳದಿಂಗಳ ಬೆಳಕಿನಲ್ಲಿ ಕಬಡ್ಡಿಯಾಟವಾಡುತ್ತಾ ಸ್ವಲ್ಪವಾದರೂ ನೋವು ಮರೆಯುತ್ತಾಳೆ. ಬೆಳದಿಂಗಳ ವರ್ಣನೆಯನ್ನು ಲೇಖಕರು ವರ್ಣಿಸುವ ರೀತಿ ಹೀಗಿದೆ.

"ಕ್ಷಯ ರೋಗಿಯೊಬ್ಬ ಅಪರೂಪಕ್ಕೆ ವಿಷಣ್ಣ ನಗೆ ನಕ್ಕಂತೆ ಕೋಳಿ ಮೊಟ್ಟೆಯಂತಿದ್ದ ಚಂದಿರನ ಬೆಳದಿಂಗಳು ಊರು ತುಂಬಾ ಬಿದ್ದಿತ್ತು. ಗೋಡೆಗಳಿರುವ ಮನೆಗಳು, ನೆರಕೆಗಳಿರುವ ಗುಡಿಸಲುಗಳು ಬಿಕೋ ಎನ್ನುತ್ತಿದ್ದವಾದರೂ ಒಂದು ವಯಸ್ಸಿಗೆ ಬಂದಿರೋ ಪಡ್ಡೆ ಹುಡುಗರು, ಹುಡಗಿಯರು ಬಿಕೋ ಅನ್ನುತ್ತಿರಲಿಲ್ಲ. ಸಣ್ಣ ಹುಡುಗರು ಕಣ್ಣು ಮುಚ್ಚಾಟವನ್ನೋ ಕಳ್ಳರಾಟವನ್ನೋ ಆಡ ತೊಡಗಿದ್ದರು. ಅದೇ ತಾನೇ ಮೀಸೆ ಮೂಡಿರುವ ಹುಡುಗರು, ಅದೇ ತಾನೆ ಮೊಲೆ ಜಗಿತು ತೊಡೆ ಬಲಿತಿರುವ ಹುಡುಗಿಯರು ಮಾತು ಮಾತಿಗೆ ಜೋರಾಗಿ ನಗುತ್ತಿದ್ದರು....ಗೌರಿ ಬಾಸೂರಿನಲ್ಲಿ ನೋಡುತ್ತಿರುವುದು ಇದೇ ಮೊಟ್ಟ ಮೊದಲ ಬೆಳದಿಂಗಳು. ಮಸೂರಿನಲ್ಲಿ ಈ ರೀತಿ ಯಾರು ಬೆಳದಿಂಗಳಿನಲ್ಲಿ ಯಾವ ಆಟ ಆಡುವಂತಿಲ್ಲ. ಜೋರಾಗಿ ಉಸಿರಾಡಿದರೆಲ್ಲಿ ಅಪರಾಧವಾಗುತ್ತದೋ ಅಂತ ಸುಮ್ಮನಿದ್ದು ಬಿಡುವರು. ಆದರೆ ಬಾಸೂರಿನಲ್ಲಿ ಬೆಳದಿಂಗಳು ಚೈತನ್ಯದ ಚಿಲುಮೆ. ಬೆಳದಿಂಗಳಲ್ಲಿ ಎಲ್ಲರ ಜೊತೆ ನಕ್ಕೋತ ನಕ್ಕೋತ ಆಡಬೇಕೆಂಬಾಸೆ ಗೌರಿಗೆ....."[೧೧೫] ಈ ತರಹದ ವರ್ಣನೆ ದಲಿತ ಬಂಡಾಯೇತರ ಕಾದಂಬರಿಗಳಲ್ಲಿ ವರ್ಣಿತವಾಗಿಲ್ಲವೆಂದಲ್ಲ. ವಿಪುಲವಾಗಿ ವರ್ಣಿತಗೊಂಡಿವೆ. ಕಾವ್ಯ ಪ್ರಕಾರದಲ್ಲಿ ಚಂದಿರನ ಸಂಕೇತವಾಗಿಟ್ಟುಕೊಂಡು ಅನೇಕ ಕವನಗಳು ಸೃಷ್ಟಿಗೊಂಡಿವೆ. ಅವರ ದೃಷ್ಟಿಕೋನವೇ ಬೇರೆ ದಲಿತ ಬಂಡಾಯಕಾರರ ದೃಷ್ಟಿಕೋನವೇ ಬೇರೆ. ಇವರು ಕೆಳವರ್ಗಗಳ ಕಷ್ಟಗಳನ್ನು ಮರೆಯುವ ಹಾಗೂ ನಿವಾರಣೆಯ ಪರ್ಯಾಯವೆಂದು ಭಾವಿಸುತ್ತಾರೆ. ಇದರಿಂದಾಗಿಯೇ ಈ ಕಾದಂಬರಿಗಳಲ್ಲಿ ಹಬ್ಬ, ಆಚರಣೆ, ಉತ್ಸವಗಳಂತಹ ಸಾಂಸ್ಕೃತಿಕ ದಾಖಲೆಗಳನ್ನು ಬದಗಿಸುತ್ತಾರೆ. ಮರಣ ಮಂಡಲ

ಮಧ್ಯದೊಳಗೆ ಬರುವ ಬಸುರಾಜು ರಂಗ-ರಂಗಿಯರ ಸಮಸ್ಯೆಯ ನಿವಾರಣೆಗಾಗಿ ಶನಿದೇವರ ಮೊರೆ ಹೋಗುವುದು, ಕುಸುಮಬಾಲೆಯಲ್ಲಿ ಕೆಂಪಿಯ ಕಂದನನ್ನು ರಕ್ಷಿಸುವ ಸಲುವಾಗಿ ತಾಯಿ ತೂರಮ್ಮ ಇದಿಯಮ್ಮನ ಮೊರೆ ಹೋಗುವುದೆಲ್ಲಾ ಅವರು ನಂಬಿಕೊಂಡು ಬಂದ ಸಂಪ್ರದಾಯ. ಇಂಥ ಸಂಪ್ರದಾಯವೆಲ್ಲವೂ ಪ್ರಕೃತಿಯೊಂದಿಗೆ ನಡೆಯುತ್ತವೆ. ಹೀಗಾಗಿ ಪ್ರಕೃತಿ ಹಾಗೂ ಮನುಷ್ಯನ ಸಂಬಂಧ ಇಲ್ಲಿ ಖಚಿತಗೊಳ್ಳುತ್ತವೆ. ವೈಚಾರಿಕವಾಗಿ ಇಂಥ ಸಂಪ್ರದಾಯಗಳೆಲ್ಲವೂ ಮೂಢನಂಬಿಕೆಗಳಾಗಿರಬಹುದು. ಆದರೆ, ಅದು ಜೀವನಾಡಿ ಕೂಡ ಹೌದು.

ಈ ಕಾದಂಬರಿಗಳಲ್ಲಿ ಪ್ರಾಕೃತಿಕ ಕಲ್ಲು ಬಂಡೆಗಳನ್ನು ವರ್ಣಿಸಿರವುದು ಗ್ರಹಿಕೆಗೆ ಬರುತ್ತದೆ. ಪ್ರಕೃತಿಯ ಸೃಷ್ಟಿಯ ಕಲ್ಲುಗಳು ಐತಿಹಾಸಿಕ ಚರಿತ್ರೆಯಾಗಿ ಗುರುತಿಸಲ್ಪಡುತ್ತದೆ. ಇಂಥ ಐತಿಹ್ಯಗಳು ಆ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಒದಗಿಸಿಕೊಡುತ್ತವೆ. ಕಾರ್ಯ ಕಾದಂಬರಿಯಲ್ಲಿ ಬರುವ ಕಂಬಾರ ಕಲ್ಲಪ್ಪ' ಎಂಬ ಕಲ್ಲಿನ ಸಾಂಸ್ಕೃತಿಕ ಚಿತ್ರಣವನ್ನು ನೀಡುತ್ತದೆ. ಮಚಗಾರ ಸಮುದಾಯ ಬಂಗಾರೆವ್ವನ ಹೆಣವನ್ನು ಸಾಗಿಸುವಾಗ ಆ ಕಲ್ಲನ್ನು ಪೂಜೆ ಮಾಡಿ ಮುಂದೆ ಸಾಗುತ್ತಾರೆ. ಇದು ಸತ್ತ ವ್ಯಕ್ತಿಗಳ ಕಾರ್ಯ ಮಾಡುವಾಗಷ್ಟೇ ನಡೆಯುವುದಿಲ್ಲ. ಆ ರಸ್ತೆಯ ಗುಂಟಾ ಹೋಗುವ ಜನರೆಲ್ಲರೂ ಪೂಜಿಸುತ್ತಾರೆ. ಇದರ ವರ್ಣನೆಯನ್ನು ಕಾದಂಬರಿಕಾರರು ಕಥೆಯಾಗಿ ಪಾತ್ರಗಳ ಮೂಲಕ ನಿರೂಪಿಸುತ್ತಾರೆ. ಕಾದಂಬರಿಯಲ್ಲಿ ಬರುವ ಹನುಮಂತ ಹೇಳುವಂತೆ

“ಕಂಬಾರ ಕಲ್ಲಪ್ಪ ಒಬ್ಬ ಮಹಾ ಕುಡುಕ. ಈತ ಸತ್ತ ಮೇಲೆ ತಂದು ಹುಗಿದದ್ದು. ಅದೇ ಸ್ಮಶಾಸನದಲ್ಲಿ ರಸ್ತೆ ಮಾಡುವಾಗ ಎಲ್ಲ ಗೋರಿಗಳನ್ನು ಕಿತ್ತಿ ಒಗೆದರು. ಅದರಂತೆ ಕಲ್ಲಪ್ಪನ ಗೋರಿ ಕಿತ್ತಲು ಹೋಗಿ ಚಳಿಜ್ವರ ಬಂದು ಮಲಗಿದಂತೆ, ಹಡ್ಡಿದರೆ ಹಾರಿ, ಗುದ್ದಲಿ ಮುರಿದವು. ಹೀಗಾಗಿ ಆ ಗೋರಿಯನ್ನು ಬಿಟ್ಟು ರಸ್ತೆಯನ್ನೇ ಸ್ವಲ್ಪ ಹೊರಳಿಸಿ ಮಾಡಿದರಂತೆ ಅದೇ ರಸ್ತೆಯ ಮೇಲಿಂದ ವಡಗೇರಿ ಹುಲಗಬಾಳದಿಂದ ಸೇಂದಿ ಮುದ್ದೇನಹಳ್ಳಿಗೆ ಬರುವಾಗ ಗಾಡಿಗಳೆಲ್ಲಾ ಒಗ್ಗಾಲ್ಯಾಗಿ ಬಳುತ್ತಿದ್ದವು. ಎತ್ತು-ಕುದುರೆ ಒಂಟಿ ಮೇಲೆ ತೆಗೆದುಕೊಂಡು ಹೊರಟರೆ ಆ ಕಲ್ಲು ದಾಟಿ ಮುಂದಕ್ಕೆ ಹೋಗುವುದಕ್ಕೆ ಅವುಗಳಿಂದ ಆಗುತ್ತಿರಲಿಲ್ಲ. ಆದ್ದರಿಂದ ಸ್ವಲ್ಪ ಸೇಂದಿಯನ್ನು ತೆಗೆದು ಆ ಕಲ್ಲ ಮೇಲೆ ಸುರವಿ ಹೋಗುವುದರಿಂದ ಅದಕ್ಕೆಲ್ಲ ಪರಿಹಾರ ಸಿಕ್ಕಿತಂತೆ. ಆವಾಗಿಂದ ಸೇಂದಿ ಸುರವಿ ಹೋಗುವುದು ರೂಢಿಗೆ ಬಂತು. ಇದು ಎಂದಿನಿಂದ ನಡೆದು ಬಂದಿದೆಯೋ ಯಾರಿಗೆ ಗೊತ್ತು ಎಂದು ಹೇಳುತ್ತಿದ್ದ ಕಥೆ ನೆನಪಾಯಿತು. ಕಲ್ಲ ಮೇಲೆ ಸೇಂದಿ ಸುರುವಿ ಪೂರ್ತಿ ಕಪ್ಪಾಗಿಹೋಗಿದೆ”.[೧೧೬]

ಇಂಥ ಕಲ್ಲಿನ ವರ್ಣನೆಯ ಪ್ರಸಂಗವು ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ವರ್ಣಿತಗೊಂಡಿದೆ. ಮಲೆನಾಡಿನ ಬೆಟ್ಟದ ಉದ್ದನೆ ನಿಂತಿರುವ ಕಪ್ಪು ಕಲ್ಲನ್ನು ವರ್ಣಿಸುತ್ತಾ “ಇದಕ್ಕೆ ಎಷ್ಟು ಇತಿಹಾಸವಿದೆಯೋ ಏನು ಇದು ಮಾತ್ರ ಜೀವಂತವಾಗಿದೆ”.[೧೧೭]

ಕಾರ್ಯ ಕಾದಂಬರಿಯಲ್ಲಿ ಬರುವ ಕಂಬಾರಕಲ್ಲಪ್ಪನ ಕಲ್ಲು ಹಾಗೂ ಕುವೆಂಪು ಅವರು ವರ್ಣಿಸುವ ಕಲ್ಲುಗಳ ವರ್ಣನೆಯಲ್ಲಿ ವ್ಯತ್ಯಾಸವಿದೆ. ಕಂಬಾರ ಕಲ್ಲು ಒಂದು ಸಾಂಸ್ಕೃತಿಕ ದಾಖಲೆಯಾಗಿ ಉಳಿದುಕೊಂಡರೆ, ಕುವೆಂಪು ವರ್ಣಿಸುವ ಕಲ್ಲು ಐತಿಹಾಸಿಕವಾಗಿದೆ. ಇಲ್ಲಿ ವರ್ಣಿತವಾಗಿರುವ ಕಲ್ಲುಗಳು ಪ್ರಕೃತಿಯ ಕೊಡುಗೆ ಎಂಬುದನ್ನು ಮನಗಾಣಬೇಕಿದೆ. ಕೆಳಸಂಸ್ಕೃತಿಯಲ್ಲಿ ಇಂಥ ಕಲ್ಲುಗಳಿಗೆ ದೈವದ ಕಲ್ಪನೆ ಮಾಡಿಕೊಂಡು ಪೂಜಿಸುವುದು ವಾಸ್ತವದಲ್ಲಿ ಕಂಡುಬರುತ್ತದೆ. ದುರುಗಮ್ಮ, ಮರಿಯಮ್ಮ, ಬನ್ನಿ ಮಹಾಂಕಾಳಿ ಮುಂತಾದ ದೇವರುಗಳನ್ನು ಮರದ ಬುಡದಲ್ಲಿ ಸ್ಥಾಪಿಸಿ ಪೂಜಿಸುತ್ತಾರೆ. ಜೊತೆಗೆ ಹಾಲು, ತುಪ್ಪ, ಮೊಸರನ್ನು ಆ ಮೂರ್ತಿಯು ಆಶ್ರಯಿಸಿದ ಬುಡಕ್ಕೆ ಸುರುವುತ್ತಾರೆ. ಎಲ್ಲಾ ಜನ ಸಮುದಾಯಗಳನ್ನೊಳಗೊಂಡಂತೆ ನಾಗರಪಂಚಮಿ ಹಬ್ಬದಲ್ಲಿ ಕಲ್ಲಿನ ನಾಗರ ಮೂರ್ತಿಗಳಿಗೆ ಹಾಲು, ತುಪ್ಪ, ಸುರಿಯುವುದನ್ನು ಕಾಣುತ್ತೇವೆ. ಹಾಗೆಯೇ ಗೋಮಟೇಶ್ವರ ಮೂರ್ತಿಯ ಮೇಲೆ ಹಾಲು ಸುರವಿ ಅಬಿಷೇಕ ಮಾಡುತ್ತಾರೆ. ಹಾಗೆಯೇ ಕೆಳಸಂಸ್ಕೃತಿ ತಮ್ಮ ಇಷ್ಟ ದೇವತೆಗಳಿಗೆ ಇಂತಹ ವಸ್ತುಗಳಿಂದ ಪೂಜಿಸುತ್ತಾರೆ. ಅಲ್ಲದೇ ಸರಾಯಿ(ಮದ್ಯಪಾನ)ಯನ್ನು ಸುರುವುತ್ತಾರೆ. ಇದು ಅವರು ನಂಬಿಕೊಂಡು ಬಂದ ಸಂಸ್ಕೃತಿಯಾಗಿದೆ.

ಹೀಗೆ ದಲಿತ ಬಂಡಾಯ ಕಾದಂಬರಿಗಳು ಪ್ರಕೃತಿಯನ್ನು ಹಲವು ಮುಖಗಳಿಂದ ಗುರುತಿಸಿ ಪ್ರಕೃತಿಯ ಹಾಗೂ ಮನುಷ್ಯನ ಸಂಬಂಧವನ್ನು ಸಮೀಕರಿಸುತ್ತಾರೆ. ಮನುಷ್ಯನ ಪ್ರಕೃತಿಯನ್ನು ಅವನ ಸ್ವಭಾವದ ಮೂಲಕ ಬಗೆಬಗೆಯಾಗಿ ಚಿತ್ರಿಸುತ್ತದೆ. ಪ್ರಕೃತಿಯ ಸಹಜ ಗುಣಗಳಾದ ನಿಸರ್ಗ ಹಾಗೂ ಸ್ವಭಾವಗಳನ್ನು ಕೆಳವರ್ಗಗಳ ಸಾಂಸ್ಕೃತಿಕ ಚಿತ್ರಣಗಳೊಂದಿಗೆ, ಸಂಸ್ಕೃತಿಯ ಜೀವಂತಿಕೆಯನ್ನು ಪ್ರಕಟಿಸುತ್ತವೆ. ಇಂಥ ಸಂಸ್ಕೃತಿಗಳ ಚಿತ್ರಣ ಅಥವಾ ದಾಖಲೆ ಕೇವಲ ದಾಖಲೆಗಳಾಗಿ ಉಳಿದಿಲ್ಲ. ಅವು ಕೆಳಸಂಸ್ಕೃತಿಯ ಎಚ್ಚರದ ಸಂಕೇತವಾಗಿಯೂ ಪರ್ಯಾಯ ಹುಡುಕಾಟ ಅಥವಾ ಪ್ರತಿ ಸಂಸ್ಕೃತಿಯಾಗಿ ದಾಖಲುಗೊಂಡಿವೆ. ಅಲ್ಲದೇ ಪ್ರತಿಭಟನೆಯ ಧೋರಣೆಯಾಗಿಯೂ ಉಳಿದುಕೊಂಡಿವೆ.

ಇಡೀ ಕಾದಂಬರಿಗಳಲ್ಲಿ ಚಿತ್ರಿತವಾಗುವ ಗುಡ್ಡ, ಬೆಟ್ಟ, ಮರ, ಬೆಳದಿಂಗಳು ಇವೆಲ್ಲ ಶ್ರಮ ಬದುಕಿನ ಚೈತನ್ಯದ ಪ್ರತೀಕಗಳು. ಆತ್ಮಸಾಕ್ಷಿಯ, ಸ್ವಾಭಿಮಾನದ ಪ್ರತಿರೂಪಗಳು. ಮನುಷ್ಯನನ್ನು ಪರಿಸರ ಮತ್ತು ಪರಿಶ್ರಮದಿಂದ ಬೇರ್ಪಡಿಸುವ ಬೌದ್ಧಿಕ ಕ್ರಿಯೆಯ ಮುಂದೆ ಭೌತಿಕ ಕ್ರಿಯೆಗಳು ಕೀಳೆಂದೆನಿಸುವ ಪ್ರವೃತ್ತಿಗಳಿಗೆ ದಲಿತ ಬಂಡಾಯ ಕಾದಂಬರಿಕಾರರು ತೀಕ್ಷ್ಣವಾಗಿ ಉತ್ತರಕೊಡುತ್ತಾರೆ. ಆ ಮೂಲಕ ಆಧುನಿಕತೆಯ ಮತ್ತು ಸಾಂಪ್ರದಾಯ ಬದುಕಿನ ಮೇಲುಸ್ತರಗಳ ಶುಷ್ಕ ಮತ್ತು ನಿರುಪಯುಕ್ತ ನೆಲೆಗಳನ್ನು ಪತ್ತೆಹಚ್ಚುತ್ತಾರೆ.

ಪ್ರಕೃತಿಯ ಗರ್ಭದಿಂದ ಹುಟ್ಟಿಬಂದ ದಲಿತ ಬಂಡಾಯ ಕಾದಂಬರಿಕಾರರಿಗೆ ಪ್ರಕೃತಿ ಮನುಷ್ಯನ ವಿವಿಧ ಸ್ವಭಾವಗಳ ಸಂಕೇತವಾಗಿಯೂ ಗೋಚರವಾಗುತ್ತದೆ. ಮನುಷ್ಯರ ಭಿನ್ನ ಭಿನ್ನ ಪ್ರಕೃತಿಗಳಲ್ಲಿ ಘರ್ಷಣೆ ಏರ್ಪಡುವಂತೆ ಮನುಷ್ಯ ಪ್ರಕೃತಿ ನಡುವೆಯೂ ಸಂಘರ್ಷಣೆಯನ್ನು ಕಾಣಬಲ್ಲವರಾಗಿದ್ದಾರೆ. ಕಾಮ ಮತ್ತು ವ್ಯಕ್ತಿಯ ನಡುವಿನ ಸಂಬಂಧದಲ್ಲಿ ಇದನ್ನು ಕಾಣುತ್ತೇವೆ. ಕಾಮದ ಮೂಲಕ ಕೇವಲ ಭಾವಪೂರ್ಣ ಅಥವಾ ಅವಿವೇಕದ ನೆಲಗಳನ್ನು ಮಾತ್ರ ಕಾಣದೆ ಮನುಷ್ಯ ಮೂಲ ಪ್ರವೃತ್ತಿಗಳೊಂದಿಗೆ ಆ ನೆಪದಲ್ಲಿ ಮೂಖಾಮುಖಿಯಾಗುತ್ತಾರೆ. ಕಾಮ ಜೀವನದ ಸಂಘರ್ಷ ಮಾತ್ರ ಸಂಭ್ರಮದ ಇಂಥ ಪ್ರವೃತ್ತಿಗಳು ಪಳಗಿಸಿ ಅವನ್ನು ಸೃಷ್ಟಿ ಮತ್ತು ವಿಕಸನ ಕ್ರಿಯೆಗಳಿಗೆ ಬಳಸಬೇಕೆಂದು ಸೂಚಿಸುತ್ತಾರೆ.

ಆ ಮೂಲಕ ಶ್ರಮ ಸಂಸ್ಕೃತಿಗಳ ಉತ್ಕಟ ಬದುಕಿನ ವಿನ್ಯಾಸಗಳನ್ನು ಪುನರ್‌ಸೃಷ್ಟಿ ಸಾಮರ್ಥ್ಯಗಳನ್ನು ಎತ್ತಿ ತೋರಿಸುತ್ತಾರೆ. ಮತ್ತು ಕೆಳಸಂಸ್ಕೃತಿಗಳು ತನ್ನ ನಿಸರ್ಗಪ್ರಜ್ಞೆಯಿಂದ ಪಡೆದುಕೊಳ್ಳುವ ಪುನಃ ಸೃಷ್ಟಿಯ ಪರಿಕಲ್ಪನೆಯನ್ನು ನಿರ್ವೀರ್ಯ ಸಂಸ್ಕೃತಿಗಳ ಎದುರುಗಡೆ ಇಟ್ಟು ಖಾತ್ರಿ ಮಾಡಿಕೊಳ್ಳುತ್ತಾರೆ. ಮನುಷ್ಯ ನಿರ್ಮಿತ ನಾಡಸಂಸ್ಕೃತಿಯ ನಿರ್ವೀರ್ಯತೆಯನ್ನು ಮೀರಿ ನಿಸರ್ಗದತ್ತವಾದ ಕಾಡು ಸಂಸ್ಕೃತಿಯ ಸಂಸರ್ಗದೊಂದಿಗೆ ಮಾನವಮುಖಿ ಸಂಬಂಧಗಳ ಬಲವರ್ಧನೆಗೆ ಹಂಬಲಿಸುತ್ತಾರೆ. ಆ ಮೂಲಕ ಹೊಸ ಸಮಾಜದ ನಿರ್ಮಾಣಕ್ಕೆ ಕರೆ ನೀಡುತ್ತಾರೆ. ದೇಸಿ ಪ್ರಜ್ಞೆಯ ಸಮುದಾಯ ನಿಷ್ಠ ಚಿಂತನಾ ಕ್ರಮವನ್ನು ಹುಟ್ಟು ಹಾಕುತ್ತಾರೆ.

## ಮನುಷ್ಯನ ಹುಡುಕಾಟದ ನೆಲೆಗಳು

ಅಸ್ಪೃಶ್ಯ ಕಾದಂಬರಿಯ ಲಾಕನಲ್ಲಿ ಕುಸುಮ ಬಾಲೆಯ ಕುರಿಯಯ್ಯ ನನ್ನಿ ಯಲ್ಲಿಯೂ ಉತ್ತಮ ಜಾತಿ ಎಂಬ ಪಾವಿತ್ರ್ಯದ ಕಲ್ಪನೆಯನ್ನು ಬೀಗುಳೆಯುವುದೂ ಇತ್ತ ದಲಿತ ಸಂಘರ್ಷ ಸಮಿತಿಯವರ ಪ್ರತಿಷ್ಠೆಯನ್ನು ಚಿಟುಗು ಮುಳ್ಳಾಡಿಸಿ ತೆಗೆಯುವುದೂ ಒಟ್ಟಿಗೆ ನಡೆದಿದೆ. ಉತ್ತಮ ಜಾತಿಯವರು ಕೊಟ್ಟ ರಿಯಾಯತಿ ಏನು? ಹೆಣ್ಣನ್ನು ಹೊತ್ತುಕೊಂಡು ಹೋಗಿ ಭೋಗಿಸಿದ್ದರು, ಎಂದು ಹೇಳುವಲ್ಲಿ ಇವರೂ ಕೂಡ ಯಜಮಾನ ಸಂಸ್ಕೃತಿಯನ್ನು ಅನುಕರಣ ಮಾಡಿದಂತಾಗಲಿಲ್ಲವೆ ಎಂದು ಪ್ರಶ್ನಿಸುವಮೂಲಕ ಅವರ ಸಿಟ್ಟಿಗೆ ಕಣ್ಣೀರು ಹಾಕಿ ಸಮಾಧಾನಗೊಳಿಸುವ ಹುನ್ನಾರವೆ ಇದು. ಎಂದರೆ ಹೌದಲ್ಲವೆ ಎಂಬ ಹಳಹಳಿಕೆಯಿಂದ ಇವತ್ತಿನ ದಲಿತರು ಬೀಗಿದರೆ ಬಂದ ಭಾಗ್ಯವೇನು? ಅದೂ ಸಹ ವಿಚಾರವಲ್ಲ. ಮಾನವೀಯವಲ್ಲ ಎಂಬುದನ್ನು ಅವರ ಮುಖಕ್ಕೆ ಹಿಡಿದು ತೋರಿಸಲಾಗಿದೆ. ಮೇಲುವರ್ಗ ಜಾತಿಗಳ ಅನುಕರಣೆಗೆ ತಕ್ಕುದಲ್ಲ ಎಂಬುದು ಇಲ್ಲಿಯ ಗಟ್ಟಿಮಾತು. ಕುರಿಯಯ್ಯ ನನ್ನಿಯ ಮೂಲಕ ಇದರಲ್ಲಿ ಇರಬಹುದಾದ ಭ್ರಮೆಗಳನ್ನು ಒಡೆದು ಮನುಷ್ಯರನ್ನಾಗಿ ಮಾಡಲು

ಯತ್ನಿಸಲಾಗಿದೆ. ವಾಸ್ತವವಾಗಿ ದೇವನೂರರು ಮೇಲುವರ್ಗ ಜಾತಿಯವರ ಮಾನವೀಯತೆಯನ್ನು ನಿರಾಕರಿಸಿ, ಮನುಷ್ಯನನ್ನು ಮನುಷ್ಯನನ್ನಾಗಿ ಕಾಣುವುದನ್ನು ಇಡೀ ಕಾದಂಬರಿಯಲ್ಲಿ ವ್ಯಕ್ತಪಡಿಸುತ್ತಾರೆ. ಮಾನವೀಯತೆಗಾಗಿ ಹಂಬಲಿಸುತ್ತಾರೆ. ಮಾನವೀಯತೆಯನ್ನು ಬರಗೂರರು ಗ್ರಹಿಸುವ ರೀತಿ ಇನ್ನೊಂದು ರೀತಿಯದು.

"ಭಕ್ತರಿಗೆ ಕರುಣಿಸುವ ಜಗದ್ಗುರುವಿನ ಮಾನವೀಯತೆಯಲ್ಲ, ಜನರಿಗೆ ಅವಕಾಶ ಕಲ್ಪಿಸಿ ಬೀಗುವ ಆಳುವ ವರ್ಗದ ಮಾನವೀಯತೆಯಲ್ಲ ಮನುಷ್ಯನಲ್ಲೊಂದಾಗಿ ಮನುಷ್ಯನ ಮೂಲಕವೇ ಬದುಕ ನೋಡುವ ಹಸನಾದ ಬದುಕಿಗೆ ಆಶಿಸುವ ಮಾನವೀಯತೆ. ಅದು ಮನುಷ್ಯನ ಮನಸ್ಸಿನ ಸಾಮಾಜಿಕ ಸ್ತರದ ಸ್ಫೋಟವಾಗಿ ಈ ಮಾನವೀಯತೆ ಪ್ರಕಟವಾಗಬೇಕಿದೆ;"[೧೧೪] ಎನ್ನುವುದು ಸಮಾಜದಲ್ಲಿ ದಲಿತನನ್ನು ಮನುಷ್ಯನನ್ನಾಗಿ ಕಾಣಬೇಕೆಂಬುದೇ ಅವರ ಆಶಯವಾಗಿದೆ. ಶೋಷಣೆಯ ಅನುಭವಗಳಿಂದ ಹಣ್ಣಾಗಿರುವ ದಲಿತ ಸಮುದಾಯಗಳ ಪ್ರಧಾನ ಕಾಳಜಿ ಮಾನವೀಕರಣವಾಗಿರುತ್ತದೆ. ಹಿಂಸೆಯನ್ನು ಹೀಗಾಗಿಯೇ ಅಂತಿಮವಾಗಿ ತಿರಸ್ಕರಿಸಿ ಎಲ್ಲ ಮನುಷ್ಯರ ಘನತೆಯನ್ನೆ ನಂಬುವುದರಲ್ಲಿ ವಿಶ್ವಾಸವನ್ನು ತೋರುತ್ತದೆ. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ದಲಿತ ಸಮುದಾಯಗಳೆಲ್ಲ ಭೀಕರ ರಾಕ್ಷಸರಂತೆ ವರ್ತಿಸಬಹುದಿತ್ತು. ತನ್ನ ಮೇಲಿನ ಎಲ್ಲ ಜಾತಿಗಳ ಅಧಿಕಾರವನ್ನೂ ವಕ್ರತೆಯನ್ನೂ ಕಂಡಿರುವ ಉಂಡಿರುವ ದಲಿತರು ಮಾನವೀಕರಣ ಸಂವೇದನೆಗೆ ಒಳಗಾಗದೇ ಇರಲು ಸಾಧ್ಯವೇ ಇಲ್ಲ. ದಲಿತ ಪರಂಪರೆಗಳ ಮೌಖಿಕ ಸಾಹಿತ್ಯವನ್ನು ಗಮನಿಸಿದರೆ ಅವರ ಒಟ್ಟು ಸೃಜನಶೀಲತೆಯ ಮಾನವೀಕರಣ ಪ್ರಕ್ರಿಯೆ ನಡೆದು ಬಂದಿರುವುದನ್ನು ಗಮನಿಸಬಹುದು. ಇಂಥ ಮಾನವೀಕರಣ ಪ್ರಕ್ರಿಯೆಯನ್ನು ದಲಿತ-ಬಂಡಾಯ ಕಾದಂಬರಿಗಳು ಕಟ್ಟಿಕೊಡುತ್ತವೆ. ಮನುಷ್ಯತ್ವ ಶೋಧನೆಯ ಪ್ರಮುಖ ಕಾದಂಬರಿಗಳೆಂದರೆ, 'ಮಾಗಿ' 'ಕುಸುಮ ಬಾಲೆ' 'ಗತಿ' 'ಕಪ್ಪು' 'ಕಾರ್ಯ'.

ಈ ಕಾದಂಬರಿಗಳ ಮೂಲಕ ಒಟ್ಟು ಬಂಡಾಯದ ಮನೋಧರ್ಮವನ್ನು ಗುರುತಿಸಿ ಅದರಿಂದ ಉತ್ಪಾದನೆಯಾದ ಸಾಮಾಜಿಕ ಸಾಂಸ್ಕೃತಿಕ ಆಯಾಮಗಳಲ್ಲಿ ಕೆಳವರ್ಗಗಳ ಅಶೋತ್ತರಗಳಿಗೆ ಸ್ಪಂದಿಸುವಂತಹ ಹಾಗೂ ಸಮಾಜಮುಖೀ ಮಾನವಪರ ಕಾಳಜಿಗಳ ಹುಡುಕಾಟದ ನೆಲೆಗಳನ್ನು ಈ ರೀತಿ ಗುರುತಿಸಬಹುದು.

೧. ಜಾತಿ ಸಂಘರ್ಷ

೨. ವರ್ಗ ಸಂಘರ್ಷ

೩. ಅನೈತಿಕ ಸಂಬಂಧಗಳಲ್ಲಿ

೪. ಕೆಳಜಾತಿಗಳ-ಎಡ-ಬಲ-ಸಮುದಾಯಗಳು

ಈ ಅಂಶಗಳ ಮೂಲಕ ಕಾದಂಬರಿಯ ಪಾತ್ರಗಳು ಹೇಗೆ ಪರಸ್ಪರ ಮುಖಾಮುಖಿಯಾಗಿ ಮನುಷ್ಯತ್ವದ ಹುಡುಕಾಟದ ನೆಲೆಗಳನ್ನು ಜೀರ್ಣಿಸಿಕೊಂಡಿವೆ ಹಾಗೂ ಸಾಮಾಜಿಕ ಪರಿವರ್ತನೆಯಲ್ಲಿ ಎಷ್ಟರಮಟ್ಟಿಗೆ ಅದನ್ನೇ ಅನುಸರಿಸಲು ಪ್ರಯತ್ನಿಸಿವೆ ಎಂಬುದನ್ನು ಚರ್ಚಿಸುವುದಾಗಿದೆ. ಆ ಮೂಲಕ ಪ್ರತಿಪಾದನೆಯಾಗುವ ಬಂಡಾಯ ಲೇಖಕರ ಸಾಮಾಜಿಕ ವೈಪರೀತ್ಯಗಳ ವಿಶ್ಲೇಷಣೆ ಹಾಗೂ ಕೆಳ ಸಮುದಾಯಗಳು ಮೇಲ್ವರ್ಗಗಳೊಂದಿಗೆ ನಡೆಸುವ ಸಂಘರ್ಷದ ಜೊತೆಯಲ್ಲಿ ಮೆರೆಯುವ ಆತ್ಯಂತಿಕ ಮಾನವೀಯ ಮೌಲ್ಯಗಳನ್ನು ಸಾಂಕೇತಿಕವೆಂಬಂತೆ ಹೀಗೆ ವಿಂಗಡಿಸಬಹುದು.

೧. ಸಹಜ ಸ್ಥಿತಿಯ ನೆಲೆ

೨. ಪ್ರತಿಭಟನಾತ್ಮಕ ನೆಲೆ

೩. ಮೌನದ ನೆಲೆ

ಅಮಾನವೀಕರಣದ ವೇಗ ಬಲಗೊಂಡಂತೆಲ್ಲ ಮಾನವೀಕರಣದ ದಾರಿ ಸ್ಪಷ್ಟವಾಗುತ್ತದೆ. ದಲಿತ-ಬಂಡಾಯದ ಸಂದರ್ಭದಲ್ಲಿ ಮಾನವೀಕರಣದ ನೆಲೆಯು ವ್ಯಕ್ತಿ ನೆಲೆಗಿಂತಲೂ ಸಾಮಾಜಿಕ ನೆಲೆಯೇ ಬಹುಮುಖ್ಯವಾಗಿದೆ. ಇದರ ಸ್ಪಷ್ಟತೆಯು ದೇವನೂರು ಮಹಾದೇವ ಅವರ 'ಕುಸುಮಬಾಲೆ' ಕುಂ.ವೀರಭದ್ರಪ್ಪರ 'ಕಪ್ಪು', ಅರವಿಂದ ಮಾಲಗತ್ತಿಯವರ 'ಕಾರ್ಯ' 'ಕುರುಮಯ್ಯ' ಮತ್ತು ಅಂಕುಶದೊಡ್ಡಿ, 'ಮಾಗಿ' ಮೊದಲಾದ ಕಾದಂಬರಿಗಳಲ್ಲಿ ಗೋಚರವಾಗುತ್ತದೆ. ಇವು ಒಂದಲ್ಲ ಒಂದು ರೀತಿಯಲ್ಲಿ ಮಾನವೀಯ ತತ್ವಗಳನ್ನು ಅಕ್ಷರಶಃ ಪಾಲಿಸುತ್ತವೆ.

"ಬಂಡಾಯ ಸಾಹಿತ್ಯ ಚಳುವಳಿಯ ಮುಖ್ಯ ತಳಹದಿ ಮಾನವೀಯತೆ. ಮನುಷ್ಯನನ್ನು ಮನುಷ್ಯನನ್ನಾಗಿ ನೋಡುವುದು ಚರಿತ್ರೆಯ ಕಟುವಾಸ್ತವಗಳ ಹಿನ್ನಲೆಯಲ್ಲಿ ಅರಿಯುವುದು, ಸರಿಯಾದ ವಿಧಾನವೆಂಬುದು ನಮ್ಮ ಭಾವನೆ. ಬದುಕಿನ ಭ್ರಮೆಗಳನ್ನು ಸೀಳಿ ವಾಸ್ತವವನ್ನು ಹುಡುಕುವುದು ಬಂಡಾಯ ಸಾಹಿತಿಗಳ ಸೃಜನಶೀಲ ಪ್ರಕ್ರಿಯೆ. ಈ ವಾಸ್ತವವನ್ನು ಕಂಡುಕೊಳ್ಳುತ್ತ ಅದರ ಸೂಕ್ಷ್ಮತೆಗಳನ್ನು ಸೂರೆಗೊಳ್ಳುವ ಶಕ್ತಿ ಸಾಹಿತ್ಯದಲ್ಲಿ ಪ್ರಕಟವಾಗಬೇಕು. ಒಬ್ಬೊಬ್ಬ ಸಾಹಿತಿ ಕಾಣುವ ಒಂದೊಂದು ಮಗ್ಗಲೂ ಒಗ್ಗೂಡಿ ಸಮಕಾಲೀನ ಬದುಕಿನ ನೈಜರೂಪ ಕಣ್ಣೆದುರು ಕಟ್ಟಬೇಕು. ಇದು ಇರುವ ಸ್ಥಿತಿಯನ್ನು ಬದಲಾಯಿಸುವ, ಹೊಸ ಬದುಕನ್ನು ಬಯಸುವ ಪ್ರೇರಣೆಯಾಗಬೇಕು. ನಮ್ಮ ಕೃತಿಗಳ ಸಿಟ್ಟು, ವ್ಯಂಗ್ಯ, ವಿಷಾದ, ವಿಡಂಬನೆ, ಅಸಹಾಯಕತೆಗಳ ಹಿಂದೆ ಮಾನವೀಯ ತುಡಿತವಿರಬೇಕು. ಇದು ಬಂಡಾಯ ಚಳುವಳಿಯ ಆಶಯ ಮತ್ತು ಜವಾಬ್ದಾರಿ"[೨೫೯]ಯಾಗಿ ದಲಿತ ಬಂಡಾಯ ಕಾದಂಬರಿಗಳಲ್ಲಿ ಪ್ರಕಟಗೊಂಡಿದೆ.

ದೇವನೂರು ಮಹಾದೇವರ 'ಕುಸುಮ ಬಾಲೆ'ಯನ್ನು ಒಂದು ಕಡೆ ದಲಿತ 'ಮಹಾಕಾವ್ಯ'ವೆಂಬ ಹೆಗ್ಗಳಿಕೆ ಇನ್ನೊಂದು ಕಡೆ ದಲಿತರ 'ನೇಣುಗಂಬ'ವೆಂಬ ಟೀಕೆಗಳ ಮಧ್ಯೆ ಅವಲೋಕಿಸಿದಾಗ, ದಲಿತ

ಜಗತ್ತಿನ ಮಾನವೀಯ-ಅಮಾನವೀಯ ಚಟುವಟಿಕೆಗಳು ಸ್ಪಷ್ಟವಾಗಿ ರಾಚುತ್ತವೆ. ದೇವನೂರು ಅವರು ಕಾದಂಬರಿಯಲ್ಲಿ ಅಕ್ಕಮಾದೇವಿ-ಹಟ್ಟಿ ಜೀತಗಾರ, ಕುಸುಮ-ಚೆನ್ನ, ಅಮಾಸ-ಭಗವತಿ, ಕೆಂಪಿ, ಎಂದು ಎರಡು ವಿರುದ್ಧ ಧ್ರುವಗಳನ್ನು ಕೂಡಿಸುವ ಪ್ರಯತ್ನ ಮಾಡಿದ್ದಾರೆ. ಈ ಕೆಳಜಾತಿ-ಮೇಲ್ಜಾತಿ ಹೆಣ್ಣು-ಗಂಡುಗಳ ಸಂಕರತೆಯ ಮೂಲಕ ಮಾನವೀಕರಣದ ಪ್ರಕ್ರಿಯೆಗೆ ಕೈ ಹಾಕಿದ್ದಾರೆ. ಇದು ಬುನಾದಿಯಿಂದಲೇ ಆರಂಭವಾಗಬೇಕಾದ ಕಾರ್ಯವೆಂದೂ ಮುಂದಿನ ಜನರೇಷನ್ ವರ್ಣಸಂಕರತೆಯ ನೆಲೆಯಲ್ಲಿ ಅಥವಾ ಮಾನವೀಕರಣದ ಚೌಕಟ್ಟಿನಲ್ಲಿ ತನ್ನ ಜೀವನವನ್ನು ಶುರುವಾತುಗೊಳಿಸುವ ಸಾಹಸ ಇದರದಾಗಿದೆ. ಈ ಅನೈತಿಕ ಸಂಬಂಧಗಳ ಮೂಲಕ ಪ್ರಬಲ ವರ್ಗ ಹಿತಮತ್ತನ್ನು ಪ್ರಶ್ನಿಸುತ್ತಾ ಅಧೀನ ಸಮುದಾಯಗಳ ಮನುಷ್ಯತ್ವದ ಹುಡುಕಾಟಕ್ಕೆ ತೊಡುಗುತ್ತಾರೆ. ವಾಸ್ತವಕ್ಕೆ ತೀರಾ ಹತ್ತಿರವಿದ್ದ ಅಂತಹ ಸಂಬಂಧದಿಂದಲೇ ತಮ್ಮ ಬದುಕನ್ನು ದರ್ಶನವಾಗಿಸುತ್ತಾ ಸಾಮಾಜಿಕ ಪರಿವರ್ತನೆಯ ವಾಹಿನಿಯಲ್ಲಿ ಒಂದಾಗುತ್ತವೆ. ದೇವನೂರು ಅವರು ಸಂಪ್ರದಾಯವಾದಿಗಳು ಅಮಾನ್ಯವೆಂದು ದೂರೀಕರಿಸಿದ್ದನ್ನು ಮಾನ್ಯ ಮಾಡುವುದರ ಮೂಲಕ ಪ್ರತಿಭಟಿಸತೊಡಗಿದರು. "ಪ್ರತಿಭಟನೆಯೆಂದರೆ ಆರ್ಭಟ ಇಲ್ಲವೆ ನಿಂದನೆ ಎಂದು ಭಾವಿಸುವ ಮಂದಿಗೆ ದೇವನೂರರ ಪ್ರತಿಭಟನೆ ಅರ್ಥವಾಗಲಾರದು"[೨೦] ಎನ್ನುವ ಪುರುಷೋತ್ತಮ ಬಿಳಿಮಲೆಯವರ ಮಾತು ದೇವನೂರರ ಪ್ರತಿಭಟನೆ ಈ ಎರಡೂ ಅರ್ಥಗಳಲ್ಲಿರದೆ ಮಾನವೀಯವಾದ ಅರ್ಥವನ್ನು ಕಟ್ಟಿಕೊಡುತ್ತದೆ.

ಇಲ್ಲಿಯ ಅನೈತಿಕ ಸಂಬಂಧಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಒಂದು ಮಾತು ಸ್ಪಷ್ಟವಾಗುತ್ತದೆ. ಮೇಲ್ವರ್ಗದ ಮೇಲ್ಜಾತಿಯ ಜನ ಇಂತಹ ಸಂಬಂಧಗಳನ್ನು ದೊಡ್ಡದು ಮಾಡಿ ಅವುಗಳಿಗೆ ಹಿಂಸೆ, ಕೊಲೆ, ಜೀವನಾಶದ ಮೂಲಕ ಪ್ರತಿಕ್ರಿಯಿಸಿದರೆ, ಕೆಳವರ್ಗದ ಕೆಳಜಾತಿಯ ಜನ ಇಂತಹ ಸಂಬಂಧಗಳಿಗೆ ಪ್ರಾಮುಖ್ಯತೆ ನೀಡದೆ, ಆ ಸಂಬಂಧದಿಂದ ಹುಟ್ಟಿದ ಕೂಸು ಕಂದಮ್ಮಗಳಿಗೆ ಮಹತ್ವ ನೀಡುವುದು ಅದರ ಜೀವಪರವಾದ ದಯಾಪರವಾದ ಮಾನವೀಯತೆಯ ಅಗಾಧತೆಯನ್ನು ತೋರಿಸುತ್ತದೆ. ಇಂತಹ ಅನೈತಿಕ ಸಂಬಂಧಗಳಿಗೆ ಕಾರಣರಾದವರನ್ನು ಕೊಲ್ಲಿಸುವ, ಹಿಂಸಿಸುವ ಪ್ರವೃತ್ತಿ ಒಂದು ಕಡೆ ಕಂಡು ಬಂದರೆ, ಅಂತಹ ಸಂಬಂಧಗಳಿಂದ ಚಿಗುರೊಡೆದ ಜೀವಗಳನ್ನು ಉಳಿಸುವ, ಬೆಳೆಸುವ ಮಾನವೀಯತೆಯ ದೊಡ್ಡ ಗುಣ ಮತ್ತೊಂದೆಡೆ ಕಾಣಿಸುತ್ತದೆ. ನಿದರ್ಶನಕ್ಕಾಗಿ ಕೆಂಪಿಯು ಷಂಡ ಗಂಡನಿಂದ ಮಕ್ಕಳ ಫಲಕಾಣದೇ ಅನೈತಿಕ ಸಂಬಂಧದಿಂದ ಹುಟ್ಟಿದ ಕೂಸನ್ನು ಉಳಿಸಿಕೊಳ್ಳುವಲ್ಲಿ ಅವಳ ತಾಯಿ ತೂರಮ್ಮ ಕಾವಲು ಯಜ್ಞ ನಡೆಸುವಳು. ಹಾತೆ ಹುಳುವೊಂದನ್ನು ಅದುಮಿ ಸಾಯಿಸಿ, "ಈ ಜೀವ್ವೇ ಆ ಜೀವಕ ನಡಿ"[೨೧] ಎಂದು ಮಂತ್ರೋಚ್ಚಾರಣೆ ಮಾಡಿ ಆಜ್ಞಾಪಿಸುತ್ತ ಪೀಡೆ ಪಿಶಾಚಿ ಮುಂತಾದ ಗಾಳಿ ಸಂಚಾರವಾಗದಂತೆ ನಾಗಬೆತ್ತದಲ್ಲಿ ಮಗುವನ್ನು ಸವರಿ ಮಂತ್ರಿಸುತ್ತ ಚಿಂತೆಯ ಭಾರವನ್ನು ಆ

ಮುಪ್ಪಿನನ ದೇಹ ಇಡೀ ರಾತ್ರಿ ಜೋಪಾಡಿಯ ಸುತ್ತ ಈಕೆ ಕಾವಲು ಕಾಯುವುದು ತಾಯಿ ದೇವತೆಯ ಅಪಾರವತಾರವೇ ಆಗಿದೆ.

ಕಾದಂಬರಿಯ ಮುಖ್ಯ ಪಾತ್ರವಾದ ಕುಸುಮಳು ಚೆನ್ನನ ಸಂಬಂಧದಿಂದ ಮಗುವನ್ನು ಹೆತ್ತು ಬಾಣಂತಿಯಾಗಿರುವಾಗ; ಸನ್ನಿ ಹಿಡಿದ ಬಾಣಂತಿ ಯಜಮಾನ ಸಂಸ್ಕೃತಿಯ ಕ್ರೌರ್ಯಕ್ಕೆ ಸಿಕ್ಕಿ ನಲುಗಿ ಹೋಗುತ್ತಾಳೆ. ಮಾಟ-ಮಂತ್ರ-ಯಂತ್ರಗಳಿಂದ ಅವಳ ಗಾಳಿ ಬಿಡಿಸಲು ಹೊರಟ ಮಾಂತ್ರಿಕರು ತಲೆಗೂದಲನ್ನು ಕತ್ತರಿಸುವುದು ಆ ಸಂಸ್ಕೃತಿಗೆ ಸ್ಮಾರಕ ನಿಲ್ಲಿಸಿದಂತಾಗುತ್ತದೆ. ಇಷ್ಟಾದರೂ ಹಿಂಸೆಯನ್ನು ಅನುಭವಿಸುತ್ತಲೆ ಕುಸುಮಳು ಮೆಲ್ಲಗೆ “I Want to be in my house” ಎಂದು ಹೇಳುವುದು ಮನುಷ್ಯತ್ವದ ಹುಡುಕಾಟವಾಗಿದೆ. ಬರಗೂರು ರಾಮಚಂದ್ರಪ್ಪರ ‘ಬೆಂಕಿ’ ಕಾದಂಬರಿಯ ಲಕ್ಷ್ಮಿಯೂ ಜಮೀನ್ದಾರ ಸಂಸ್ಕೃತಿಯ ಕ್ರೌರ್ಯಕ್ಕೆ ತನ್ನ ಗಂಡನನ್ನು ಕಳೆದುಕೊಂಡು ಮನೆಯಲ್ಲಿ ಕುಳಿತುಕೊಂಡು ನೇರ ದೃಷ್ಟಿಗಳಿಂದ ಜಮಿನ್ದಾರ ಸೀನಪ್ಪನನ್ನು ನೋಡಿ “ನಾನು ಹುಟ್ಟಿರೋದು ಸಾಯಕಲ್ಲ” ಎಂಬುದೂ ಜೀವಪರವಾಗಿದೆ.

ಈ ಕಾದಂಬರಿಯಲ್ಲಿ ಮನುಷ್ಯನ ನೆಲೆಗಳನ್ನು ಗುರ್ತಿಸುವುದಾದರೆ, ಈರಿಯು ತನ್ನ ಮಗುವನ್ನು ಉಳಿಸಿಕೊಳ್ಳಲು ಮಾಡುವ ಯಜ್ಞ, ಅಕ್ಕಮಾದೇವಮ್ಮ ಯಾಡನನ್ನು ಬೆಳೆಸುವ ಪರಿ, ಕೊಲೆಯಾದ ಚೆನ್ನನನ್ನು ಕಾಯುವ ತಂದೆ-ತಾಯಿಯರ ತಾಳ್ಮೆ. ಇವುಗಳನ್ನೆಲ್ಲಾ ನೋಡಿದಾಗ ಕುಸುಮಬಾಲೆ ಕಾದಂಬರಿಯು ನಿಜವಾದ ಮನುಷ್ಯನ ಹುಟುಕಾಟವಾಗಿದೆ.

ಕಂದಮ್ಮಗಳ ಜೀವರಕ್ಷಣೆಯಲ್ಲಿ ದಲಿತ-ಬಂಡಾಯ ಕಾದಂಬರಿಗಳ ಸ್ತ್ರೀ ಪಾತ್ರಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳುವ ಸಲುವಾಗಿ ಹೆಚ್ಚು ತುಡಿಯುವುದನ್ನು ಗುರ್ತಿಸುತ್ತೇವೆ. ಪುರುಷ ಪ್ರಧಾನ ಸಮಾಜದಲ್ಲಿ ಶೋಷಿತಳಾದ ಹೆಣ್ಣು ಯಾವುದೇ ಜಾತಿ ವರ್ಗದಲ್ಲಿದ್ದರೂ ಮಾನವತೆಗೆ ಮಿಡಿಯುತ್ತಾಳೆ.

ಕುಸುಮಬಾಲೆಯ ತೂರಮ್ಮನ ಹಾಗೆ ‘ಕುರುಮಯ್ಯ ಮತ್ತು ಅಂಕುಶದೊಡ್ಡಿ’ ಕಾದಂಬರಿಯ ಬುಡ್ನಮ್ಮನ ಮಗುವನ್ನು ಕೊರವರ ಹನುಮವ್ವ ಸಾಕುವುದು ಗ್ರಹಿಕೆಗೆ ಬರುತ್ತದೆ. ಬುಡ್ನಮ್ಮ ಮದುವೆಯಾಗಿದ್ದರೂ ಜಂಬಯ್ಯನೊಂದಿಗೆ ಸ್ನೇಹ ಬೆಳೆಸಿ, ಅವನೊಂದಿಗೆ ಸಂಸ್ಕಾರ ಮಾಡುವುದು ಅಮಾನವೀಯ ಎನ್ನಿಸುತ್ತದೆಯಾದರೂ, ಮೊದಲು ಮದುವೆಯಾದ ಕೊರವರ ಮಾರೆಪ್ಪ ದೈಹಿಕವಾಗಿ ಅನಾರೋಗ್ಯವಂತನಾಗಿ ತನ್ನ ಹೆಂಡತಿಯನ್ನೇ ಜಂಬಯ್ಯನಿಗೆ ಮಾರುವುದು ಇನ್ನೊಂದು ರೀತಿಯ ಅಮಾನವೀಯತೆ. ಈ ಮಾರುವಿಕೆಯಲ್ಲಿ ಹುಟ್ಟಿದ ಮಗುವು ತನಗೆ ಸೇರಬೇಕೆಂದು ಮಾರೆಪ್ಪ ವಶಮಾಡಿಕೊಳ್ಳುತ್ತಾನೆ. ಗಂಡ ಹೆಂಡತಿಯ ವಿಚ್ಛೇದನದ ಮಧ್ಯೆ ಮಗುವಿನ ಪರಿಸ್ಥಿತಿಯು

ಗಂಭೀರವಾದಾಗ, ಬುಡ್ಡಮ್ಮ ಮಾರೆಪ್ಪನ ಕಣ್ಣು ತಪ್ಪಿಸಿ, ಬುಡ್ಡಮ್ಮ ಹನುಮವ್ವ ಪರಸ್ಪರ ಕಂದನ ರಕ್ಷಣೆಯಲ್ಲಿ ತೊಡಗುವುದು ಮಾನವೀಯತೆಯ ಪ್ರತೀಕವಾಗಿದೆ. ಇಲ್ಲಿ ಬುಡ್ಡಮ್ಮ ಕೇವಲ ಲೈಂಗಿಕ ತೃಷೆಯಿಂದ ಜಂಬಯ್ಯನೊಂದಿಗೆ ಸಂಬಂಧವಿಟ್ಟುಕೊಂಡರೂ ತನ್ನದೇ ಆದ ಕುಡಿಯ, ರಕ್ಷಣೆಯಲ್ಲಿ ತೊಡಗುತ್ತಾಳೆ. ಹೀಗಾಗಿ ಅವಳಿಗೆ ಕಂದನ ಮೇಲೂ ಹಾಗೂ ಮಾರೆಪ್ಪನ ಮೇಲೂ ಅಂತಃಕರಣವಿದೆ. ಮಾರೆಪ್ಪ ಅನಾರೋಗ್ಯದಿಂದ ನರಳುತ್ತಿರುವಾಗ ವಿಚ್ಛೇದನವಾದರೂ ಅವನ ಸಹಾಯಕ್ಕೆ ಹೋಗುತ್ತಾಳೆ. ಹನುಮವ್ವ ಆ ಕಂದನ ತಾಯಿಯಾಗಿ ಪಾಲನೆಗೊಳ್ಳುತ್ತಾಳೆ. ಅಲ್ಲದೇ ಬುಡ್ಡಮ್ಮನಿಗೆ ಮಗನನ್ನು ಗುಟ್ಟಾಗಿ ಭೇಟಿ ಮಾಡಿಸಿ ತಾಯಿ ಮಗನ ಸಂಬಂಧ ಮತ್ತಷ್ಟು ಗಾಢಗೊಳಿಸಲಿಕ್ಕೆ ಯತ್ನಿಸುತ್ತಾಳೆ. ಇದು ಮನುಷ್ಯ ಮನುಷ್ಯನನ್ನಾಗಿ ಕಾಣುವ ಗುಣವಾಗಿದೆ. ಮನಜರವರ 'ಮಾಗಿ' ಕಾದಂಬರಿಯಲ್ಲೂ ಮಾಗಿಯ ಬದುಕು ದುಸ್ತರವಾದಾಗ ಆಕೆಯ ಮಕ್ಕಳು ಹಸಿವಿನಿಂದ ಬಳಲುತ್ತಿರುವಾಗ ಮಾಗಿಯ ತಾಯಿ ಆ ಮಕ್ಕಳನ್ನು ಸಾಕುವುದು ಗ್ರಹಿಕೆಗೆ ಬರುತ್ತದೆ.

'ಕುರುಮಯ್ಯ ಮತ್ತು ಅಂಕುಶದೊಡ್ಡಿಯಲ್ಲಿ' ಬರುವ ಹರಿಜನ ಮುದುಕಿಯ ಪಾತ್ರ ನಿಜವಾದ ಮಾನವೀಯತೆಯನ್ನು ಮೆರೆಯುತ್ತದೆ. ಏಕೆಂದರೆ, ಕೊರವರ ಮಾರೆಪ್ಪ ಅನಾರೋಗ್ಯದಿಂದ ಬಳಲಿ ದುಡಿಯಲು ಶಕ್ತಿ ಹೀನನಾದಾಗ ಭಿಕ್ಷೆ ಬೇಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿರುತ್ತಾನೆ. ಒಂದು ಸಂದರ್ಭದಲ್ಲಿ ಊರಲ್ಲಿ ಯಾರು ಭಿಕ್ಷೆ ನೀಡದಿರುವಾಗ ಹರಿಜನ ಮುದುಕಿ "ಯಾವಾಗಿನಿಂದ ಉಪಾಸ ಬಿದ್ದಿದ್ದ್ಯೋ.... ತಗೋ ರಾತ್ರಿಗಿ ತಿನುವಂತಿ"[೧೨೨] ಎಂದು ಜೋಳದ ರೊಟ್ಟಿಕೊಡುತ್ತಾಳೆ. ಮಾರೆಪ್ಪ ಕೊರವಳಲ್ಲದ ಹರಿಜನ ಜಾತಿಯ ಮುದುಕಿಯಿಂದ ಭಿಕ್ಷೆ ಪಡೆದದ್ದುಕ್ಕಾಗಿ ಕೊರವರ ಸಮುದಾಯಗಳಿಗೆ 'ಜಾತಿ'ಯೇ ಮುಖ್ಯವಾಗುತ್ತದೆ. ಮಾರೆಪ್ಪಗೆ ಹಸಿವು ಮುಖ್ಯವಾಗುತ್ತದೆ. ಜಾತೀಯತೆಯ ವೈಭವೀಕರಣಕ್ಕೆ ಬದಲಾಗಿ ಮಾನವೀಕರಣ ಮುಖ್ಯವಾಗುತ್ತದೆ. ಹಸಿದ ಹೊಟ್ಟೆಗೆ ಆಹಾರ ಪಡೆಯುವುದು ಶಾಪವಾಗಿ ಪರಿಣಮಿಸಿದೆ. ಆಹಾರಕ್ಕೆ ಯಾವ ಜಾತಿಯ ಪ್ರಶ್ನೆ ಕಾಡದು, ಆದರೂ ಮಾನವ ಇಂತಹ ವಿಷಯಗಳಿಗೆ ಒತ್ತುಕೊಟ್ಟು ಅಮಾನವೀಯತೆಯೆಡೆಗೆ ಸಾಗುತ್ತಾನೆ.

ಕೊರವರ ಕುರುಮಯ್ಯನ(ಯಜಮಾನಿಕೆಯಲ್ಲಿ) ಪಂಚಾಯ್ತಿಯಲ್ಲಿ ಮಾರೆಪ್ಪನನ್ನು ಅವಮಾನಿಸಲಾಗುತ್ತದೆ. "ಈ ರೊಟ್ಟಿನ ಮಾದಿಗರಿಂದ ಬೇಡಿಕಂಡು ತಂದಾನ, ಈ ಬೇಡಿ ಕುಕ್ಕ"[೧೨೩] ಎಂದು ಗ್ಯಾನಪ್ಪ ದೂರುವೆಸಗುತ್ತಾನೆ. ಆದರೆ ಕುರುಮಯ್ಯನು "ಬೇಡಿಕಂಡು ತಿನಾಕ ಬ್ಯಾರಿ ಜಾತಿಯದ್ರ ಮನಿಸಿಗಲಿಲ್ಲೇನೋ ನಿನ್ಗ. ಅಕಡಿ ಈಕಡಿ ವೋಗಿ ಸರೀಕ ಮಂದ್ಯಾಗ, ಹೊಲೇರ ಮಂದ್ಯಾಗ ಬೇಡಿ ಕುಕ್ಕ ಯಾಕ ಮಾಡಿದಿ, ಹಸಿವಾಗಿದ್ರೆ ತಾಂಡೆದ ಮಂದಿಗೆ ಕೇಳಬೇಕಿತ್ತೋ ದೊಡ್ಡ ಕುಲದವ್ರ ಮನ್ನಿ ವೋಗಬೇಕಿತ್ತೊ"[೧೨೪] ಎನ್ನುವ ಮಾತು ಗುಲಾಮಿ ಪದ್ಧತಿಯೆಡೆಗೆ ಚಲಿಸುವುದನ್ನು ಗುರ್ತಿಸಬಹುದು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮೇಲ್ಜಾತಿಯವರು ನೀಡುವ ತಂಗಳ ಅನ್ನಕ್ಕಿಂತ ಕೆಳಸಮುದಾಯ ನೀಡುವ ತಾಜಾ ಆಹಾರದ ಭಿಕ್ಷೆ ಒಳಿತು. "ಮೇಲ್ಜಾತಿಯವರು ತಮ್ಮ ಅನಿಷ್ಟಗಳನ್ನು ತೊಲಗಿಸಲು ಅನ್ನದಲ್ಲಿ ಕೂದಲು, ಉಗುರುಗಳನ್ನು ಬೆರೆಸಿ, ದಕ್ಷಿಣೆಯಿಟ್ಟು ಕೊರವರ ಸ್ತ್ರೀಯರಿಗೆ ಧಾನ ನೀಡುತ್ತಾರೆ." ಹರಿಜನ ಮುದುಕಿ ಭಿಕ್ಷೆ ನೀಡಿದುದುಕ್ಕಿಂತ ಇಂತಹ ದಾನ ನೀಡುವುದು ಅಮಾನವೀಯವಾಗಿದೆ. ಮನುಷ್ಯತ್ವದ ಗುಣಹೊಂದಿರುವ ಕುರುಮಯ್ಯ ಈ ತರಹ ತಪ್ಪು ಮಾಡಬಾರದೆಂದು ಎಚ್ಚರಿಕೆ ನೀಡಿ, ಕೊರವರ ಸಮುದಾಯದಿಂದಲೇ ಪ್ರತಿಯೊಬ್ಬರು ಸರದಿಯಂತೆ ಮಾರೆಪ್ಪಗೆ ಊಟಕಳಿಸುವ ಪದ್ಧತಿಯನ್ನು ಜಾರಿಗೆ ತರುತ್ತಾನೆ. ಇಂತಿಲ್ಲಿ ಕುರುಮಯ್ಯ, ಮಾರೆಪ್ಪನಂತಹ ದೈಹಿಕವಾಗಿ ದುರ್ಬಲನಾದವನಿಗೆ ಈ ರೀತಿ ಮಾನವ ಪ್ರೇಮ ಕಾಣುವುದು ಮಾನವೀಯತೆಯಾಗಿದೆ. ವಾಸ್ತವವಾಗಿ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಸರ್ಕಾರ ಇಂತಹ ದುರ್ಬಲರಿಗೆ ವೃದ್ಧವೇತನ, ಭಿಕ್ಷುಕರ ವಸತಿಯನ್ನು ತೆರೆದಿದೆ. ಆ ಮೂಲಕ ಸರ್ಕಾರವೂ ಇಂಥ ಮಾನವತೆ ಕಡೆಗೆ ಹೊರಳಿದೆ. ಆದರೆ ಜಾತಿ ಆಧಾರಿತ ಸಮಾಜದಲ್ಲಿ ಇಂಥವರ ಬದುಕು ನೀರಸವಾಗಿರುತ್ತದೆ.

ದಲಿತ ಬಂಡಾಯ ಕಾದಂಬರಿಗಳು "ಜನಪರವಾದ ನಿಲುವನ್ನು ಪ್ರಕಟಪಡಿಸುವುದು ಹಾಗೂ ಅಮಾನವೀಯತೆಯನ್ನು ಪ್ರತಿಭಟಿಸುತ್ತ ಮಾನವೀಯ ಪರ್ಯಾಯಗಳಿಗೆ ಆಸೆ ಪಡುವುದು ಇಲ್ಲಿಯ ಸೃಜನಶೀಲತೆಯ ಮುಖ್ಯ ಕಾಳಜಿಯಾಗಿದೆ."[೧೨೫] ಇಲ್ಲಿ ಲೇಖಕರು "ಮಾತೃತ್ವ-ಮಾನವತೆ ಯಾವ ಜಾತಿಯನ್ನು ಮೀರಿದುದ್ದು. ಇದರ ಧ್ವನಿ ಹಾರ್ಡಿಯ Dynasts ನಂತೆ ಇದೆ. ರಾಜ್ಯಗಳು ಏಳಬಹುದು, ಬೀಳಬಹುದು. ಆದರೆ ಎಲ್ಲಿಯ ತನಕ ಕಷ್ಟಜೀವಿಗಳಲ್ಲಿ ಮಾನವತೆ ಮಿಡಿಯುತ್ತಿರುತ್ತದೆಯೋ ಅಲ್ಲಿಯ ತನಕ ಮನುಕುಲದ ಭವಿಷ್ಯದ ಬಗ್ಗೆ ಚಿಂತಿಸಬೇಕಾಗಿಲ್ಲ."[೧೨೬]

ಆರ್ಥಿಕವಾಗಿ ದುರ್ಬಲವಾದ ಸ್ತ್ರೀಲೋಕಕ್ಕೊಂದು ಶಾಪವಾಗಿರುವ(ಬಸವಿ ಬಿಡುವ ಸಂಪ್ರದಾಯದ) ವೇಶ್ಯಾ ಸಮಸ್ಯೆಯನ್ನು ಕುಂ.ವೀ.ಯವರು 'ಕಪ್ಪು' ಕಾದಂಬರಿಯಲ್ಲಿ ಪ್ರಕಟಿಸಿದ್ದಾರೆ. ವೇಶ್ಯಾ ಸಮಸ್ಯೆಯ ಸಂಕೋಲೆಯಿಂದ ಹೊರ ಬರಬೇಕೆಂದು ಪ್ರಯತ್ನಿಸಿ ವಿಫಲವಾಗುವ ಹೆಣ್ಣಿನ ಕಥಾನಕವಾಗಿದೆ. ಬಸವಿ ಮಾಡುವ ಸಂಪ್ರದಾಯವನ್ನು ಮುಂದುವರೆಸುತ್ತಿದ್ದ ಮಾಸೂರಿನ ಹಾಗೂ ಬಾಸೂರಿನ ಸಣ್ಣುದ್ರ, ಕರೀಗೌಡ ಜಮೀನ್ದಾರರು ನಾಶಗೊಂಡರೂ ಊರಿನ ಇತರರ ತೆವಲು ತೀರುವುದಿಲ್ಲ. ಜಮೀನ್ದಾರರು ನಾಶಗೊಂಡ ನಂತರ 'ಗೌರಿ' ತಾನು ಸಮಾಜ ಗೌರವದ ಹೆಣ್ಣಾಗಿ ಮದುವೆ ಮಾಡಿಕೊಂಡು ಬದುಕಬೇಕೆಂಬ ಆಶೆ ಇರುತ್ತದೆ. ನಿರೂಪಣೆಯಲ್ಲಿ "ನಾನು ಬಸವಿಯಲ್ಲ. ನಾನು ಎಲ್ಲರಂಗೆ ಮದ್ವಿ ಆಗ್ತೀನಿ... ನಡೋ ಊರಾಗಿರ್ತೀನಿ. ನಂಗೂ ಮನೆ ಮಾರು ಇದೆ."[೧೨೭] ಎಂಬಲ್ಲಿ ಗೌರಿಯ ಅಂತಃಕರಣಕ್ಕೆ ಪುರುಷ ಪ್ರಧಾನ ಸಮಾಜದ ಮನಸ್ಸುಗಳು ಸಾಮೂಹಿಕವಾಗಿ "ನೀನು

ಬಸವಿ... ನೀನು ಗಂಡಸ್ರನ್ನ ಸುಧಾರ್ಸೋದು ನಿನ್ನ ಧರ್ಮ. ಆ ಬ್ರಮ್ಮ ಬರೆದಿದ್ದಾನೆ ನಿನ್ನ ಹಣೇ ಮ್ಯಾಗೆ, ನೀನು ಬಸವಿಯಾಗಿ ಇರ್ಬೇಕಂತ''[೧೨೮] ಎಂದು ಅಮಾನವೀಯವಾಗಿ ಬಸವಿಯ ಪಟ್ಟಕಟ್ಟುತ್ತಾರೆ. ಅಂದರೆ, ಸಮಾಜದಲ್ಲಿ ಒಂದು ಹೆಣ್ಣು ಬಹಿಷ್ಕಾರಿಸಲ್ಪಟ್ಟರೆ, ಅವಳಿಂದ ಲಾಭದ ನಿರೀಕ್ಷೆಯನ್ನು ಮಾಡುತ್ತಾರೆ. ಆದರೆ, ಅವಳ ಸ್ವಾತಂತ್ರ ಬದುಕಿಗೆ ಸ್ಪಂದಿಸಲಾರರು. ''ಪುರುಷ ಮಹಿಳೆಯನ್ನು ಮೊದಲು ಸಾಕು ಪ್ರಾಣಿ'' ಎಂದು ಭಾವಿಸಿರುವುದು ಮತ್ತು ಸಂಪ್ರದಾಯಗಳ ಕಗ್ಗತ್ತಲೆಯಲ್ಲಿ ಜೀವಿಸುವ ಅರೆಜ್ಞಾನದ ಮಹಿಳೆ. ಈ ಅಂಶಗಳೂ ಸಹ ಮಹಿಳೆ ಹಿಂದುಳಿದಿರುವುದಕ್ಕೆ ಅಥವಾ ಶೋಷಣೆಗೆ ಒಳಗಾಗಲು ಕಾರಣವಾಗಿವೆ.''[೧೨೯] ಹೀಗಾಗಿ ಬಸವಿಯಂತಹ ಶಾಪ ವಿಮೋಚನೆಯಾಗದೇ ಗೌರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಂತಹರಲ್ಲಿ ಆ ಸಮಾಜದ ಕಟ್ಟುಪಾಡುಗಳು ಮಾನವತೆಗೆ ಧಕ್ಕೆಯನ್ನುಂಟು ಮಾಡುತ್ತವೆ. ಗೌರಿ ಇಂಥ ಶೋಷಣೆಯ ನಡುವೆ ಬದಕಲು ಬಯಸಿದ್ದು ಅವಳ ಜೀವಪರ ಧೋರಣೆಯಾಗಿತ್ತು.

ಧರ್ಮ, ಸಂಪ್ರದಾಯ, ಓಕುಳಿ ಹಾಕುವುದು, ಹೆಣ್ಣನ್ನು ಶೋಷಿಸುವ ಅಸ್ತ್ರಗಳಾಗಿವೆ. ಇವುಗಳ ಹಿಂದೆ ಜಮೀನ್ದಾರರು, ಧರ್ಮ ಕೆಲಸ ಮಾಡುತ್ತಿರುತ್ತಾರೆ. ಹೆಣ್ಣೊಬ್ಬಳು ಅಬಲೆಯಾದಾಗ ಇಂಥ ಅಸ್ತ್ರಗಳನ್ನು ಶೋಷಕವರ್ಗ ಬಳಸಿಕೊಳ್ಳುತ್ತಿರುತ್ತವೆ. ಇಂಥದೊಂದು ಪ್ರಸಂಗ ಬಿ.ಟಿ.ಲಲಿತನಾಯ್ಕರಾ 'ಗತಿ' ಕಾದಂಬರಿಯಲ್ಲಿ ಬರುವ 'ಲಚ್ಮಿ' ಪಾತ್ರವು ಕುತಂತ್ರ ಮಠಾಧಿಪತಿಗಳ ಶೋಷಣೆಗೊಳಗಾಗಿ ಬದುಕುಳಿಯುವುದು ಗ್ರಹಿಕೆಗೆ ಬರುತ್ತದೆ. ಲಚ್ಮಿ ಗಂಡ ಮಕ್ಕಳನ್ನು ಕಳೆದುಕೊಂಡು ಆಸ್ಪತ್ರೆಯಲ್ಲಿ ನರಳುತ್ತಿರುವಾಗ ಧರ್ಮ ಗುರುವಿನ ಸಹಾಯವನ್ನು ಪಡೆಯುತ್ತಾಳೆ. ಈ ಗುರುವು ಆಶ್ರಯ ನೀಡುವ ನೆಪದಲ್ಲಿ, ಧರ್ಮದ ಪ್ರವಚನಗಳನ್ನು ಭೋಧಿಸುತ್ತಲೇ ಲಚ್ಮಿಯನ್ನು ಬಲತ್ಕಾರವಾಗಿ ಲೈಂಗಿಕತೆಗೆ ತೊಡಗಿಸಿಕೊಳ್ಳುತ್ತಾನೆ. ಬಸುರಿಯಾಗಿ ಮಾಡಿ ನಂತರ ಗರ್ಭಪಾತ ಮಾಡಿಸುತ್ತಾನೆ. ಇಂಥ ಸಂದರ್ಭದಲ್ಲಿ ಲಚ್ಮಿ ಎಷ್ಟೇ ಪ್ರತಿಭಟಿಸಿದರೂ ಆ ಮಠದ ಹೆಣ್ಣು ಮಕ್ಕಳು ಬಂದು ''ಹಿಂಗ್ಯಾಕ ಒದರಾಡ್ತಿದ್ದಿ? ನೋವು ಬಂದಾಗಲೆಲ್ಲ ಶಿವನ ಜಪಮಾಡು, ತಾನೇ ಕಮ್ಮಿ ಅಕ್ಕತಿ. ಹೆಣ್ಣು ಮಕ್ಳು ಗದ್ಲ ಮಾಡದ್ಹಂಗ ನೋವು ನುಂಗೋದು ಕಲಿಬೇಕು. ಹಿಂಗೆಲ್ಲಾ ಚೀರಾಡಿ ಮಠದ ಮಾನ ಕಳೀಬಾರದು!''[೧೩೦] ಎಂದು ಹೇಳುವಲ್ಲಿ ಅಮಾನವೀಯವಾಗಿ ವರ್ತಿಸುತ್ತಾರೆ. ಆದರೂ ಅಲ್ಲಿಂದ ಪಾರಾಗಿ 'ದಿಬ್ಬ' ತಾಂಡ್ಯೆದಲ್ಲಿ ಬದುಕು ಸಾಗಿಸುವುದು ಅವಳ ಅದಮ್ಯ ಬದುಕಿನ ಹೋರಾಟದ ಪ್ರತೀಕವಾಗಿದೆ.

ಮಾನವನ ಜೀವನವು ಧರ್ಮವನ್ನು ಆಶ್ರಯಿಸಿದಾಗ ಮಾನವೀಕರಣವು ಮರೆಯಾಗಿ ಬಿಡುತ್ತದೆ. ಧರ್ಮವೇ ಬೇರೆ ಮಾನವೀಯತೆಯೇ ಬೇರೆ ಎರಡೂ ಸರಳ ರೇಖೆಯಾಗಬಹುದೇನೋ? ಈ 'ಮಾನವ ಧರ್ಮದ' ನಿರ್ಮಾಣ ಮಾತ್ರ ಕಷ್ಟದ ಕೆಲಸವಾಗಿದೆ.

ಬಿ.ಟಿ.ಲಲಿತನಾಯ್ಕ ಇದೇ ಕಾದಂಬರಿಯಲ್ಲಿ ಮನುಷ್ಯನ ನೆಲೆ ಕಂಡುಕೊಳ್ಳುವ ಪಾತ್ರ ಸೋನಿ. ಸೋನಿ ಗಂಡನ ಕಿರುಕುಳ ತಾಳಲಾರದೇ ಸ್ವತಂತ್ರ ಬದುಕನ್ನು ರೂಪಿಸಲು ಮುಂದಾಗುತ್ತಾಳೆ. ಸಾಮಾಜಿಕ ಪರಿವರ್ತನೆಯ ಕ್ರಿಯೆಯಲ್ಲಿ ಸೋನಿ ಪ್ರಮುಖಳಾಗುತ್ತಾಳೆ. ತನ್ನ ಗಂಡ ಮತ್ತು ಮಾವ ತನ್ನ ಮೇಲೆ ನಡೆಸುವ ದಬ್ಬಾಳಿಕೆಯನ್ನು ಪೂಜಾರಿ ಕಾಶಪ್ಪ ಮೇಲೆ ಪದಾರರಂಥವರ ಕುತಂತ್ರಗಳನ್ನು ಪಂಚರಿಂದಾದ ಅನ್ಯಾಯವನ್ನು ಸೋನಿಬಾಯಿ ಅಸಹಾಯಕಳಾಗಿ ಒಪ್ಪಿಕೊಳ್ಳುವುದಿಲ್ಲ. ದೈಹಿಕ, ಮಾನಸಿಕಯಾತನೆಯನ್ನು ಅನುಭವಿಸಿಯೂ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುತ್ತಾಳೆ. ಅವಳ ಈ ಹೋರಾಟದಲ್ಲಿ ಲಚ್ಮಿಯ ಅನುಕಂಪ, ಚಂದುವಿನ ಮಾರ್ಗದರ್ಶನ ದೊರಕುವುದು ನಮ್ಮ ಸಮಾಜವನ್ನು ಜೀವ ಹಿಡಿದಿರುವುದರ ಸಂಕೇತವಾಗಿದೆ. ಇಂಥ ಶೋಷಣೆಯನ್ನು ಅನುಭವಿಸಿಯೂ 'ಆತ್ಮಹತ್ಯೆ' ಮಾಡಿಕೊಳ್ಳದಿರುವುದು ಅವಳ ಜೀವಪರಧೋರಣೆಯಾಗಿದೆ. ಈ ಸಾಲಿಗೆ ಸೇರುವ ಅಕ್ಕಮಾದೇವಮ್ಮ 'ಮಾಗಿಯ' ಮಾಗವ್ವ ಗಮನಾರ್ಹವಾಗುತ್ತಾರೆ.

'ಬಸವರಾಜ ಸಬರದ ಹೇಳುವಂತೆ "ಮಾಗಿಯ ಪಾತ್ರದ ವೈವಿಧ್ಯತೆಯ ಬಗೆಗೆ ಆಲೋಚಿಸುತ್ತ ಹೋದರೆ, ಮಾಗಿ ಬಹಳ ವಿಶಿಷ್ಟವಾಗಿ ಕಾಣುತ್ತಾಳೆ. ಮಹಾಭಾರತದ ಕುಂತಿಯ ನೆನಪು ತರುತ್ತಾಳೆ. ಅನೇಕ ಕಷ್ಟ-ನಷ್ಟಗಳ ನಡುವೆ; ಸೋಲು-ಗೆಲುವುಗಳ ನಡುವೆ ಜೀವನದಿಯಾಗಿ ಹರಿಯುತ್ತಾ ಬದುಕಿನ ಮಹತ್ವವನ್ನು ಸಾರಿ ಹೇಳುತ್ತಾ ಮಾನವೀಯತೆಯ ಸಂಕೇತವಾಗುತ್ತಾಳೆ."[೧೩೧] ಅವಳ ಮಾನವತೆಯ ದೃಷ್ಟಿಯಿಂದಲೇ ಗಂಡ ಗಿರಿಯಪ್ಪನನ್ನು ಚಿತ್ರಹಿಂಸೆ, ಅತ್ತಿಗೆ-ನಾದಿನಿಯರ ಹೊಟ್ಟೆಕಿಚ್ಚು ಭಾವ ಮೈದುನರ ಹಿಂಸೆ, ಮಕ್ಕಳಿಂದ ಅವಮಾನ ಇವೆಲ್ಲದರ ನಡುವೆಯೂ ಶೋಷಣೆಗೊಳಗಾಗಿ ಬದುಕಿನ ಅದಮ್ಯ ಆಸೆಯನಿಟ್ಟುಕೊಂಡು ಬೆಳಗುವಳು. ಮಾಗಿಯ ಮನುಷ್ಯತ್ವವನ್ನು ನಿದರ್ಶನದ ಮೂಲಕ ಹೇಳಬೇಕೆಂದರೆ, ಗಿರಿಯಪ್ಪ ಕುಡಿದು ಅಮಾನುಷವಾಗಿ ವರ್ತಿಸಿ, ಹಿಂಸಿಸಿ, ಅವಮಾನಿಸಿದಾಗಲೂ, ಭಾವ ಚಾಮನ ಆಸ್ತಿ ದುರಾಸೆ ಮೇರೆಗೆ ಗಿರಿಯಪ್ಪನನ್ನು ಬೇರೆ ಹೆಣ್ಣನ್ನು ಹುಡುಕಿ ಮದುವೆ ಮಾಡಿಸಿದಾಗಲೂ, ಚಾಮ ಗಿರಿಯಪ್ಪನಿಗೆ ತೋಟದಲ್ಲಿ ಕೊಲೆ ಮಾಡಿದಾಗ, ಬದುಕುಳಿದ ಗಿರಿಯಪ್ಪನನ್ನು ಮನೆಗೆ ತಂದು ಕಾಪಾಡುವುದು ಮಾಗಿಯ ಅಂತರಾತ್ಮದ ಭಾವನೆಯು ತೀವ್ರ ಮಾನವೀಯತೆಯನ್ನು ತೋರಿಸುತ್ತದೆ.

'ಹಾಳ್ ಮುಕ್ಕಾ ಮನೇ ಮನೇ ಎಂಬಲ್ ಬುದ್ದೀ ಬಿಟ್ಟು ಮಕ್ಕಳ್ಗೆ ಅಪ್ಪಾಗಿ, ಯೆಡ್ತೀರಿಗೆ ಗಂಡ್ನಾಗಿ, ಮನ್ಗೇ ಯಜಮಾನ್ನಾಗಿ ಮನೇಲಿರ್ಲೀ ಅಷ್ಟೇ ಸಾಕು"[೧೩೨] ಗಂಡನಿಂದ ಇಷ್ಟೆಲ್ಲಾ ಅನುಭವಿಸಿದರೂ ಗಂಡನನ್ನು ಉಳಿಸಿಕೊಳ್ಳುವ ಮಾಗಿಯ ಮನುಷ್ಯತ್ವವು ಉತ್ಕೃಷ್ಟವಾದುದು.

ಇಲ್ಲಿ ಮನುಷ್ಯನ ಹುಡುಕಾಟಗಳಿಗೆ ಸ್ತ್ರೀ ಪಾತ್ರಗಳೇ ಹೆಚ್ಚು ಹಂಬಲಿಸುತ್ತವೆ. ಈ ಪಾತ್ರಗಳು ವ್ಯವಸ್ಥೆಯ ಒಳಗಿನ ಹಾಗೂ ಹೊರಗಿನ ಎರಡೂ ಶಕ್ತಿಗಳಿಂದಲೂ ಶೋಷಣೆ ಅನುಭವಿಸುತ್ತವೆ. ಹಾಗಾಗಿ ಆ ಶೋಷಣೆಗೆ ಒಳಗಾಗಿಯೂ ಬದುಕಿನ ಅದಮ್ಯ ಆಸೆಯನಿಟ್ಟುಕೊಂಡು ಮಾನವೀಯತೆ ಮೆರೆಯುವುದನ್ನು ಈ ತಾತ್ವಿಕತೆಯಲ್ಲಿ ಗುರುತಿಸಬಹುದು. ಆದರೆ ಕೆಳವರ್ಗದ ಗಂಡು ಪಾತ್ರಗಳೂ ಸೇರಿದಂತೆ ಎಲ್ಲ ಗಂಡು ಪಾತ್ರಗಳು ಶೋಷಕ ಪ್ರತಿನಿಧಿಗಳಾಗಿ ಕಾಣುತ್ತಾರೆ. ಇವರು ಲೈಂಗಿಕ ಹಿತಾಸಕ್ತಿಗನುಗುಣವಾಗಿ ಹೆಣ್ಣುಗಳನ್ನು ಬಳಸಿಕೊಳ್ಳುತ್ತಾರೆ. ಆದರೆ ಸ್ತ್ರೀ ಪಾತ್ರಗಳು ತನ್ನ ಹಿತಕ್ಕಾಗಿಯೂ ಹಾಗೂ ಇತರರ ಹಿತಕ್ಕಾಗಿಯೂ ಹಂಬಲಿಸುತ್ತವೆ. ಈ ಹಂಬಲಿಕೆ ಸ್ತ್ರೀಯರ ಸಹಜ ಗುಣಗಳಲ್ಲೊಂದಾಗಿದೆ. ಹಾಗಾಗಿ ತಮ್ಮ ಮೇಲೆ ಆಗುವ ಶೋಷಣೆಗೆ ಜಾಗೃತಗೊಂಡು ಜೀವಪರಕ್ಕಾಗಿ ಪರ್ಯಾಯ ಹುಡುಕಾಟಗಳಿಗೆ ಅಣಿಗೊಂಡಿರುವುದನ್ನು ಕಾಣಬಹುದು.

## ಕೊನೆಟಿಪ್ಪಣಿ

೧. ಬರಗೂರು ರಾಮಚಂದ್ರಪ್ಪ, ಸಾಹಿತ್ಯ ಮತ್ತು ಸೃಜನಶೀಲತೆ, ೧೯೮೯, ಪು.೩.

೨. ಜವರಯ್ಯ ಮ.ನ., ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ೧೯೯೬, ಪು.೬೧

೩. ಉದ್ಧೃತ : ಭಂಡಾರಿ ಆರ್.ವಿ., ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ, ೧೯೯೩, ಪು.೧೬೬.

೪. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ೧೯೯೩, ಪು.೪೮

೫. ರಹಮತ್ ತರೀಕೆರೆ, ಮರದೊಳಗಿನ ಕಿಚ್ಚು, ೧೯೯೬, ಪು.೧೨೨

೬. ವಿಶ್ವನಾಥ್ ಕಾರ್ನಾಡ, ತುಳುವರ ಮುಂಬಾಯಿ ವಲಸೆ, ೧೯೯೪, ಪು.೩೬.

೭. ಸಿದ್ಧಲಿಂಗಯ್ಯ, ಹಕ್ಕಿನೋಟ, ೧೯೯೦, ಪು.೩೦

೮. ಜವರಯ್ಯ ಮ.ನ., ಮಾಗಿ, ೧೯೮೭, ಪು.೨೯

೯. ದೇವನೂರು ಮಹಾದೇವರ ಕೃತಿಗಳು, ಕುಸುಮ ಬಾಲೆ, ೧೯೯೨, ಪು.೧೦೪.

೧೦. ದೇವನೂರು ಮಹಾದೇವರ ಕೃತಿಗಳು, ಕುಸುಮ ಬಾಲೆ, ೧೯೯೨, ಪು.೧೧೫

೧೧. ಅದೇ, ಪು.೧೧೪

೧೨. ಪ್ರಭಾಕರ್ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪು.೨೨

೧೩. ದೇವನೂರು ಮಹಾದೇವರ ಕೃತಿಗಳು, ಕುಸುಮ ಬಾಲೆ, ೧೯೯೨ ಪು.೧೪೪

೧೪. ಉದ್ಧೃತ: ಆರಾಧ್ಯ, ಬಿ.ಎಂ.ಎ., ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ೧೯೮೫, ಪು.೨೦೬

೧೫. ದೇವನೂರು ಮಹಾದೇವ, ಕುಸುಮ ಬಾಲೆ, ೧೯೯೨, ಪು.೧೩೨.

೧೬. ಅದೇ, ಪು.೧೩೧

೧೭. ಅದೇ, ಪು.೧೬೨

೧೮. ಶಂಕರ್ ಡಿ.ಎ., ಅಸ್ಪೃಶ್ಯ, ೧೯೮೪, ಪು.೭೦.

೧೯. ಅದೇ, ಪು.೮೮

೨೦. ಶಂಕರ್ ಡಿ.ಎ., ಅಸ್ಪೃಶ್ಯ, ೧೯೮೪, ಪು.೧೫೭.

೨೧. ಅದೇ, ಪು.೧೭೪.

೨೨. ಬಸವರಾಜ ಸಬರದ, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೬೨.

೨೩. ಸಾಹಿತ್ಯ ವಿಮರ್ಶೆ, ೧೯೯೧, ಪು.೧೩೪

೨೪. ಅಕ್ರಮ ಸಂತಾನ, ಆತ್ಮಚರಿತ್ರೆ, ೧೯೯೨, ಪು. ೫೦

೨೫. ಅರವಿಂದ ಮಾಲಗತ್ತಿ, ದಲಿತಪ್ರಜ್ಞೆ, ೨೦೦೦, ಪು.೧೧

೨೬. ದೇವನೂರು ಮಹಾದೇವ, ಕುಸುಮ ಬಾಲೆ, ೧೯೯೨, ಪು.೧೩೩

೨೭. ಅದೇ, ಪು.೧೩೪

೨೮. ಉದ್ಧೃತ: ಮನಜ, ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ, ೧೯೯೪ ಪ್ರ.೨೦೫

೨೯. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೧೨೮-೧೨೯

೩೦. ದೇವನೂರು ಮಹಾದೇವ, ಕುಸುಮ ಬಾಲೆ, ೧೯೯೨, ಪು.೧೫೬

೩೧. ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ೧೯೯೨, ಪು.೨೦೯

೩೨. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೮೯

೩೩. ದೇವನೂರು ಮಹಾದೇವ, ಒಡಲಾಳ, ೧೯೯೨, ಪು.೭೩

೩೪. ಅದೇ, ಕುಸುಮ ಬಾಲೆ, ೧೯೯೨, ಪು.೧೧೮

೩೫. ಉದ್ಧೃತ: ನರಹಳ್ಳಿ ಬಾಲಸುಬ್ರಮಣ್ಯ, ಸಾಹಿತ್ಯ ಸಂಸ್ಕೃತಿ, ೧೯೯೮, ಪು.೬೬

೩೬. ಅನಂತಮೂರ್ತಿ ಯು.ಆರ್., ಸಮಕ್ಷಮ, ೧೯೯೨, ಪು.೧೦೧.

೩೭. ಬರಗೂರು ರಾಮಚಂದ್ರಪ್ಪ, ಒಂದು ಊರಿನ ಕಥೆ, ೧೯೭೭, ಪು.೫೩.

೩೮. ಜವರಯ್ಯ ಮ.ನ., ಮಾಗಿ, ೧೯೮೭, ಪು.೨೮.

೩೯. ಅದೇ, ಪು.೨೯.

೪೦. ವೀರಭದ್ರಪ್ಪ ಕುಂ., ಬೇಲಿ ಮತ್ತು ಹೋಲ, ೧೯೯೦, ಪು.೮೦

೪೧. ಹಿರೇಮಠ್ ಎಸ್.ಎಸ್., ದಲಿತ ಸಂಸ್ಕೃತಿ, ೨೦೦೧, ಪು.

೪೨. ಬರಗೂರು ರಾಮಚಂದ್ರಪ್ಪ, ಸೂರ್ಯ, ೧೯೯೦, ಪು.೪೨.

೪೩. ಲಕ್ಷ್ಮೀನಾರಾಯಣ ಎಚ್.ಡಿ., ಸಾಮಾಜಿಕ ಸ್ತರ ವಿನ್ಯಾಸ ಮತ್ತು ಚಲನೆ, ೧೯೯೬, ಪು.೧೧೨

೪೪. ಬರಗೂರು ರಾಮಚಂದ್ರಪ್ಪ, ಸೂರ್ಯ, ಪು.೬೫

೪೫. ದೇವನೂರು ಮಹಾದೇವ, ಕುಸುಮ ಬಾಲೆ, ೧೯೯೨, ಪು.೧೩೫.

೪೬. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೪೦.

೪೭. ಬಸವರಾಜ ಸಬರದ, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೭೧.

೪೮. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೧೩

೪೯. ಅದೇ, ಪು.೭.

೫೦. ಅದೇ,

೫೧. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೧೩೨.

೫೨. ಪುರುಷೋತ್ತಮ ಬಿಳಿಮಲೆ, ದಲಿತ ಜಗತ್ತು, ೧೯೮೯, ಪು.೧೫.

೫೩. ಶೇಖರ್ ಎಂ.ಎಸ್., ಗ್ರಹಿಕೆ, ೧೯೯೭, ಪು.೧೦೫.

೫೪. ಲಲಿತಾನಾಯ್ಕ ಬಿ.ಟಿ., ಗತಿ, ೧೯೯೨, ಪು.೧೭೭.

೫೫. ನರಹಳ್ಳಿ ಬಾಲಸುಬ್ರಮಣ್ಯ, ಸಾಹಿತ್ಯ ಸಂಸ್ಕೃತಿ, ೧೯೯೮, ಪು.೬೨

೫೬. ಬಸವರಾಜ ಸಬರದ, ಸಾಹಿತ್ಯ ಸಂಗಾತಿ, ೧೯೯೪, ಪು.೧೭೯

೫೭. ಅದೇ, ಪು.೧೮೪

೫೮. ದೇವನೂರು ಮಹಾದೇವ, ಕುಸುಮಬಾಲೆ, ೧೯೯೨, ಪು.೧೦೪

೫೯. ಬರಗೂರು ರಾಮಚಂದ್ರಪ್ಪ, ಸೂರ್ಯ, ೧೯೯೦, ಪು.೧೨

೬೦. ಅದೇ, ಪು.೪೪

೬೧. ಅದೇ, ಪು.೨೪

೬೨. ಅದೇ, ಪು.೪೪

೬೩. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೩೫

೬೪. ವಿವೇಕ ರೈ, ಸಾಹಿತ್ಯ ವಿಮರ್ಶೆ, ೧೯೯೧, ಪು.೧೪೩

೬೫. ಮನಜ, ಮಾಗಿ, ೧೯೮೭, ಪು.೧೦೨

೬೬. ಬರಗೂರು ರಾಮಚಂದ್ರಪ್ಪ ೧೯೯೦, ಪು.

೬೭. ಬಸವರಾಜ ಸಬರದ, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೬೮.

೬೮. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೨೭

೬೯. ತಾಯಪ್ಪ, ವಯಸ್ಸು ೬೨, ಸಂದರ್ಶನ ೦೫.೦೩.೨೦೦೦

೭೦. ಹನುಮಂತಯ್ಯ ಎಲ್., ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ, ೧೯೯೩, ಪು.೧೬೨

೭೧. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೭

೭೨. ಅದೇ, ಪು.೧೫

೭೩. ಅದೇ, ಪು.೮

೭೪. ಕೆಳವರ್ಗದ ವಚನಕಾರರಲ್ಲಿ ಆಶಯ ಮತ್ತು ಅಭಿವ್ಯಕ್ತಿ, ೧೯೯೩, ಪು.೮೭

೭೫. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೩೦

೭೬. ಅದೇ,

೭೭. ಅದೇ, ಪು.೩೧

೭೮. ಅದೇ, ಪು.೧೧೦

೭೯. ಅದೇ, ಪು.೧೩೦

೮೦. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೪೨

೮೧. ಅದೇ, ಪು.೪೩

೮೨. ಅದೇ, ಪು.೭೮

೮೩. ಅದೇ, ಪು.

೮೪. ಶಂಕರ ಡಿ.ಎ., ಅಸ್ಪೃಶ್ಯ, ೧೯೮೪, ಪು.೫೭

೮೫. ಬರಗೂರು, ಸೂರ್ಯ, ಪು.೫೭

೮೬. ಲಲಿತನಾಯ್ಕ ಬಿ.ಟಿ., ಗತಿ, ೧೯೯೨, ಪು.೩೮

೮೭. ದೇವನೂರು ಮಹಾದೇವ, ಕುಸುಮ ಬಾಲೆ, ಪು.೧೩೬

೮೮. ಅದೇ, ಪು.೧೪೪

೮೯. ಮನಜ, ಮಾಗಿ, ಪು.೫೭

೯೦. ಅರವಿಂದ ಮಾಲಗತ್ತಿ, ಕಾರ್ಯ, ಪು.೩೧

೯೧. ಮೂಳ್ಳೂರು ನಾಗರಾಜ, ಮರಣಂಡಲ ಮಧ್ಯದೊಳಗೆ, ಪು.೭೩

೯೨. ಅದೇ, ಪು.೪೮

೯೩. ಲಲಿತನಾಯಕ ಬಿ.ಟಿ., ಗತಿ, ಪು.೧೩

೯೪. ದೇವನೂರು ಮಹಾದೇವ, ಒಡಲಾಳ, ಪು.೬೬

೯೫. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ಪು.೨೬

೯೬. ಮನಜ, ಮಾಗಿ, ಪು.೧೯೧

೯೭. ದೇವನೂರು ಮಹಾದೇವ, ಕುಸುಮಬಾಲೆ, ಪು.೧೦೧

೯೮. ಅರವಿಂದ ಮಾಲಗತ್ತಿ, ಕಾರ್ಯ, ಪು.೫೮

೯೯. ಮುಳ್ಳೂರು ನಾಗರಾಜ, ಮರಣ ಮಂಡಲ ಮಧ್ಯದೊಳಗೆ, ೧೯೯೨, ಪು.೧

೧೦೦. ಮನಜ, ಮಾಗಿ, ಪು.೮೧

೧೦೧. ಅದೇ, ಪು.೨೦೧

೧೦೨. ಉದ್ಧೃತ: ಬಸವರಾಜ ಸಬರದ, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೬೯

೧೦೩. ಅಮೂರ ಜಿ.ಎಸ್., ಸಂಕ್ರಮಣ, ಸಂಚಿಕೆ ೨೬೫, ಸೆಪ್ಟೆಂಬರ್, ೧೯೯೪, ಪು.೪೮

೧೦೪. ದೇವಯ್ಯ ಹರವೆ, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಪು.೫೩

೧೦೫. ಉದ್ಧೃತ: ಅಮೂರ ಜಿ.ಎಸ್., ಸಂಕ್ರಮಣ, ೧೯೯೧, ಸೆಪ್ಟೆಂಬರ್ ೧೯೯೪, ಸಂಚಿಕೆ ೨೫೫, ಪು.೪೯

೧೦೬. ದೇವನೂರ ಮಹಾದೇವ, ಕುಸುಮ ಬಾಲೆ ದೇವನೂರು ಮಹಾದೇವರ ಕೃತಿಗಳು, ೧೯೯೨, ಪು.೯೯

೧೦೭. ಶರಬೇಂದ್ರಯ್ಯ ಜಿ.ಎಂ., ಆನಂದ ಮತ್ತು ಅರಿವು, ೧೯೯೩, ಪು.೭೨

೧೦೮. ಅಶೋಕ ಟಿ.ಪಿ., ಸಾಹಿತ್ಯ ಸಂದರ್ಭ, ೧೯೯೧, ಪು.೨೨

೧೦೯. ಉದ್ಧೃತ ಶರಬೇಂದ್ರಯ್ಯ ಜಿ.ಎಂ., ಆನಂದ ಮತ್ತು ಅರಿವು, ೧೯೯೩, ಪು.೭೨

೧೧೦. ದೇವನೂರು ಮಹಾದೇವ, ಕುಸುಮ ಬಾಲೆ, ೧೯೯೨, ಪು.೧೪೫

೧೧೧. ಉದ್ಧೃತ: ಉಮೇಶ ದೊಂಬರ, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ೧೯೯೩, ಪು.೧೯೫

೧೧೨. ಉದ್ಧೃತ: ಮುರಾರಿ ಬಲ್ಲಾಳ, ಒಂಟಿಧ್ವನಿ, ಪು.೨೩

೧೧೩. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೧೧೭

೧೧೪. ಉದ್ಧೃತ: ಹಿರೇಮಠ ಎಸ್.ಎಸ್., ಜಾತ್ರೆಗಳು, ೧೯೯೩, ಪು.೧೬೭

೧೧೫. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೬೫

೧೧೬. ಅರವಿಂದ ಮಾಲಗತ್ತಿ, ಕಾರ್ಯ, ೧೯೮೮, ಪು.೨೮

೧೧೭. ಉದ್ಧೃತ: ಅಮೂರ ಜಿ.ಎಸ್., ಸಂಕ್ರಮಣ, ನವೆಂಬರ್ ೧೯೯೪, ಪು.೮೩

೧೧೮. ಬರಗೂರು ರಾಮಚಂದ್ರಪ್ಪ, ಸಾಹಿತ್ಯ ಮತ್ತು ಸೃಜನಶೀಲತೆ, ೧೯೮೯, ಪು.೫೩

೧೧೯. ಬರಗೂರು ರಾಮಚಂದ್ರಪ್ಪ, ಸಾಹಿತ್ಯ ಮತ್ತು ರಾಜಕಾರಣ, ಪು.೨೭

೧೨೦. ಪುರುಷೋತ್ತಮ ಬಿಳಿಮಲೆ, ಶಿಷ್ಟ ಪರಿಶಿಷ್ಟ, ಪು.೧೩೨

೧೨೧. ದೇವನೂರು ಮಹಾದೇವ, ಕುಸುಮ ಬಾಲೆ, ಪು.೧೪೬

೧೨೨. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ೧೯೯೪, ಪು.೬೧

೧೨೩. ಅದೇ, ಪು.೬೧

೧೨೪. ಅದೇ,

೧೨೫. ರೇವಯ್ಯ ಒಡೆಯರ್, ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು, ೨೦೦೦, ಪು.೧೦೧

೧೨೬. ರಾಮಚಂದ್ರನ್ ಸಿ.ಎಸ್., ಶಿಲ್ಪ, ಪು.೮೧

೧೨೭. ವೀರಭದ್ರಪ್ಪ ಕುಂ., ಕಪ್ಪು, ೧೯೮೧, ಪು.೧೪೨

೧೨೮. ಅದೇ,

೧೨೯. ರೇವಯ್ಯ ಒಡೆಯರ್, ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು, ೨೦೦೦, ಪು.೧೦೬

೧೩೦. ಲಲಿತಾನಾಯ್ಕ ಬಿ.ಟಿ., ಗತಿ, ೧೯೯೨, ಪು.೮೦

೧೩೧. ಬಸವರಾಜ ಸಬರದ, ನಾಲ್ಕು ದಲಿತೀಯ ಕಾದಂಬರಿಗಳು, ೧೯೯೧, ಪು.೬೯

೧೩೨. ಮನಜ, ಮಾಗಿ, ೧೯೮೭, ಪು.೧೪೬

ಇಂದಿನ ಅಧ್ಯಯನಗಳಲ್ಲಿ ಸಾಂಸ್ಕೃತಿಕ ಅಧ್ಯಯನಗಳಿಗೆ ಹೆಚ್ಚು ಆದ್ಯತೆ ಬರುತ್ತಿದೆ. ಇವು ಸಂಸ್ಕೃತಿಯ ನೆಲೆಯನ್ನು ಗ್ರಹಿಸುವಲ್ಲಿ ತುಂಬಾ ವ್ಯಾಪಕವೂ ಗುಣಾತ್ಮಕವೂ ಸಕಾರಾತ್ಮಕವು ಆದಂತವು. ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ ಇತ್ಯಾದಿ ಬಹುಮುಖ ನೆಲೆಗಳ ಮೂಲಕ ವಸ್ತುವೊಂದನ್ನು ಆಮೂಲಾಗ್ರವಾಗಿ ಚರ್ಚೆಗೆ ಹೊಂದಿಸಿಕೊಳ್ಳುತ್ತವೆ. ಬಹುಶಿಸ್ತೀಯವಾದ ಈ ಕ್ರಮ ಸಮುದಾಯ ಅಥವಾ ವಸ್ತುವೊಂದರ ಪರಿಪೂರ್ಣ ಅಧ್ಯಯನದ ಪ್ರತೀಕವೂ ಹೌದು.

ಈ ಸಂಶೋಧನೆ ಇಂತಹ ಬಹುಮುಖೀ ನೆಲೆಗಳ ಬಹುಶಿಸ್ತೀಯ ಮಾದರಿಗಳನ್ನು ಬಳಸಿಕೊಂಡು ಬೆಳೆದದ್ದಾಗಿದೆ. ದಲಿತ ಬಂಡಾಯ ಕಾದಂಬರಿಗಳ ಈ ಅಧ್ಯಯನ ಒಂದು ಸಾಂಸ್ಕೃತಿಕ ಚಳುವಳಿಯ ಅಧ್ಯಯನ. ಯಾಕೆಂದರೆ ದಲಿತ ಬಂಡಾಯ ಚಳುವಳಿಗಳು ಪರ್ಯಾಯ ಸಾಂಸ್ಕೃತಿಕ ಚಿಂತನೆ ಮತ್ತು ಬದುಕನ್ನೇ ಅರಸಿ ಹೊರಟಂಥವು. ಅಮಾನವೀಯ ನೆಲೆಗಳಿಂದ ಹೊರಬಂದು ಮಾನವೀಯ ಅಂತಃಕರಣದೊಳಗೆ ತೊಯ್ದು ತಪ್ತ ಜೀವನಕ್ಕಾಗಿ ಹಂಬಲಿಸಿದಂತವು. ಸಾಹಿತ್ಯ ಮತ್ತು ಸಾಮಾಜಿಕ ಚಳುವಳಿಗಳು ಮತ್ತು ಸಾಮಾಜಿಕ ಕ್ರಿಯಾತ್ಮಕ ಚಳುವಳಿ ಅಂತೆಯೇ ಅವು ತೋರುವ ಪ್ರತಿಕ್ರಿಯೆಗಳು ಸಮಕಾಲೀನ ಬದುಕಿನ ಪ್ರತೀಕವಾಗಿರುತ್ತವೆ. ಒಂದು ಸಾಮಾಜಿಕ ಅಥವಾ ಸಾಹಿತ್ಯಿಕ ಚಳುವಳಿ ಎನ್ನುವುದು ಅದು ಸಮಾಜದ ಭೌತಿಕ ಮತ್ತು ಅಭೌತಿಕ ಉತ್ಪಾದನೆಗಳ ಮೇಲೆ ನೆಲೆನಿಂತಿರುತ್ತವೆ. ಅವುಗಳ ಸಂಘರ್ಷ ಮತ್ತು ವೈರುಧ್ಯಗಳು ಸಾಮಾಜಿಕ ಆಂದೋಲನದಲ್ಲಿ ಬಹುಮುಖ್ಯ ಸ್ಥಾನವನ್ನು ಹೊಂದಿರುತ್ತವೆ. ಇವು ಚಾರಿತ್ರಿಕವಾಗಿಯೂ ಆಯಾ ಸಂದರ್ಭದ ಮಾನವನ ಆರ್ಥಿಕ ಚಟುವಟಿಕೆಗಳ ಆಧಾರದ ಮೇಲೆ ಆಕೃತಿಗೊಳ್ಳುತ್ತವೆ. ಹಾಗಾಗಿ ಒಟ್ಟು ಬದುಕಿನ ಆರ್ಥಿಕ ವಿನ್ಯಾಸಗಳಿಗೂ ಸಾಂಸ್ಕೃತಿಕ ಬದುಕಿಗೂ ಅವಿನಾಭಾವ ತಳಕು ಇರುವುದು ಈ ಅಧ್ಯಯನದ ಮೂಲಕ ಗುರುತಿಸಲು ಪ್ರಯತ್ನಿಸಿದ್ದೇನೆ.

ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭ ಮತ್ತು ಹಲವಾರು ಸಾಂಸ್ಕೃತಿಕ ಸ್ಥಿತ್ಯಂತರ ಹಾಗೂ ಒತ್ತಡಗಳ ನಡುವೆ ದಲಿತರ ಬದುಕು ದುರ್ಭರವಾಗುತ್ತಿರುವುದು ಕಂಡುಬರುತ್ತಿದೆ. ರಾಜಕೀಯವಾದ ಸೌಲಭ್ಯಗಳು ಕೆಳವರ್ಗಗಳ ಪಾಲಿಗೆ ಸಂಪೂರ್ಣವಾಗಿ ದಕ್ಕಿವೆ ಎಂದು ಒಣ ಪೋಜು ಕೊಡುವ ಸಂಗತಿಗಳು ಒಂದಾದರೆ, ಬಹುಕಾಲದಿಂದಲೂ ಕೆಳವರ್ಗಗಳಿಗೆ ಅದರಲ್ಲೂ ವಿಶೇಷವಾಗಿ ದಲಿತರಿಗೆ ಅಕ್ಷರತೆಯಿಂದ, ಜ್ಞಾನದಿಂದ, ಅಧಿಕಾರದಿಂದ ವಂಚಿಸಲಾಗಿದೆ. ಅವರಿಗೂ ಇಂತಹ ಸೌಲಭ್ಯಗಳು ದೊರೆತರೆ ಮೇಲೆ ಬರುತ್ತಾರೆ ಎನ್ನುವ ಚಿಂತನೆಗಳು ಇನ್ನೊಂದೆಡೆ. ಈ ಮಧ್ಯ ರಾಜಕೀಯವಾದ

ಡೊಂಬರಾಟಗಳಿಗೆ ಬಲಿಯಾಗುವ, ಬಹಿಷ್ಕಾರಕ್ಕೊಳಗಾಗುವ ಬಲತ್ಕಾರಕ್ಕೆ ಭಾಜನವಾಗುವ ಮೂಲಕ ದಲಿತರ ಮಾರಣ ಹೋಮ ದೇಶದ ನಾನಾ ಭಾಗಗಳಲ್ಲಿ ಅವ್ಯಾಹತವಾಗಿ ನಡೆಯುತ್ತಿದೆ. ದಲಿತ ಪ್ರತಿನಿಧಿಗಳಿಂದಾಗಲೀ ದಲಿತರೇ ಪ್ರಧಾನವಾದ ಸರ್ಕಾರಗಳಿಂದಾಗಿ(ಬಿಎಸ್‌ಪಿ, ಆರ್‌ಎಸ್‌ಪಿ ಎಡಪಕ್ಷಗಳು)ಯಾಗಲಿ ಇಂತಹ ಜೀವಹಿಂಸೆಯನ್ನು ತಡೆಯಲಾಗುತ್ತಿಲ್ಲ ಎನ್ನುವ ಅಂಶಗಳನ್ನು ಕಾದಂಬರಿಗಳ ಅನುಭವದಲ್ಲಿ ಹಾಗೂ ವರ್ತಮಾನದ ಪ್ರತ್ಯಕ್ಷ ಪ್ರಮಾಣಗಳಿಂದ ಗ್ರಹಿಸಿ ವಿಶ್ಲೇಷಿಸಿ ಕೊಳ್ಳಲಾಗಿದೆ. ದಲಿತ ಮತ್ತು ಕೆಳವರ್ಗಗಳ ಹಿತಾಸಕ್ತಿಯನ್ನು ಕಾಪಾಡಲು ನಾನಾ ರಚನಾತ್ಮಕ ಕೆಲಸಗಳನ್ನು ಮಾಡಿದರೂ ಅವು ಅಷ್ಟು ಪರಿಣಾಮಕಾರಿಯಾಗಿಲ್ಲ. ಇದಕ್ಕೆ ಕಾರಣವಾದ ಆಂತರಿಕ ಮತ್ತು ಬಾಹ್ಯ ಸಂಗತಿಗಳನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

೭೦ರ ದಶಕದಲ್ಲಿ ಹುಟ್ಟಿದ ದಲಿತ ಮತ್ತು ಬಂಡಾಯ ಚಳುವಳಿಯ ಪ್ರಭಾವ ಪ್ರೇರಣೆಗಳನ್ನು ಬಸವರಾಜನಂತಹ ಪಾತ್ರಗಳ ಮೂಲಕ ವಿವರವಾಗಿ ತಿಳಿಯಲಾಗಿದೆ. ಹಾಗೆ ಈ ಚಳುವಳಿಗಳ ಗರ್ಭದೊಳಗೆ ಹುಟ್ಟಿದ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಅವುಗಳ ಪರಿಣಾಮಗಳನ್ನು ಸಾಧಕ ಬಾಧಕಗಳನ್ನು ಚರ್ಚೆಗೆ ಗುರಿಪಡಿಸಲಾಗಿದೆ. ದಲಿತ ಬಂಡಾಯ ಚಳುವಳಿಯ ಸಿದ್ಧಾಂತಗಳನ್ನು, ಪ್ರಣಾಳಿಕೆಗಳನ್ನು ಪ್ರಚಾರ ಸಾಮಗ್ರಿಗಳನ್ನು ಒಂದು ತಾತ್ವಿಕ ಚೌಕಟ್ಟಿನಲ್ಲಿಟ್ಟು ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಆ ಮೂಲಕ ಅವು ಕಟ್ಟಿಕೊಳ್ಳಲು ಪ್ರಯತ್ನಿಸಿದ ಪರ್ಯಾಯಗಳನ್ನು, ಕಂಡುಕೊಂಡ ಎಚ್ಚರಗಳನ್ನು ಸಾದ್ಯಂತವಾಗಿ ನಿರೂಪಿಸಲು ಪ್ರಯತ್ನಿಸಿದೆ. ಇದರಿಂದ ಈ ಸಾಹಿತ್ಯಿಕ ಆಂದೋಲನದೊಳಗೆ ಹುದುಗಿದ್ದ ಮಾನವಪರ ಕಾಳಜಿಗಳನ್ನು ಅಮಾನವೀಯ ನೆಲೆಯ ಊಳಿಗಮಾನ್ಯ ಸಂಗತಿಗಳನ್ನು ವಾಸ್ತವಿಕ ನೆಲೆಯಲ್ಲಿ ವಿಸ್ತರಿಸಿಕೊಂಡಂತಾಗಿದೆ.

ಇಡೀ ಕೆಳವರ್ಗಗಳು ತಮ್ಮ ಬದುಕಿಗೆ ಸಂಬಂಧಿಸಿದಂತೆ ಅನುಭವಿಸಿದ ತೊಳಲಾಟಗಳು, ಅವಮಾನ ಮುಜುಗರಗಳು ಹಲವು ನೆಲೆಯವು. ಶ್ರೇಣೀಕೃತ ಸಾಂಸ್ಕೃತಿಕ ಸಮುದಾಯಗಳ ಮೂಲಕ ಅನುಭವಿಸುವ ಯಾತನೆಗಳು ಒಂದು ನೆಲೆಯವಾದರೆ ವಿವಿಧ ಶ್ರಮ ಸಮುದಾಯಗಳ ಸಮುದಾಯ ಸಮುದಾಯಗಳೊಳಗೆ, ಇನ್ನು ಸೂಕ್ಷ್ಮವೆಂದರೆ ಕುಟುಂಬ ಕುಟುಂಬಗಳ ಮಧ್ಯ, ಒಂದೇ ಕುಟುಂಬದ ಸದಸ್ಯರ ಮಧ್ಯ ನಡೆದ ಹಿಂಸಾತ್ಮಕ ಸಂಗತಿಗಳು ಇನ್ನೊಂದು ನೆಲೆಯವು. ದಲಿತರ ಚಿಂತಾಜನಕ ಸ್ಥಿತಿಗೆ ಶ್ರೇಣೀಕರಣದ ಮೇಲು ವರ್ಗಗಳತ್ತ ಬೆರಳು ತೋರಿಸುವುದಕ್ಕೆ ಬದಲಾಗಿ ಕೆಳವರ್ಗಗಳ ಸಾಮುದಾಯಿಕ ರಚನೆಗಳ ಆಂತರಿಕ ಗುದ್ದಾಟಗಳು ನನಗೆ ಬಹುಮುಖ್ಯವಾಗಿ ಕಾಣುತ್ತದೆ. ಗುದ್ದ ಅಗೆದು ಇಲಿ ಹಿಡಿಯುವ ಉಪರಾಟಿ ಪರಿಶ್ರಮವನ್ನು ಕೈಬಿಟ್ಟು ಕೆಳವರ್ಗಗಳ ಗರ್ಭದೊಳಗೆ ಹರಿದುಬರುವ ಶ್ರೇಣೀಕೃತ ಕಿಚ್ಚನ್ನು ಹೆಕ್ಕಿ ತೆಗೆಯಲು ಪ್ರಯತ್ನಿಸಿದ್ದೇನೆ. ಆ ಮೂಲಕ ಕಾದಂಬರಿಗಳು ಚಿತ್ರಿಸುವ ದಲಿತ ಬದುಕಿನ ಪ್ರಾದೇಶಿಕ ಭಿನ್ನತೆಗಳನ್ನು ಈ ಭಿನ್ನತೆಗೆ ಸಂಬಂಧಿಸಿದ ಕಾರಣಗಳನ್ನು

ಸೂಕ್ಷ್ಮವಾಗಿ ಗಮನಿಸಲಾಗಿದೆ. ಈ ಹೊತ್ತಿನ ದಲಿತ ಹಳೆ ತಲೆಮಾರಿನ ಅಭದ್ರ ಬದುಕನ್ನು ಯುವಕ ಯುವತಿಯರ ಶಿಕ್ಷಣ, ನೌಕರಿಗೆ ಸಂಬಂಧಿಸಿದ ಗೊಂದಲಗಳನ್ನು ಗ್ರಹಿಸಿಕೊಳ್ಳಲಾಗಿದೆ.

ಅತ್ಯಾಚಾರ, ಅವಮಾನ, ಜೀತಪದ್ಧತಿ, ವೇಶ್ಯಾಪದ್ಧತಿ, ಅಸ್ಪೃಶ್ಯತಾಚರಣೆ, ನಗರ ಜೀವನದ ಸೆಳೆತ, ಆ ಮೂಲಕ ಕೆಳ ಸಮುದಾಯಗಳು ಅಳವಡಿಸಿಕೊಂಡ ಸಾಂಸ್ಕೃತಿಕ ಎಚ್ಚರ ಪರ್ಯಾಯಗಳ ಹುಡುಕಾಟ, ಹಕ್ಕಿನ ಬಗೆಗಿನ ತಿಳುವಳಿಕೆ ಇವೆಲ್ಲವು ಹಿಂಸೆಯ ಒಡಲೊಳಗಿಂದಲೇ ಜನ್ಮ ತಳೆದ ಪರಿಗಳನ್ನು ಎಳೆಎಳೆಯಾಗಿ ಬಿಡಿಸಿಕೊಳ್ಳಲಾಗಿದೆ. ಇಂತಹ ಅಮಾನವೀಯ ಒತ್ತಡಗಳಿಂದ ವಿವೇಚನೆಗೊಳ್ಳಬೇಕೆಂಬ ತುರ್ತು ಹುಟ್ಟಿದ್ದೇ ಮೇಲ್ಜಾತಿ ಸಮುದಾಯಗಳು ನೀಡುವ ಅಮಾನುಷ ಕಿರುಕುಳಗಳಿಂದಲೇ.

ದೈಹಿಕ ಶ್ರಮ ಮಾನಸಿಕ ಎಚ್ಚರದ ಮೂಲಕ ತನ್ನ ನೈತಿಕತೆಯನ್ನು ಹೆಚ್ಚಿಸಿಕೊಳ್ಳುತ್ತ ಊಳಿಗಮಾನ್ಯ ಬದುಕಿಗೆ ಸವಾಲಾಗುತ್ತ ನಡೆದ ಕೆಳವರ್ಗದ ಬದುಕು ಒಂದೆಡೆಯಾದರೆ, ಕೂತು ಉಂಡು ಅತಿಭ್ರಷ್ಟರಾಗಿ ನೈತಿಕ ಅಧಃಪತನಕ್ಕೆ ಗುರಿಯಾದ, ಆರ್ಥಿಕವಾಗಿ ದಿವಾಳಿಯಾದ ನಿರ್ವೀರ್ಯವಾದ ಊಳಿಗಮಾನ್ಯ ವ್ಯವಸ್ಥೆ ಮತ್ತೊಂದೆಡೆ ವಿನಾಶದ ಅಂಚಿಗೆ ಸರಿದು ಹೋಗುತ್ತಿರುವುದನ್ನು ಕಾದಂಬರಿಗಳು ಬಲು ಚುರುಕಾಗಿ ಚಿತ್ರಿಸುತ್ತವೆ.

ವಿಶೇಷವಾಗಿ ಸ್ತ್ರೀ ಪಾತ್ರಗಳು ತಾಯ್ತನದ ಅದಮ್ಯ ಹಂಬಲವನ್ನು ಹೊತ್ತುಕೊಂಡು ನಡೆಸುವ ವಿವಾಹೇತರ ಲೈಂಗಿಕ ಸಂಬಂಧಗಳು ಬರೀ ಕಾಮದಾಟಗಳಾಗದೆ ಒಂದು ಸಾಂಸ್ಕೃತಿಕ ಬದುಕಿನ ಪುನಾರಚನೆಯ ಮಾದರಿಗಳಾಗಿ ಗೋಚರಿಸುತ್ತವೆ. ಗಂಡನ ನಿರ್ವೀರ್ಯತೆಯನ್ನು ಲೈಂಗಿಕ ಸೋಂಕನ್ನು ತಿಳಿದ ಸೀತಕ್ಕ ಮನೆ ಆಳಿನೊಡನೆ ಸಂಭೋಗಿಸಿ ವಂಶೋದ್ಧಾರತೆಯನ್ನು ಮಾಡಿಕೊಳ್ಳುವ ಘಟನೆಗಳು ಅವಳ ಮಾನಸಿಕ ಅಧಃಪತನದ ಸಂಗತಿಗಳಾಗದೇ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದ ಸಂಗತಿಗಳಾಗುತ್ತವೆ. ಹಾಗೆ ಆಳಿನೊಂದಿಗಿನ ಅವಳ ಒಡನಾಟ ಆಳಿನ ಮಾನಸಿಕ ಸ್ಥೈರ್ಯವನ್ನು ಮನುಷ್ಯನೊಂದಿಗಿನ ಬದ್ಧತೆಯನ್ನು ಎತ್ತಿ ತೋರಿಸುತ್ತದೆ.

ಆಳಿನೊಂದಿಗಿನ ಸೀತಕ್ಕನ ಈ ಅನುಭೋಗ ಶ್ರಮವರ್ಗಗಳ ಸೃಷ್ಟ್ಯಾತ್ಮಕ ಶಕ್ತಿಯನ್ನು ಪುನರುತ್ಪಾದನೆಯ ಸಾಮರ್ಥ್ಯವನ್ನು ಸಾಬಿತು ಪಡಿಸುವ ಅಂಶಗಳಾಗಿ ಕಾಣುತ್ತವೆ. ಇಡೀ ಊರಿನ ಆತ್ಮಸಾಕ್ಷಿಯಂತಿದ್ದ ಜಮೀನ್ದಾರಿಕೆ ತನ್ನ ನೈತಿಕ ದಿವಾಳಿತನದಿಂದಾಗಿ ಬಲಹೀನವಾಗಿದೆ. ಈ ಬಲಹೀನತೆಯನ್ನು ಶ್ರಮಿಕ ವರ್ಗಗಳು ತುಂಬಿಕೊಡುತ್ತವೆ. ಇದು ಲೈಂಗಿಕ ಮಟ್ಟದಲ್ಲಿ ಮಾತ್ರ ಅಲ್ಲ, ಊಳಿಗಮಾನ್ಯ ಬದುಕಿನ ಒಟ್ಟು ಸುಖಭೋಗದ ನೆಲೆಯಲ್ಲೂ ಎದ್ದು ಕಾಣುವಂಥದ್ದು ದುಡಿಯುವವರು ಹಲವರು ಅನುಭವಿಸುವವರು ಕೆಲವರು.

ಪ್ರಜಾಪ್ರಭುತ್ವದ ಶಕ್ತಿ ರಾಜಕಾರಣದಲ್ಲಿ ದಲಿತ ಬಂಡಾಯದವರು ನಡೆದುಬಂದ ದಾರಿಯನ್ನು ಕಾದಂಬರಿ ಮುಖೇನ ಚರ್ಚಿಸಲಾಗಿದೆ. ಇದು ಅಲ್ಲದೆ ವಸಾಹತುಶಾಹಿ ಮತ್ತು ನವ ವಸಾಹತುಶಾಹಿ ಹಂತದಲ್ಲಿ ಸಾಮ್ರಾಜ್ಯಶಾಹಿ ಪ್ರಣೀತ ಐಡಿಯಾಲಾಜಿಗಳು ನಡೆಸುವ ಜೀವ ವಿರೋಧಿ ನೆಲೆಗಳನ್ನು ದಲಿತ ಬಂಡಾಯ ಕಾದಂಬರಿಗಳು ನಿರ್ವಚಿಸಿಕೊಂಡ ಬಗೆಗಳನ್ನು ಗಮನಿಸಲು ಪ್ರಯತ್ನಿಸಲಾಗಿದೆ. ಆ ಮೂಲಕ ಕೆಳವರ್ಗಗಳ ಬದುಕಿನ ಅತಂತ್ರ ಮತ್ತು ಸಂಕೀರ್ಣ ಸಂಗತಿಗಳಿಗೆ ಕಾರಣಗಳನ್ನು ಹುಡುಕಿಕೊಳ್ಳಲಾಗಿದೆ.

ದಲಿತ ಮತ್ತು ಬಂಡಾಯ ಕಾದಂಬರಿಗಳು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಶ್ರಮಿಕ ವರ್ಗಗಳು ಕಟ್ಟಿಕೊಳ್ಳಬೇಕಾದ ಪರ್ಯಾಯ ಕ್ರಮಗಳನ್ನು ನಿರ್ದಿಷ್ಟವಾಗಿ ಸೂಚಿಸದಿದ್ದರೂ ಆ ನಿಟ್ಟಿನಲ್ಲಿ ಸೂಕ್ಷ್ಮವಾದ ರಹದಾರಿಗಳನ್ನು ತೋರಿಸಿದ್ದು ಗಮನಿಸುವ ಸಂಗತಿ ಮತ್ತು ನನ್ನ ಉದ್ದೇಶವೂ ಸದರಿ ಪರಿಕಲ್ಪನೆಯನ್ನು ಒಟ್ಟು ತಾತ್ವಿಕತೆಯಲ್ಲಿ ಅಂತರ್‌ವಾಹಿನಿಯಾಗಿ ನೋಡುವುದೇ ಆಗಿದೆ. ಪ್ರತಿ ಪಾತ್ರಗಳು ಹೋರಾಟ, ಬಡಿದಾಟದಲ್ಲೇ ತೊಡಗಿವೆ ಎಂದೆನಿಸಿದರೂ ಅಂತಿಮವಾಗಿ ಅವುಗಳ ತುಡಿತ ಹೊಸಬದುಕಿನ ಹುಡುಕಾಟವೇ ಎಂಬುದು ಮರೆಯಲಾರದ ಸಂಗತಿ. ಕಾದಂಬರಿಗಳನ್ನು ಒಮ್ಮುಖ ಅಥವಾ ಸಮರ್ಥನೆಯ ಭಾವನೆಯಿಂದ ನೋಡದೆ ಅವು ಒಳಗೊಂಡ ಪ್ರಸ್ತುತತೆ ಮತ್ತು ವಾಸ್ತವತೆಯ ಹಂದರವನ್ನು ಹೊಕ್ಕು ನೋಡಲು ಯತ್ನಿಸಲಾಗಿದೆ. ಆ ಮೂಲಕ ಆಳದಲ್ಲಿ ಅವು ನಿಹಿತವಾಗಿಸಿಕೊಂಡ ಹೊಸಬದುಕಿನ ಕ್ರಮಗಳ ಬಗ್ಗೆ ಭವಿಷ್ಯದ ಜೀವನದ ಬಗ್ಗೆ ಹೊಂದಿದ ಆಲೋಚನೆಗಳನ್ನು ಇತಿ ಮಿತಿಗಳನ್ನು ಪತ್ತೆಹಚ್ಚಲು ಪ್ರಯತ್ನಿಸಲಾಗಿದೆ. ಎಲ್ಲೂ ಎಚ್ಚರ ಮತ್ತು ಪರ್ಯಾಯಗಳ ಬಗ್ಗೆ ಉದ್ದೇಶಪೂರ್ವಕವಾಗಿ ಹೇಳಲು ಪ್ರಯತ್ನಿಸಿಲ್ಲ. ಬದಲಾಗಿ ಒಟ್ಟು ಚರ್ಚೆಯ ಒಳಗಡೆಯೇ ಕೆಳವರ್ಗಗಳು ಸಾಂಸ್ಕೃತಿಕ ಎಚ್ಚರ ಮತ್ತು ಪರ್ಯಾಯಗಳ ಹುಡುಕಾಟದ ತಾತ್ವಿಕತೆಯನ್ನು ಸಾವಯವ ರೀತಿಯಲ್ಲಿ ಕ್ರಿಯಾಶೀಲ ನೆಲೆಯಲ್ಲಿ ಗಮನಿಸಲಾಗಿದೆ.

## ಪ್ರಾಥಮಿಕ ಆಕರಗಳು

೧. ಅರವಿಂದ ಮಾಲಗತ್ತಿ; ೧೯೮೮; ಕಾರ್ಯ; ಶೈಲ ಪ್ರಕಾಶನ; ನೇತಾಜಿ ಗಲ್ಲಿ, ಅಂಬೇಡ್ಕರ್ ರಸ್ತೆ, ಮುದ್ದೇಬಿಹಾಳ್

೨. ಕುಂಬಾರ ವೀರಭದ್ರಪ್ಪ; ೧೯೮೧; ಕಪ್ಪು ; ಯುವಕರ ಸಂಘ(ರಿ), ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ

೩. ಜವರಯ್ಯ ಮ.ನ.;೧೯೮೭; ಮಾಗಿ ; ಸಂಕ್ರಮಣ ಪ್ರಕಾಶನ, ಧಾರವಾಡ

೪. ಜಂಬಣ್ಣ ಅಮರಚಿಂತ; ೧೯೯೪; ಕುರುಮಯ್ಯ ಮತ್ತು ಅಂಕುಶದೊಡ್ಡಿ; ಬಸಂತಕುಮಾರ ಸುಣಗಾರ, ಎಲ್.ಆಯ್.ಜಿ. ೧೨೦, ಬಡೇಪೂರ ಕಾಲನಿ, ಗುಲಬರ್ಗಾ

೫. ಬರಗೂರು ರಾಮಚಂದ್ರಪ್ಪ; ೧೯೯೦; ಸೂರ್ಯ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬. ಮಹಾದೇವ ದೇವನೂರು; ೧೯೯೨; ಕುಸುಮ ಬಾಲೆ; ಪತ್ರಿಕೆ ಪ್ರಕಾಶನ, ನಂ.೯, ಆಂಜನೇಯ ದೇವಸ್ಥಾನದ ರಸ್ತೆ, ಬಸವನಗುಡಿ, ಬೆಂಗಳೂರು

೭. ಮುಳ್ಳೂರು ನಾಗರಾಜ; ೧೯೯೨; ಮರಣ ಮಂಡಲ ಮಧ್ಯದೊಳಗೆ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೮. ಲಲಿತಾನಾಯ್ಕ ಬಿ.ಟಿ.; ೧೯೯೨; ಗತಿ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

# ಪರಾಮರ್ಶನ ಗ್ರಂಥಗಳು

೧. ಅನಂತಮೂರ್ತಿ, ಯು.ಆರ್,; ೧೯೯೨; ಸಮಕ್ಷಮ; ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೨. ಅರವಿಂದ ಮಾಲಗತ್ತಿ (ಸಂ) ೧೯೯೧; ನಾಲ್ಕು ದಲಿತೀಯ ಕಾದಂಬರಿಗಳು; ಕನ್ನಡ ಸಂಘ, ಕ್ರಿಸ್ಟ್ ಕಾಲೇಜ್, ಬೆಂಗಳೂರು.

೩. ಅರವಿಂದ ಮಾಲಗತ್ತಿ; ೧೯೯೧; ಅಂಬೇಡ್ಕರ್ ವಿಚಾರಧಾರೆ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪. ಅರ್ಜುನ ಗೊಳಸಂಗಿ (ಸಂ) ೨೦೦೦; ದಲಿತಪ್ರಜ್ಞೆ; ದಲಿತಸಾಹಿತ್ಯ ಪರಿಷತ್ತು, ರಾಜ್ಯ ಘಟಕ, ಗದಗ.

೫. ಅರ್ಜುನ ಗೊಳಸಂಗಿ; ೨೦೦೦; ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ; ವಿಮೋಚನಾ ಪ್ರಕಾಶನ, ಅಥಣಿ.

೬. ಅವಧಾನಿ, (ಸಂ) ೧೯೯೧; ಸಾಹಿತ್ಯ ವಿಮರ್ಶೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭. ಅವಧಾನಿ, (ಸಂ) ೧೯೯೨; ಸಾಹಿತ್ಯ ವಿಮರ್ಶೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮. ಅಶೋಕ.ಟಿ.ಪಿ; ೧೯೯೨; ಪುಸ್ತಕ ಪ್ರೀತಿ; ಅಕ್ಷರ ಪ್ರಕಾಶನ, ಸಾಗರ.

೯. ಆಮೂರ ಜಿ.ಎಸ್: ೧೯೮೮; ಅರ್ಥಲೋಕ,; ಸ್ನೇಹಲೋಕ ಪ್ರಕಾಶನ, ಬೆಂಗಳೂರು.

೧೦. ಆಮೂರ.ಜಿ.ಎಸ್, ೧೯೯೯; ಕಾದಂಬರಿ ಸ್ವರೂಪ ಹೊಸ ಚಿಂತನೆ; ಕನ್ನಡ ಸಂಘ, ಕ್ರೈಸ್ಟ್‌ಕಾಲೇಜ್, ಬೆಂಗಳೂರು.

೧೧. ಅಶೋಕ.ಟಿ.ಪಿ; ೧೯೯೧; ಸಾಹಿತ್ಯ ಸಂದರ್ಭ; ಅಕ್ಷರ ಪ್ರಕಾಶನ, ಸಾಗರ.

೧೨. ಆರಾಧ್ಯ ಬಿ.ಎಂ.ಎಂ.; ೧೯೮೫; ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ; ಅಪ್ಪು ಪ್ರಕಾಶನ, ಬೆಂಗಳೂರು.

೧೩. ಆರ್ಕೆ. ಡಾ.; ೧೯೯೫; ಸಾಹಿತ್ಯ ಪ್ರತಿಕ್ರಿಯೆ; ನವಕರ್ನಾಟಕ ಪ್ರಕಾಶನ ಬೆಂಗಳೂರು.

೧೪. ಕಾರಂತ ಶಿವರಾಮ; ೧೯೯೩; ಚೋಮನ ದುಡಿ; ಎಸ್.ವಿ.ಎಸ್ ಪಬ್ಲಿಷರ್, ಡಿಸ್ಟ್ರಿಬ್ಯೂಟಸ್, ಬೆಂಗಳೂರು, ೦೧.

೧೫. ಕುವೆಂಪು; ೧೯೮೮; ಮಲೆಗಳಲ್ಲಿ ಮದುಮಗಳು; ಉದಯ ರವಿ ಪ್ರಕಾಶನ, ವಾಣಿ ವಿಲಾಸಪುರಂ; ಮೈಸೂರು; ೨.

೧೬.ಕೋದಂಡರಾಮ, ಎನ್.ಕೆ.; ೧೯೯೬; ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ; ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು.

೧೭. ಗಣೇಶ್ ಮೊಗಳ್ಳಿ; ೧೯೯೯; ದಲಿತರು ಮತ್ತು ಜಾಗತೀಕರಣ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಗಣೇಶ್ ಎಸ್.; ೧೯೮೨; ದಲಿತ ಸಾಹಿತ್ಯ ಚಳವಳಿ; ಪಂಚಮ ಪ್ರಕಾಶನ, ಬೆಂಗಳೂರು.

೧೯. ಗಿರಡ್ಡಿ ಗೋವಿಂದರಾಜ; ೧೯೮೭; ಕಾದಂಬರಿ ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ, ಬೆಂಗಳೂರು.

೨೦. ಚಂದ್ರಶೇಖರ ಪಾಟೀಲ್(ಸಂ); ೧೯೯೨; ಸಂಕ್ರಮಣ ಸಾಹಿತ್ಯ; ಸಂ: ೧; ಸಂಕ್ರಮಣ ಪ್ರಕಾಶನ, ಧಾರವಾಡ.

೨೧. ಚಂದ್ರಶೇಖರ ಪಾಟೀಲ್(ಸಂ); ೧೯೯೩; ಸಂಕ್ರಮಣ ಸಾಹಿತ್ಯ; ಸಂ; ೨; ಸಂಕ್ರಮಣ ಪ್ರಕಾಶನ, ಧಾರವಾಡ.

೨೨. ಚಂದ್ರಶೇಖರ ಪಾಟೀಲ್(ಸಂ); ೧೯೯೪; ಸಂಕ್ರಮಣ ಸಾಹಿತ್ಯ; ಸಂ; ೩; ಸಂಕ್ರಮಣ ಪ್ರಕಾಶನ, ಧಾರವಾಡ.

೨೩. ಚಂದ್ರಶೇಖರ ಎಸ್. ; ೧೯೯೨; ಅಂಬೇಡ್ಕರ್ ಮತ್ತು ಗಾಂಧಿ ; ಅಕ್ಷರ ಪ್ರಕಾಶನ, ಹೆಗ್ಗೊಡು, ಸಾಗರ.

೨೪. ಚಂಡಾಳ; ೧೯೯೨; ಕರ್ನಾಟಕ ದಲಿತ ಚಳವಳಿ ಮತ್ತು ಅಂಬೇಡ್ಕರ್ ; ಚೈತ್ರ ಪ್ರಕಾಶನ; ಚಿಕ್ಕ ತಿರುಪತಿ, ಕೋಲಾರ

೨೫. ಚಿದಾನಂದಮೂರ್ತಿ, ಎಂ.,; ೧೯೮೫; ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೬. ಜವರಯ್ಯ; ಮ.ನ.; ೧೯೯೪; ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ; ಸಿದ್ಧಾರ್ಥ ಗ್ರಂಥ ಮಾಲಾ ಕುವೆಂಪು ನಗರ, ಮೈಸೂರು.

೨೭. ಜವರಯ್ಯ ಮ.ನ.; ೧೯೮೯; ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೮. ತರೀಕೆರೆ ರಹಮತ್,; ೧೯೯೫; ಮರದೊಳಗಣ ಕಿಚ್ಚು; ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ತರೀಕೆರೆ ರಹಮತ್; ೧೯೯೩; ಪ್ರತಿ ಸಂಸ್ಕೃತಿ; ಕನ್ನಡ ಸಂಘ, ಕ್ರೈಸ್ತ ಕಾಲೇಜ್, ಬೆಂಗಳೂರು.

೩೦. ತಿಪ್ಪೇರುದ್ರಸ್ವಾಮಿ; ಎಚ್.; ೧೯೭೯; ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ; ಚಾಮುಂಡಿ ಎಂಟರ್ ಪ್ರೈಸಸ್; ಮೈಸೂರು.

೩೧. ನರಹಳ್ಳಿ ಬಾಲಸುಬ್ರಹ್ಮಣ್ಯ; ೧೯೯೮; ಸಾಹಿತ್ಯ ಸಂಸ್ಕೃತಿ; ಅಂಕಿತ ಪುಸ್ತಕ; ಬೆಂಗಳೂರು.

೩೨. ನಾಗಭೂಷಣ ಡಿ.ಎಸ್.; ೧೯೯೦; ಗಮನ ; ಮಲ್ಲಾಡಹಳ್ಳಿ ಸಂವಾದ ಪ್ರಕಾಶನ.

೩೩. ಪುರುಷೋತ್ತಮ ಬಿಳಿಮಲೆ,; ೧೯೮೯; ದಲಿತ ಜಗತ್ತು; ಹೊಸದಿಕ್ಕು ಪ್ರಕಾಶನ, ಬೆಂಗಳೂರು.

೩೪. ಪುರುಷೋತ್ತಮ ಬಿಳಿಮಲೆ; ೧೯೯೦; ಬಂಡಾಯ ದಲಿತ ಸಾಹಿತ್ಯ; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೩೫. ಪುಟ್ಟಯ್ಯ ಬಿ.ಎಂ.; ೧೯೯೭; ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ; (ಡಾಕ್ಟರೇಟ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ- ಅಪ್ರಕಟಿತ)

೩೬. ಪೂಜಾರ. ವ್ಹಿ.ಜಿ.; ೧೯೯೫; ಕನ್ನಡ ಸಾಹಿತ್ಯ ಸಂಬಂಧ; ಚೇತನ ಪ್ರಕಾಶನ, ಗುಲಬರ್ಗಾ.

೩೭. ಪ್ರಭಾಕರ.ಎ.ಎಸ್; ೨೦೦೦; ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು; ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩೮. ಬರಗೂರು ರಾಮಚಂದ್ರಪ್ಪ; (ಪ್ರ.ಸಂ), ೧೯೯೩; ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೯. ಬರಗೂರು ರಾಮಚಂದ್ರಪ್ಪ (ಪ್ರ.ಸಂ) ; ೧೯೯೩; ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೦. ಬರಗೂರು ರಾಮಚಂದ್ರಪ್ಪ (ಪ್ರ.ಸಂ) ೧೯೯೩; ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೧. ಬರಗೂರು ರಾಮಚಂದ್ರಪ್ಪ (ಪ್ರ.ಸಂ) ; ೧೯೯೩; ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೨. ಬರಗೂರು ರಾಮಚಂದ್ರಪ್ಪ; ೧೯೯೧; ಇಣಕು ನೋಟ; ಜನಸ್ನೇಹ ಪ್ರಕಾಶನ; ನಂ. ೩೩೧೨; ರೇಲ್ವೆ ಪ್ಯಾರಲರ್ ರಸ್ತೆ, ವಿಜಯನಗರ, ಬೆಂಗಳೂರು.

೪೩. ಬರಗೂರು ರಾಮಚಂದ್ರಪ್ಪ; ೧೯೮೨; ಬೆಂಕಿ; ಅಜಂತಾ ಸಾಹಿತ್ಯ, ೩೮೩; ೧೦ನೇ ಕ್ರಾಸ್, ಜಯನಗರ, ಬೆಂಗಳೂರು.

೪೪. ಬರಗೂರು ರಾಮಚಂದ್ರಪ್ಪ; ೧೯೯೦; ರಾಜಕೀಯ ಚಿಂತನೆ; ಬಯಲು ಪರಿಷತ್, ಬೆಂಗಳೂರು.

೪೫. ಬರಗೂರು ರಾಮಚಂದ್ರಪ್ಪ; ೧೯೯೧; ಬಂಡಾಯ ಸಾಹಿತ್ಯದ ಮೀಮಾಂಸೆ; ಅನ್ವೇಷಣೆ ಪ್ರಕಾಶನ, ಬೆಂಗಳೂರು.

೪೬. ಬರಗೂರು ರಾಮಚಂದ್ರಪ್ಪ; ೧೯೮೯; ಸಂಸ್ಕೃತಿ ಮತ್ತು ಸೃಜನಶೀಲತೆ; ಸುನಾದ ಪ್ರಕಾಶನ, ಬೆಂಗಳೂರು.

೪೭. ಬರಗೂರು ರಾಮಚಂದ್ರಪ್ಪ; (ಪ್ರ.ಸಂ) ೧೯೯೨; **ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ**; ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೮. ಬರಗೂರು ರಾಮಚಂದ್ರಪ್ಪ; ೧೯೭೭; **ಒಂದು ಊರಿನ ಕತೆ**; ಮಯೂರ ಪ್ರಕಾಶನ; ಬೆಂಗಳೂರು

೪೯. ಬಡಿಗೇರ ವಿ.ಎಸ್.; ೧೯೯೯; **ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ**; ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ; ಅಥಣಿ.

೫೦. ಬಡಿಗೇರ.ವಿ.ಎಸ್.; ೨೦೦೦; **ಕನ್ನಡ ಹಸ್ತಪ್ರತಿಗಳು ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನ**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೫೧. ಬಡಿಗೇರ.ವಿ.ಎಸ್.; ೨೦೦೨; **ಪ್ರಥಮ ಶ್ರೀ ಕಾಳಿ ಪ್ರಶಸ್ತಿ ಪುರಸ್ಕೃತ ಡಾ.ಚಂದ್ರಶೇಖರ ಕಂಬಾರ**; ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆ (ರಿ) ಶಿರಸಿಂಗಿ.

೫೨. ಬಸವರಾಜ ಸಬರದ; ೧೯೯೦; **ಹೊಸದಿಕ್ಕು**; ಪಲ್ಲವಿ ಪ್ರಕಾಶನ, ಬೀದರ.

೫೩. ಬಸವರಾಜ ಸಬರದ; (ಸಂ) ೧೯೯೨; **ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು**; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೪. ಬಸವರಾಜ ಸಬರದ; ೧೯೯೪; **ಸಾಹಿತ್ಯ ಸಂಗಾತಿ**; ಪಲ್ಲವಿ ಪ್ರಕಾಶನ, ಗುಲಬರ್ಗಾ.

೫೫. ಬಲ್ಲಾಳ ವ್ಯಾಸರಾಯ; ೧೯೯೫ **ಬಂಡಾಯ** (ಕಾದಂಬರಿ) ಗೀತಾ ಬುಕ್ ಹೌಸ್ ಮೈಸೂರು.

೫೬. ಬೆಳಗಲಿ.ದು.ನಿ.; (ಅನು) ; ೧೯೯೨; **ಅಕ್ರಮ ಸಂತಾನ (ಕಾದಂಬರಿ)** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೭. ಭಂಡಾರಿ; ಆರ್.ವಿ; ೧೯೮೯; **ಸಮಾಜವಾದಿ ವಾಸ್ತವ**; ರಾಘವೇಂದ್ರ ಪ್ರಕಾಶನ, ಆಂಕೋಲ.

೫೮. ರವಿಕುಮಾರ್.ನ ; (ಸಂ) ; ೧೯೯೪; **ಪರ್ಯಾಯ ಚಿಂತನೆ-ಉಪಭೋಗವಾದ**; ಪ್ರತಿಭಾ ಯುವವೇದಿಕೆ, ನಂ. ೩೨೧೪, ೩ನೇ ಮುಖ್ಯ ರಸ್ತೆ, 'ಸಿ' ವಿಭಾಗ, ರಾಜಾಜಿನಗರ, ಬೆಂಗಳೂರು.

೫೯. ರಾಮಚಂದ್ರನ್ **ಶಿಲ್ಪವಿನ್ಯಾಸ**; ೧೯೮೬ ; ಕನ್ನಡ ಸಂಘ, ಪುತ್ತೂರು.

೬೦. ರೇವಯ್ಯ ಒಡೆಯರ್; ೨೦೦೦; **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣ**; (ಡಾಕ್ಟರೇಟ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧ-ಅಪ್ರಕಟಿತ.)

೬೧. ಲಕ್ಷ್ಮಣ್ ಗಾಯಕ್ವಾಡ್; ೧೯೯೨ **ಉಚಲ್ಯಾ ಆತ್ಮಕಥೆ** ; ನವಕರ್ನಾಟಕ ಪ್ರಕಾಶನ ಬೆಂಗಳೂರು.

೬೨. ಲಕ್ಷ್ಮಣ್ ತೆಲಗಾವಿ. ಪ್ರೊ; ೧೯೯೯; **ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು**; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೬೩. ಲಕ್ಷ್ಮೀನಾರಾಯಣ.ಎಚ್.ಡಿ.; ೧೯೯೬; **ಸಾಮಾಜಿಕ ಸ್ತರ, ವಿನ್ಯಾಸ ಮತ್ತು ಚಲನೆ**; ಗೌರಿ ಪ್ರಕಾಶನ, ಬೆಂಗಳೂರು.

೬೪. ವಸಂತಕುಮಾರ ತಾಳ್ತಂಜೆ ; (ಸಂ) ; ೧೯೯೩; ಜನಪರ ನಿಲುವು; ಕನ್ನಡ ವಿಭಾಗ; ಮುಂಬಾಯಿ ವಿಶ್ವವಿದ್ಯಾಲಯ.

೬೫. ವಿಶ್ವನಾಥ ಕರ್ನಾಡ್ ;೧೯೯೩; ತುಳುವರ ಮುಂಬಾಯಿ ವಲಸೆ ; ೧೯೯೪ ; ಕನ್ನಡ ವಿಭಾಗ ಮುಂಬಾಯಿ ವಿಶ್ವವಿದ್ಯಾಲಯ.

೬೬. ವೀರಭದ್ರಪ್ಪ; ಕಂ; ೧೯೯೦; ಬೇಲಿ ಮತ್ತು ಹೊಲ ಕನ್ನಡ ಮತ್ತು ಸಂಸ್ಕೃತಿ ಇಲಾಖೆ;

೬೭. ವೀರಭದ್ರಪ್ಪ.ಬಿ.ಟಿ, ಶ್ರೀಮತಿ.ಬಿ.ಟಿ. ಜಾಹ್ನವಿ (ಸಂ) ೧೯೯೮; ಮುಟ್ಟಿಸಿಕೊಂಡವರು; (ದಲಿತ ಸಂಸ್ಕೃತಿ ಕೆಲನೋಟಗಳು ಡಾ|| ತಿಪ್ಪೇಸ್ವಾಮಿಯವರ ಒಂದು ನೆನಪು); ಬುಟ್ಟಿ ಪ್ರಕಾಶನ, ದಾವಣಗೇರೆ.

೬೭. ವಿಜಯಲಕ್ಷ್ಮಿ; ೨೦೦೧; ವ್ಯಾಸರಾಯ ಬಲ್ಲಾಳ; ನವಕರ್ನಾಟಕ ಪ್ರಕಾಶನ.

೭೮. ಶರಬೇಂದ್ರಯ್ಯ ಜಿ.ಎಂ.; ೧೯೯೩ ; ಆನಂದ ಮತ್ತು ಅರಿವು; ಮುರುಘರಾಜೇಂದ್ರ ಪ್ರಕಾಶನ, ಮುಸ್ಟೂರು, ಚಿತ್ರದುರ್ಗ ಜಿಲ್ಲೆ.

೬೯. ಶಂಕರ ಡಿ.ಎ.; (ಅನು) ೧೯೮೪; ಅಸ್ಪೃಶ್ಯ (ಕಾದಂಬರಿ)ಗೀತಾ ಬುಕ್ ಹೌಸ್, ಕೆ.ಆರ್.ಸರ್ಕಲ್, ಮೈಸೂರು.

೭೦. ಶಂಸ ಐತಾಳ (ಅನು) ೧೯೮೪; ದುರ್ಬಲ ವರ್ಗದವರಿಗೆ ನುಡಿಯಲ್ಲಿ ನ್ಯಾಯ, ನಡೆಯಲ್ಲಿ ಅನ್ಯಾಯ; ಅಕ್ಷರ ಪ್ರಕಾಶನ, ಸಾಗರ.

೭೧. ಶಿವರಾಮಯ್ಯ; ೧೯೯೩; ಸಾಹಿತ್ಯ ಪರಿಸರ; ವೈಚಾರಿಕ ಪುಸ್ತಕ ಮಾಲೆ ಅನುವನಹಳ್ಳಿ, ಶಿವನಿ, ಚಿಕ್ಕಮಂಗಳೂರು

೭೨. ಶಿವರುದ್ರಪ್ಪ. ಜಿ.ಎಸ್. (ಸಂ) ೧೯೭೭ ; ಸಾಹಿತ್ಯ ಸಾಮಾನ್ಯ ವಾರ್ಷಿಕ ; ಬೆಂ.ವಿ.ವಿ.

೭೩. ಶೇಖರ್, ಎಂ.ಎಸ್; ೧೯೯೭; ಗ್ರಹಿಕೆ; ಚರಿತಾ ಪ್ರಕಾಶನ, ಹಾಸನ.

೭೪. ಶೇಷಗಿರಿರಾವ್ ಎಲ್.ಎಸ್; ೧೯೫೭ ; ಕಾದಂಬರಿ ಸಾಮಾನ್ಯ ಮನುಷ್ಯ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೫. ಸರಜೂ ಕಾಟ್ಕರ್; ೧೯೯೬; ಕನ್ನಡ ಮರಾಠಿ ದಲಿತ ಸಾಹಿತ್ಯ; ವಿಮೋಚನ ಪ್ರಕಾಶನ, ಅಥಣಿ.

೭೬. ಸಿದ್ಧಲಿಂಗಯ್ಯ ; ೧೯೯೦ ; ಹಕ್ಕಿನೋಟ ; ಕಲ್ಯಾಣಿ ಪ್ರಕಾಶನ ಬೆಂಗಳೂರು.

೭೭. ಹನುಮಂತಯ್ಯ, ಎಲ್; ೧೯೯೨; ದಲಿತ ಲೋಕದ ಒಳಗೆ; ಕರ್ನಾಟಕ ದಲಿತಪ್ರಕಾಶನ, ಬೆಂಗಳೂರು.

೭೮. ಹರವೆ ದೇವಯ್ಯ; ೧೯೯೧; ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭೯. ಹಿರೇಮಠ, ಎಸ್.ಎಸ್; ೨೦೦೧; ದಲಿತ ಸಂಸ್ಕೃತಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೦. ಹಿರೇಮಠ, ಎಸ್.ಎಸ್; ೧೯೯೩; ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ (ಭಾಗ-೨) ಜಾತ್ರೆಗಳು; ಸಮತಾ ಪ್ರಕಾಶನ, ಹೊಸಪೇಟೆ.

